ಶ್ರೀಮಾತೆಯ ಬದುಕು ದೂರದ ವೀಣಾ ಧ್ವನಿಯಂತೆ ಸುಮಧುರ, ಸುಪ್ರಶಾಂತ. ಕಿವಿಗೊಟ್ಟು ಆಲಿಸಿದಲ್ಲದೆ ಕೇಳಿಸುವುದೂ ಅಸಂಭವ. ಮನವಿಟ್ಟು ಕೇಳಿದಲ್ಲದೆ ಅದರ ಇಂಪು ಅನುಭವಕ್ಕೆ ಬರುವುದಿಲ್ಲ. ಹೆದ್ದಾರಿಗೆ ದೂರದಲ್ಲಿರುವ ಎಲೆಮರೆಯ ಹೂವಿನ ನರುಗಂಪಿನಂತೆ ಅವಸರದ ಪಯಣಿಕರಿಗೆ ಅದು ಅವೇದ್ಯ. ಅದು ದೈನಂದಿನ ಸಾಂಸಾರಿಕ ಜೀವನದ ಸಕಲ ಲಕ್ಷಣಗಳಿಂದ ಸಮನ್ವಿತವಾಗಿದೆ: ವೈಭವಪೂರ್ಣವಾದರೂ ವಿನಯದೀನ; ಸಾಹಸಪೂರ್ಣವಾದರೂ ನೀರಸ ಸಾಮಾನ್ಯ; ಶ್ರದ್ಧಾಮಹಿಮೆಯಿಂದ ಧೀರವಾದರೂ ಕೌಟುಂಬಿಕ ಕಷ್ಟಕ್ಲೇಶಗಳಿಂದ ದುಃಖಪೂರ್ಣ; ಶತಶತ ಅಪಮಾನ ತಾಡಿತವಾದರೂ ಸರ್ವದಾ ಕ್ಷಮಾಶೀಲ; ಆದಿಶಕ್ತಿಯ ಸರ್ವಶಕ್ತವಾದ ಬೆಂಬಲವಿದ್ದರೂ ಅಬಲದಂತೆ ವ್ಯವಹರಿಸುವ ಸಹಿಷ್ಣು.

**ಕುವೆಂಪು.**

ಬೆಲೆ :

೨ ರೂಪಾಯಿ

ಪ್ರಥಮ ಮುದ್ರಣ—೧೯೪೮

ದ್ವಿತೀಯ ಮುದ್ರಣ—೧೯೫೩



ಪ್ರಕಾಶಕರು : ಶ್ರೀ ಶಾಂಭವಾನಂದ,

ಅಧ್ಯಕ್ಷರು : ಶ್ರೀ ರಾಮಕೃಷ್ಣಾಶ್ರಮ, ಮೈಸೂರು.

ಮುದ್ರಣಕಾರರು :

ಎಂ. ಶಾಮರಾವ್, ಪ್ರೊಪ್ರೈಟರ್,

ಹಿಂದೂಸ್ಥಾನ್ ಬ್ರಾಂಚ್ ಪ್ರೆಸ್, ಶ್ರೀ ಚಾಮುಂಡೇಶ್ವರಿ ಎಲೆಕ್ಟ್ರಿಕ್, ಪ್ರೆಸ್,

ಮೈಸೂರು.



ಶ್ರೀ ಮಹಾಮಾತಾಶ್ರೀ ಶಾರದಾ ದೇವಿಯವರು

" ನಮ್ಮ ಮನೋವಾಕ್ಕಾಯಗಳು ಜಗತ್ತಿನ ಹಿತಕ್ಕಾಗಿಯೇ ಆಗಬೇಕು "

# ಮುನ್ನುಡಿ

ಪುಣ್ಯಕ್ಷೇತ್ರವಾದ ಪ್ರಯಾಗದಲ್ಲಿ ಗಂಗೆ ಯಮುನೆಯರ ಸಂಗಮಕ್ಕೆ ತ್ರಿವೇಣೀ ಎಂಬ ಹೆಸರು ಪ್ರಸಿದ್ಧವಾಗಿದೆ. ಲೋಕಲೋಚನಗಳಿಗೆ ಅಲ್ಲಿ ಗೋಚರವಾಗುವುದು ದ್ವಿವೇಣಿಯೇ ಆದರೂ ಅಲೌಕಸ್ಪರ್ಶಿಯಾದ ಅಂತರ್ ದೃಷ್ಟಿಗೆ ಮತ್ತೊಂದು ಅಧ್ಯಾತ್ಮಿಕವಾದ ತರಂಗಿಣಿಯೂ ವೇದ್ಯ ವಾಗುತ್ತದೆ. ಅದೇ ಅಂತರ್‌ಗಾಮಿಯೂ ಅವ್ಯಕ್ತವೂ ಆಗಿರುವ ಸರಸ್ವತಿ. ಆ ನಿಗೂಢತರಂಗಿಣಿಯ ಅರಿವಾಗದಿದ್ದವರಿಗೆ ಪ್ರಾಯಶಃ ಆ ಕೂಡಲಿ ಎರಡು ಹೊಳೆಗಳು ಸೇರುವ ಕೇವಲ ಒಂದು ಪ್ರಕೃತಿವ್ಯಾಪಾರ ಮಾತ್ರ ವಾಗಿ, ತನ್ನ ಸೌಂದರ್ಯದಿಂದ ಮನೋಹರತ್ವವನ್ನು ಪಡೆಯಬಹು ದಾಗಿದ್ದರೂ ಅಘ ಪರಿಹಾರಕ ತೀರ್ಥವಾಗಿ ಪಾವನತ್ವವನ್ನು ಪಡೆಯು ತ್ತಿರಲಿಲ್ಲ. ಗಂಗೆ ಯಮುನೆಯರ ಲೌಕಿಕವಾದ ಸಂಗಮಕ್ಕೆ ಅವ್ಯಕ್ತವೂ ಅಂತರ್ಗಾಮಿಯೂ ಆದ ಸರಸ್ವತಿಯ ಅಲೌಕಿಕತೆಯೂ ಸಂಗಮವಾಗ ದಿದ್ದರೆ ಯಾವ ನೀರೂ ತೀರ್ಥವಾಗಲಾರದು ಎಂಬ ತತ್ತ್ವಕ್ಕೆ ಪ್ರತಿಮಾ ಸದೃಶವಾಗಿದೆ ತ್ರಿವೇಣೀ ಸಂಗಮ.

ಶ್ರೀರಾಮಕೃಷ್ಣ ಮತ್ತು ವಿವೇಕಾನಂದರು ಗಂಗಾ ಯಮುನಾ ನದಿಗಳಂತೆ ಬಹಿರಂಗವಾಗಿ ಹರಿಯುತ್ತಾ ಜಗಚ್ಚಕ್ಷುಗಳನ್ನು ಆಕರ್ಷಿ ಸುತ್ತಿದ್ದರೆ ಲಜ್ಜಾಪಟಾವೃತಳಾದ ಶ್ರೀಮಾತೆ ಶಾರದಾದೇವಿ ಗುಪ್ತಗಾಮಿನಿ ಯಾದ ಸರಸ್ವತೀ ನದಿಯಂತೆ ಹರಿದು ಶ್ರೀ ಗುರುದೇವ ಮತ್ತು ಸ್ವಾಮಿಜಿ ಯವರ ಜೀವನಲೀಲೆಗೆ ತಮ್ಮ ಗೂಹ್ಯಜೀವನವನ್ನು ಸಮರ್ಪಿಸಿ ಒಂದು ದಿವ್ಯತರವಾದ ತ್ರಿವೇಣೀ ಸಂಗಮವನ್ನು ನಿರ್ಮಿಸಿದ್ದಾರೆ.

ಶ್ರೀ ಮಾತೆಯ ಬದುಕು ದೂರದ ವೀಣಾಧ್ವನಿಯಂತೆ ಸುಮಧುರ, ಸುಪ್ರಶಾಂತ. ಕಿವಿಗೊಟ್ಟು ಆಲಿಸಿದಲ್ಲದೆ ಕೇಳುವುದೂ ಅಸಂಭವ; ಮನಮುಟ್ಟಿ ಕೇಳಿದಲ್ಲದೆ ಅದರ ಇಂಪು ಅನುಭವಕ್ಕೆ ಬರುವುದಿಲ್ಲ. ಹೆದ್ದಾರಿಗೆ ದೂರದಲ್ಲಿರುವ ಎಲೆಯ ಮರೆಯ ಹೂವಿನ ನರುಗಂಪಿನಂತೆ ಅವಸರದ ಪಯಣಿಗರಿಗೆ ಅದು ಅವೇದ್ಯ. ಅದು ದೈನಂದಿನ ಸಾಂಸಾರಿಕ ಜೀವನದ ಸಕಲ ಲಕ್ಷಣಗಳಿಂದ ಸಮನ್ವಿತವಾಗಿದೆ. ವೈಭವ ಪೂರ್ಣವಾದರೂ ವಿನಯ ದೀನ; ಸಾಹಸ ಪೂರ್ಣವಾದುದಾದರೂ ನೀರಸ ಸಾಮಾನ್ಯ; ಶ್ರದ್ಧಾಮಹಿಮೆಯಿಂದ ಧೀರವಾದರೂ ಕೌಟುಂಬಿಕ ಕಷ್ಟಕ್ಲೇಶಗಳಿಂದ

ದುಃಖಪೂರ್ಣ ; ಶತಶತ ಅಪಮಾನ ಅನ್ಯಾಯಗಳಿಂದ ತಾಡಿತವಾದರೂ ಸರ್ವದಾ ಕ್ಷಮಾಶೀಲ; ಆದಿಶಕ್ತಿಯ ಸರ್ವಶಕ್ತವಾದ ಬೆಂಬಲವಿಗ್ದರೂ ಅಬಲದಂತೆ ವ್ಯವಹರಿಸುವ ಸಹಿಷ್ಣು. ಅಂತಹ ಬದುಕನ್ನು ಕುರಿತು ಉಪನ್ಯಾಸಮಾಡುವುದಿರಲಿ ಗಟ್ಟಿಯಾಗಿ ಮಾತನಾಡಿದರೂ ಅದಕ್ಕೆ ಅಪಚಾರಮಾಡಿದಂತಾಗುತ್ತದೆ. ಇನ್ನು ಜೀವನ ಚರಿತ್ರೆಯನ್ನು ಬರೆಯು ವುದೆಂದರೆ........!

ಇದ್ದದ್ದರಲ್ಲಿ ಹಾಗೆಮಾಡುವುದೇ ಅತ್ಯಂತ ಕಡಿಮೆಯ ಅಪಚಾರ ವೆಂದು ತೋರುತ್ತದೆ. ಏಕೆಂದರೆ ಜೀವನ ಚರಿತ್ರೆಯಲ್ಲಿ ನಾವು ಹೇಳುವು ದನ್ನೆಲ್ಲ ಹೇಳಿಬಿಡಬಹುದು; ಸ್ವಲ್ಪ ದೀರ್ಘವಾದರೂ ಚಿಂತೆಯಿಲ್ಲವೆಂದು ವಿವರಿಸಲೂಬಹುದು; ಇತರರಿಗೆ ಅಲ್ಪ, ನೀರಸ, ಅರ್ಥಹೀನ ಎಂದು ತೋರುವ ಘಟನೆಗಳನ್ನೂ ನಮಗೆ ತೋರುವಂತೆ ಅನಲ್ಪ, ಸರಸ, ಅರ್ಥ ಪೂರ್ಣವೆಂದು ಸಮರ್ಥಿಸಲೂ ಬಹುದು. ಪುಸ್ತಕ ಓದುವವರಮೇಲೆ ಲೇಖಕನದು ಏನೂ ಬಲಾತ್ಕಾರವಿರುವುದಿಲ್ಲ. ಅವನಿಗೆ ಸ್ವಾರಸ್ಯವಾಗಿ ಕಂಡರೆ ಹಾಳೆ ಮಗುಚುತ್ತಾನೆ; ಹಾಗೆ ಕಾಣಲಿಲ್ಲ ಮುಚ್ಚುತ್ತಾನೆ. ಅವನ ತಿರಸ್ಕಾರದ ಕಿರುನಗೆ ತನ್ನ ಕೊಂಕಿನಿಂದ ಲೇಖಕನನ್ನು ಇರಿಯು ವುದಿಲ್ಲ. ವಾಚಕನ ಧಿಕ್ಕಾರದ ಕೋರೆಯ ವ್ಯಾಘಾತದಿಂದ ದೂರವಾಗಿ ಲೇಖಕ ಸಂಪೂರ್ಣವಾಗಿ ಸುರಕ್ಷಿತ. 'ಯಾರಿಗೆ ಲಭ್ಯವಲ್ಲವೋ ಅವರಿಗೆ ಲಭ್ಯವಿಲ್ಲ'—ಎಂಬ ಸ್ವರ್ಣಾಕ್ಷರಗಳು ಲೇಖಕನ ಗುರಾಣಿಯಮೇಲೆ ಥಳಥಳಿಸುವಂತೆ ಖಚಿತವಾಗಿ ಧಿಕ್ಕಾರದ ಬದ್ಧಭ್ರುಕುಟಿಯನ್ನು ಭಂಗಿಸಿ ಉಪಕಾರಮಾಡುತ್ತವೆ!

ಶ್ರೀರಾಮಕೃಷ್ಣ ಪರಮಹಂಸರ ಬದುಕು ಈಶ್ವರಪರವಾದ ವ್ಯಾಕುಲತೆ, ಸಾಧನೆ, ಸಿದ್ಧಿ ಇತ್ಯಾದಿ ವೈಭವಗಳಿಂದ ಸಾಹಸಪೂರ್ಣವಾಗಿ ಲೇಖನಿಯ ಓಜಸ್ಸನ್ನು ಮೆರೆಯಲು ಸಹಕಾರಿಯಾಗುತ್ತದೆ. ಸ್ವಾಮಿ ವಿವೇಕಾನಂದರ ಜೀವಿತವಾದರೊ ಪರಮಹಂಸರ ಆಧ್ಯಾತ್ಮಿಕ ಸಂಪತ್ತನ್ನು ಹೊತ್ತು ಜನಾಂಗ ಜನಾಂಗಗಳಿಗೂ ದೇಶವಿದೇಶಗಳಿಗೂ ಅದನ್ನು ವರ್ಣಮಯ ವಾಗಿ ಉಜ್ವಲವಾಗಿ ಸೋತ್ಸವವಾಗಿ ವಿತರಣಮಾಡುವ ಒಂದು ಪೌರಾ ಣಿಕವಾದ ಅದ್ಭುತಕಾಂತಿಯಿಂದ ಶೋಭಾಯಮಾನವಾಗಿ ಎಂತಹ ಹೆಳವ ಲೇಖಣಿಗೂ ಗರುಡರೆಕ್ಕೆ ಮೂಡಿಸುವನಿತು ಸಂಪದ್ಯುಕ್ತವಾಗಿದೆ. ಶ್ರೀ ಮಾತೆಯ ಬದುಕಿನಲ್ಲಿ ಮೊದಲನೆಯದರ ವೈಭವವಾಗಲಿ ಎರಡನೆ ಯದರ ಉಜ್ವಲತೆಯಾಗಲಿ ಎದ್ದುಕಾಣಿಸುವುದಿಲ್ಲ. "ಅಯ್ಯೋ! ಇಲ್ಲೇನಿದೆ?" ಎಂಬನಿತು ಸಾಮಾನ್ಯವಾಗಿ ತೋರುತ್ತದೆ.

ಪರಮಹಂಸರು ಅಮರ್ತ್ಯದ ದಿವ್ಯನದಿಯನ್ನು ಮರ್ತ್ಯಕ್ಕಿಳಿತಂದರು. ಆ ತ್ರಿಪಥೆಗೆ ಭವ್ಯವಾದ ಅಣೆಕಟ್ಟು ಕಟ್ಟಿ, ಕಾಲುವೆಗಳನ್ನು ತೆಗೆದು, ಲೋಕದಮೇಲೆಲ್ಲಾ ಅದರ ಅಮೃತವಾರಿಯನ್ನು ಹರಿಯಬಿಟ್ಟು, ಅದರ ಲಾಲನಪಾಲನಾದಿಗಳ ಸುವ್ಯವಸ್ಥೆಗಾಗಿ ಕ್ರಮಬದ್ಧವಾದ ವಿಶ್ವಸಂಸ್ಥೆಯೊಂದನ್ನು ನಿರ್ಮಿಸಿ, ಲೋಕನೇತ್ರಗಳನ್ನು ಸೆಳೆಯುವಂತೆ ದೀಪಾಕ್ಷರೋಜ್ವಲವಾದ ನಾಮಾಂಕಿತದಿಂದ ಅದನ್ನು ಅಲಂಕರಿಸಿ, ಅದನ್ನೂ ಜಗನ್ಮಾನ್ಯವನ್ನಾಗಿ ಮಾಡಿ ತಾವೂ ಜಗದ್ವಿಖ್ಯಾತರಾದರು ಶ್ರೀ ವಿವೇಕಾನಂದರು. ಆದರೆ ಶ್ರೀಮಾತೆ? ಸೂರ್ಯಚಂದ್ರರ ಮುಂದೆ ಬಹುದೂರದ ಕಿರುತಾರಗೆಯಂತೆ 'ಅರಿಯೆನು ನಾನೆಲೆ ನೀನಾರೊ' ಎಂಬ ಪ್ರಶ್ನೆಗೂ ಪಾತ್ರರಾಗುತ್ತಾರೆ. ಆದರೂ ವೈಜ್ಞಾನಿಕನ ದೂರದರ್ಶಕ ಯಂತ್ರದ ನಿರ್ದಾಕ್ಷಿಣ್ಯವೂ ನಿಷ್ಪಕ್ಷಪಾತವೂ ಸೂಕ್ಷ್ಮತಮವೂ ಆದ ಸಮೀಕ್ಷೆಗೆ ಸಿಲುಕಿದಾದ ಕಿರುತಾರಗೆಯೆ ಸೂರ್ಯಚಂದ್ರರಿಗೂ ಸಾವಿರಮಡಿ ಹಿರಿದಾಗುವ ಭವ್ಯತರ ಸತ್ಯ ಹೊರಬೀಳದೇನು? ಪರಮಹಂಸರು ಗಂಗೆಯನ್ನು ತಂದೂ ವಿವೇಕಾನಂದರು ಅದಕ್ಕೆ ಕಟ್ಟೆಯನ್ನು ಕಟ್ಟಿ ಕಾಲುವೆ ತೆಗೆದು ಅದನ್ನು ಭೂಮಿಯ ಮೇಲೆಲ್ಲಾ ಹರಿಸಿಯೂ ಲೋಕದ ಕಣ್ಣಿಗೆ ಬೀಳುತ್ತಿದ್ದಾರೆ. ಆದರೆ ಶ್ರೀಮಾತೆ ದೂರದೂರದ ಹಳ್ಳಿಗಳಲ್ಲಿ, ಗದ್ದೆಗಳಲ್ಲಿ ದಿನದಿನವೂ ಬೇಸರದೆ ಕೃಷಿಮಾಡುವ ಅಜ್ಞಾನ ರೈತನಂತೆ ಯಾರ ಕಣ್ಣಿಗೂ ಬೀಳದಿದ್ದರೂ ಪರಮಹಂಸರ ಮತ್ತು ವಿವೇಕಾನಂದರ ಗೆಯ್ಮೆಯ ಫಲಸ್ವರೂಪರಾಗಿ ನಮ್ಮ ಧ್ಯಾನದೃಷ್ಟಿಗೆ ಗೋಚರಿಸುತ್ತಾರೆ. ಪರಮಹಂಸರ ವ್ಯವಹಾರ ವಿಶೇಷವಾಗಿ ಅಧ್ಯಾತ್ಮ ಭೂಮಿಕೆಯಲ್ಲಿತ್ತು; ಶ್ರೀ ವಿವೇಕಾನಂದರದು ಜಗದ್ವಿಸ್ತಾರವಾದ ಪ್ರಸಾರ ಭೂಮಿಕೆಯಲ್ಲಿತ್ತು; ಶ್ರೀಮಾತೆಯ ವ್ಯವಹಾರವಾದರೊ ಅವೆರಡಕ್ಕಿಂತ ಹೆಚ್ಚಿನ ತಾಳ್ಮೆಯನ್ನೂ ಪಡಿಬಯಸದ ದುಡಿಮೆಯನ್ನೂ ಕೋರುವ, ದೈನ್ಯ ದಾರಿದ್ರ್ಯ ನೈರಾಶ್ಯ ಮೌಢ್ಯ ಮೂರ್ಖತ್ವ ಮಾತ್ಸರ್ಯ ಈರ್ಷ್ಯೆ ಅಸೂಯೆ ಶಠತ್ವ ಜಡತ್ವಾದಿ ನಾನಾ ತಮೋರಜೋಗುಣಗಳಿಂದ ಕಂಟಕಿತವಾದ ದೈನಂದಿನ ಭೂಮಿಕೆಯಲ್ಲಿ ಭಗವದ್‌ರೀತಿಯಾದ ಸಾಮಾನ್ಯತಾಪಥದಲ್ಲಿ ಬಹುದೀರ್ಘಕಾಲ ಯಾತ್ರಿಯಾಗಬೇಕಾಯಿತು. ಶ್ರೀರಾಮಾಯಣದಲ್ಲಿ ಚಿತ್ರಿತವಾಗಿರುವ ಅಥವಾ ಆಗದಿರುವ ಊರ್ಮಿಳಾದೇವಿಯ ಕ್ರಿಯೆಯಿಲ್ಲದ ಅನಂತ ನಿರೀಕ್ಷೆಯ ತಪಸ್ಯೆಯಂತೆ ಶ್ರೀಮಾತೆಯ ತಪಸ್ಯೆ ಅಮಂದಹೃದಯರ ಪೂಜೆಗೌರವಗಳನ್ನು ಸೂರೆಗೊಳ್ಳುತ್ತದೆ.

ಮೇಲೆ ವರ್ಣಿತವಾಗಿರುವುದನ್ನು ನೋಡಿ ಯಾರಾದರೂ ಶ್ರೀಮಾತೆಯನ್ನು ಕುರಿತು ಹೀಗೆಂದುಕೊಳ್ಳಬಹುದು : 'ಅಂತಹ ಹೆಂಗಸರು ಭರತ ಖಂಡದಲ್ಲಿ ಸಾವಿರಾರು ಜನರಿದ್ದಾರೆ. ಅವರಿಗಿಂತಲೂ ಹೆಚ್ಚಿನ ಕಷ್ಟ ಕ್ಲೇಶಗಳಿಗೆ ಸಿಕ್ಕಿದವರೂ ಇದ್ದಾರೆ. ಆದ್ದರಿಂದ ಅವರಲ್ಲಿ ಏನೂ ಅಂತಹ ವಿಶೇಷತೆ ಇಲ್ಲ. ಪರಮಹಂಸರ ಪತ್ನಿಯಾದುದರಿಂದಲೂ ಲೋಕಕ್ಕೆ ಅವರ ಹೆಸರು ಮಾನ್ಯವಾಯಿತು. ಶಿಷ್ಯರು ತಮ್ಮ ಆರಾಧನಾ ವಸ್ತುವಿನ ಹಿರಿಮೆಯನ್ನು ಬೃಹತ್ತಾಗಿ ಚಿತ್ರಿಸುವ ಉದ್ದೇಶದಿಂದ ಅಲ್ಪವನ್ನೂ ಭೂಮವನ್ನಾಗಿ ಪರಿಗಣಿಸಿ ವಿಕ್ಷೇಪಿಸಿದ್ದಾರೆ.'

ಯಾರಲ್ಲಿಯಾದರೂ ಈ ಭಾವನೆ ಮೂಡಿದ್ದರೆ ಅದು ಸರ್ವಥಾ ತಪ್ಪು. ಲೀಲಾಸ್ಥಿತಿಯಲ್ಲಿ ಶ್ರೀಮಾತೆ ಅತಿ ಸಾಮಾನ್ಯೆಯಂತೆ ವರ್ತಿಸುತ್ತಿದ್ದರೂ ಆಗಾಗ ಅವರ ನಿತ್ಯಸ್ಥಿತಿಯ ಮಿಂಚು ಹೊರಹೊಮ್ಮಿ, ಅದನ್ನು ಅನುಭವಿಸಿದವರಿಗೆ ವಿಶ್ವರೂಪದರ್ಶನವಾದ ಅರ್ಜುನನಿಗೆ ಆದ ವ್ಯವಸ್ಥೆಯಾಗುತ್ತಿತ್ತು. ತಮ್ಮೆದುರಿಗೆ ಕಾಲುಚಾಚಿ ಕುಳಿತಿರುವ ಈ ಮುದಿ ಎಲುಬುಗೂಡಿನ ಅಜ್ಜಿ ಆದಿಶಕ್ತಿಸ್ವರೂಪಿಣಿಯಾದ ಜಗನ್ಮಾತೆಯೆಂದು ನಂಬುವುದು ಮಾನುಷ್ಯವಾದ ವಿಚಾರಬುದ್ಧಿಗೆ ಹೇಗೆ ತಾನೆ ಸಾಧ್ಯ ?

ಒಮ್ಮೆ ಸಂವಾದ ಮಧ್ಯೆ ಶ್ರೀಮಾತೆ ಹೀಗೆಂದರಂತೆ :

"ಈಶ್ವರ ಸಾಕ್ಷಾತ್ಕಾರ ? ಭಗವದ್ ದರ್ಶನ ? ಅದು ನನಗೆ ಅಂಗೈ ಮೇಲಣ ನೆಲ್ಲಿಕಾಯಿ. ಬೇಕೆಂದಾಗ ಪಡೆಯಬಹುದು........ನನ್ನನ್ನು ನಿನ್ನ ಬಂಧುಮಾತ್ರಳೆಂದು ಭಾವಿಸಬೇಡ. ಯಾವಾಗ ಮನಸ್ಸು ಬಂದರೆ ಆವಾಗ ಈ ದೇಹ ಪರಿತ್ಯಾಗಮಾಡಬಲ್ಲೆನು........ನಾನು ಬದುಕಿರುವ ವರೆಗೂ ಯಾರೂ ನನ್ನ ಸ್ವಸ್ವರೂಪವನ್ನು ಅರಿಯಲು ಸಮರ್ಥರಾಗುವುದಿಲ್ಲ."

"ಶ್ರೀರಾಮಕೃಷ್ಣರು ನನ್ನನ್ನು ಬಿಟ್ಟುಹೋಗಿರುವುದೇತಕ್ಕೆ ? ಭಗವತ್‌ತತ್ತ್ವದ ಮಾತೃಸ್ವರೂಪವನ್ನು ಜಗತ್ತಿಗೆ ಮೆರೆಯುವುದಕ್ಕೆ."

ಒಮ್ಮೆ ಸನ್ಯಾಸಿ ಶಿಷ್ಯರಲ್ಲೊಬ್ಬನು, "ತಾಯಿ, ನಿಮ್ಮನ್ನು ಸಂದರ್ಶಿಸಿದ ತರುವಾಯ ಜನರು ಇತರ ದೇವತೆಗಳನ್ನು ಪೂಜಿಸುವುದಿಲ್ಲ!" ಎಂದಾಗ ಶ್ರೀಮಾತೆ, "ಏಕೆ ಪೂಜಿಸಬಾರದು ? ಆ ದೇವತೆಗಳೆಲ್ಲರೂ ನನ್ನ ಅಂಶಗಳೆ" ಎಂದರಂತೆ.

ಇನ್ನೊಮ್ಮೆ ಶಿಷ್ಯನೊಬ್ಬನು ಕೇಳಿದನಂತೆ :

"ನಾವು ಪೂಜಿಸುವ ಈ ಚಿತ್ರದಲ್ಲಿ ಶ್ರೀಗುರು ನಿಜವಾಗಿಯೂ ಇದ್ದಾರೆಯೆ ? "

ಶ್ರೀಮಾತೆ ಹೇಳಿದರು :

" ನಿಶ್ಚಯ. ಅದರಲ್ಲಿ ಸಂದೇಹವುಂಟೆ? ಇದ್ದೇ ಇದ್ದಾರೆ. ಕಾಯ ಛಾಯೆ ಎರಡೂ ಒಂದೆ. ಅವರ ಭಾವಚಿತ್ರ ಅವರ ಛಾಯೆಯಲ್ಲದೆ ಮತ್ತೇನು ? "

ಶಿಷ್ಯ " ಹಾಗಾದರೆ ಅವರ ಎಲ್ಲಾ ಚಿತ್ರಗಳಲ್ಲಿಯೂ ಅವರು ಇರುತ್ತಾರೆಯೇ ? "

ಶ್ರೀಮಾತೆ : " ಹೌದು. ಯಾವ ಚಿತ್ರದ ಮುಂದೆ ನೀನು ನಿತ್ಯವೂ ಪ್ರಾರ್ಥಿಸುತ್ತೀಯೊ ಆ ಚಿತ್ರದಲ್ಲಿ ಅಭಿವ್ಯಕ್ತವಾಗುತ್ತಾರೆ. ಅಂತಹ ಚಿತ್ರವಿರುವ ಸ್ಥಳವೇ ಮಂದಿರವಾಗುತ್ತದೆ. ನೋಡು ಓ ಆ ಬಯಲಿದೆ ಯಲ್ಲಾ ಅಲ್ಲಿ ಯಾರಾದರೂ ಪೂಜಿಸಿದರೆ ಆ ಸ್ಥಳ ಅವರ ಸಾನ್ನಿಧ್ಯ ಭಾವ ದಿಂದ ತುಂಬುತ್ತದೆ."

ಶಿಷ್ಯ : " ಹಾಗೆ ಎಲ್ಲಾ ಸ್ಥಳಗಳಿಗೂ ಒಳ್ಳೆಯ ಅಥವಾ ಕೆಟ್ಟ ಸ್ಮೃತಿ ಸಂಗವಿದ್ದೇ ಇರುತ್ತದೆ."

ಶ್ರೀಮಾತೆ : " ಹಾಗಲ್ಲ. ಅಂತಹ ಸ್ಥಳ ಶ್ರೀಗುರುವಿನ ವಿಶೇಷ ಕೃಪಾಕಟಾಕ್ಷಕ್ಕೆ ಪಾತ್ರವಾಗಿ ಅಲ್ಲಿ ಅವರ ವಿಭೂತಿ ವಿಶೇಷವಾಗಿ ವ್ಯಕ್ತವಾಗುತ್ತದೆ."

ಶಿಷ್ಯ : " ಶ್ರೀಗುರು ನೀವು ನೈವೇದ್ಯಮಾಡುವುದನ್ನೆಲ್ಲ ನಿಜ ವಾಗಿಯೂ ತಿನ್ನುತ್ತಾರೆಯೆ ? "

ಶ್ರೀಮಾತೆ: " ಆದರೆ ನಮಗೆ ಅವರು ತಿನ್ನುವ ಕುರುಹು ಯಾವುದೂ ಗೋಚರವಾಗುವುದಿಲ್ಲವಲ್ಲಾ ! "

ಶ್ರೀಮಾತೆ : " ಅವರ ಕಣ್ಣಿನಿಂದ ಒಂದು ಕಾಂತಿಜಿಹ್ವೆ ಹೊಮ್ಮಿ ನೈವೇದ್ಯವನ್ನೆಲ್ಲ ನೆಕ್ಕುತ್ತದೆ. ಯಾಕೆ ? ಅವರಿಗೇನು ಹಸಿವಾಗುತ್ತದೆಯೆ? ಭಕ್ತರಿಗಾಗಿ ನೈವೇದ್ಯ ಸ್ವೀಕಾರಮಾಡುತ್ತಾರೆ ಅಷ್ಟೆ. ಹಾಗೆ ನಿವೇದಿಸಿದ ಆಹಾರ ಪ್ರಸಾದವಾಗುತ್ತದೆ. ಪ್ರಸಾದ ಸ್ವೀಕಾರ ಮಾಡುವುದರಿಂದ ಹೃದಯ ಪರಿಶುದ್ಧವಾಗುತ್ತದೆ. ನಿವೇದಿಸದೆ ತಿನ್ನುವ ಆಹಾರದಿಂದ ಮನಸ್ಸು ಅಶುದ್ಧವಾಗುತ್ತದೆ."

ಶಿಷ್ಯ : " ಶ್ರೀಗುರು ನಿಜವಾಗಿಯೂ ನೈವೇದ್ಯವನ್ನು ತಿನ್ನು ತ್ತಾರೆಯೇ."

ಶ್ರೀಮಾತೆ : ಹೌದು. ತಿನ್ನುತ್ತಾರೆ ಇಲ್ಲ ಎನ್ನುವುದು ನನಗೇನು ಕಾಣುವುದಿಲ್ಲವೆ? ಎಡೆ ಇರುವ ಎಲೆಯ ಮುಂದೆ ಮಣೆಯಮೇಲೆ ಕೂತು ಕೊಂಡು ಊಟಮಾಡುತ್ತಾರೆ!"

ಶಿಷ್ಯ . " ಹಾಗೆ ನಿಮ್ಮ ಕಣ್ಣಿಗೇ ಕಾಣಿಸುತ್ತದೆಯೇ ?"

ಶ್ರೀಮಾತೆ : " ಹೌದು. ಕೆಲವು ನೈವೇದ್ಯಗಳನ್ನು ಅವರು ಯಥಾರ್ಥವಾಗಿ ಭಕ್ಷಿಸುತ್ತಾರೆ. ಇನ್ನು ಕೆಲವನ್ನು ದೃಷ್ಟಿಯಿಂದ ಭೋಗಿಸುತ್ತಾರೆ. ನೀನಾದರೂ ಹಾಗೆ ಅಲ್ಲವೆ? ಎಲ್ಲ ಸಮಯಗಳಲ್ಲಿ ಎಲ್ಲ ಪದಾರ್ಥಗಳನ್ನೂ ಇಷ್ಟಪಡುವುದಿಲ್ಲ. ಮತ್ತೂ ಕಂಡಕಂಡವರು ಕೊಟ್ಟದ್ದನ್ನೆಲ್ಲ ತಿನ್ನುವುದಿಲ್ಲ. ಅದರಂತೆಯೆ ಅವರೂ. ಎಂತೊ ಅಂತರ್ ಭಾವ ಅಂತೆ ಭಕ್ತಿ. ಯಾವುದಕ್ಕೂ ಭಕ್ತಿ ಮುಖ್ಯ."

ಶ್ರೀಮಾತೆಯ ಸ್ವಸ್ವರೂಪದ ವಿಚಾರವಾಗಿ ಅವರ ಬಾಯಿಂದಲೇ ಹೊಮ್ಮಿದ ಈ ಸಂವಾದಭಾಗವನ್ನು ಗಮನಿಸಿದರೆ ಅತ್ಯಾಶ್ಚರ್ಯಕರವಾಗುತ್ತದೆ.

ಶಿಷ್ಯ: " ಅಮ್ಮ , ಜನರು ಹೇಳುತ್ತಾರೆ: ಶ್ರೀಗುರು ಪರಮೇಶ್ವರನೇ ಎಂದು. ನಿಮ್ಮ ಅಭಿಪ್ರಾಯವೇನು ? ''

ಶ್ರೀಮಾತೆ: " ಹೌದು. ಅವರು 'ನನಗೆ' ಪರಮೇಶ್ವರ."

'ನನಗೆ' ಎಂದು ಒತ್ತಿ ಹೇಳಿದ್ದನ್ನು ಗಮನಿಸಿ ಶಿಷ್ಯನೆಂದನು : " ಅದು ನಿಜ; ಪ್ರತಿಯೊಬ್ಬ ಸತಿಗೂ ಪತಿ ಪರದೈವ. ಆ ಅರ್ಥದಲ್ಲಿ ನಾನು ಪ್ರಶ್ನೆ ಕೇಳುತ್ತಿಲ್ಲ."

ಶ್ರೀಮಾತೆ : " ಹೌದು. ಅವರು ನನಗೆ ಪತಿಯಂತೆಯೂ ಪರಮಪುರುಷೋತ್ತಮ ಮತ್ತು ಪರಮೇಶ್ವರ. ಹಾಗೆಯೇ ವಿಶ್ವಸಾಮಾನ್ಯಕ್ಕೂ ಪರಮಪುರುಷೋತ್ತಮ ಮತ್ತು ಪರಮೇಶ್ವರ."

ಆ ಮಾತನ್ನು ಕೇಳಿ ಶಿಷ್ಯನು ಬೆಕ್ಕಸಪಟ್ಟು ಆಲೋಚಿಸುತ್ತಾನೆ : 'ಶ್ರೀರಾಮಕೃಷ್ಣರು ಸಾಕ್ಷಾತ್ ಪರಮೇಶ್ವರನಾದರೆ ಇವರು (ಶ್ರೀಮಾತೆ) ಯಾರಾಗಿರಬೇಕು ? ಸಾಕ್ಷಾತ್ ಆದಿಶಕ್ತಿ ಜಗನ್ಮಾತೆಯಾಗಿರಬೇಕಲ್ಲವೆ ! ಸೀತಾರಾಮರಿಗೂ ರಾಧಾಕೃಷ್ಣರಿಗೂ ಇರುವ ಅಭೇದ ಸಂಬಂಧದಂತೆ ಇವರಿಗೂ ಶ್ರೀಗುರುವಿಗೂ ಅಭೇದ ಭಾವವಿರಬೇಲ್ಲಕವೆ ! '

ಹಾಗೆ ಆಲೋಚಿಸಿ ಶಿಷ್ಯ ಮತ್ತೆ ಕೇಳುತ್ತಾನೆ: " ಹಾಗಾದರೆ ನಾನೇಕೆ ನಿಮ್ಮನ್ನು ಸಾಮಾನ್ಯ ಸ್ತ್ರೀಯಂತೆ ಈ ರೊಟ್ಟಿ ಬೇಯುಸುತ್ತಿರುವ ಕೆಲಸದಲ್ಲಿ ಕಾಣುತ್ತಿದ್ದೇನೆ ? "

ಶ್ರೀಮಾತೆ : " ಮಾಯೆಯಲ್ಲವೆ, ಮಗು ! ಇಲ್ಲದಿದ್ದರೆ ನೀನೆನ್ನುವಂತೆ ನಾನೇಕೆ ಈ ಸ್ಥಿತಿಗಿಳಿಯಬೇಕು. ಆದರೆ ದೇವರಿಗೆ ನರಲೀಲೆಯಲ್ಲಿ ಇಷ್ಟ. ಶ್ರೀಕೃಷ್ಣ ದನಕಾಯುವವನಿಗೆ ಕಂದನಾಗಿ ಬರಲಿಲ್ಲವೆ ? ಶ್ರೀರಾಮ ದಶರಥನಿಗೆ ಮಗನಾಗಿ ಬರಲಿಲ್ಲವೆ ? "

ಶಿಷ್ಯ: " ನಿಮಗೆ ಯಾವಾಗಲಾದರೂ ನಿಮ್ಮ ನಿಜಸ್ವರೂಪಜ್ಞಾನ ಉಂಟಾಗುತ್ತದೆಯೆ ? "

ಶ್ರೀಮಾತೆ: " ಹೌದು, ಆಗಾಗ್ಗೆ ಉಂಟಾಗುತ್ತದೆ. ಅಂತಹ ಸಮಯಗಳಲ್ಲಿ ನಾನು, ' ಇದೇನು ನಾನಿಲ್ಲಿ ಮಾಡುತ್ತಿರುವುದು ? ' ಎಂದುಕೊಳ್ಳುತ್ತೇನೆ. ಒಡನೆಯೆ ಈ ಮನೆ ಮಕ್ಕಳು ಎಲ್ಲವನ್ನೂ ನೆನಪಿಗೆ ತಂದುಕೊಂಡು ನನ್ನ ನಿಜಸ್ವರೂಪದ ಮೇಲೆ ತೆರೆಬೀಸಿ ಮುಚ್ಚಿ ಆದನ್ನು ಮರೆಯುತ್ತೇನೆ."

ಶಿಷ್ಯ: " ಹಾಗಾದರೆ ನೀವು ಸರ್ವಲೋಕಮಾತೆಯೆ ? "

ಶ್ರೀಮಾತೆ: " ಹೌದು."

ಶಿಷ್ಯ: " ಕ್ರಿಮಿಕೀಟ ಪಶುಪಕ್ಷಿ ಪ್ರಾಣಿ ಮನುಷ್ಯ ಎಲ್ಲರಿಗೂ ? "

ಶ್ರೀಮಾತೆ: " ಹೌದು, ಎಲ್ಲರಿಗೂ ತಾಯಿ "

ಶಿಷ್ಯ: "ಹಾಗಾದರೆ ಅವುಗಳಿಗೆಲ್ಲ ಇಷ್ಟೊಂದು ಕ್ಲೇಶಕಷ್ಟಗಳೇಕೆ?"

ಶ್ರೀಮಾತೆ: " ಈ ಜನ್ಮದಲ್ಲಿ ಅವಕ್ಕೆ ಈ ಅನುಭವಗಳಾಗಲೇಬೇಕು."

ಮೇಲಿನ ಸಂವಾದಗಳು ಶ್ರೀಮಾತೆಯ ಅಲೌಕಿಕ ಪಕ್ಷಕ್ಕೆ ಕೊರೆದ ಅತೀಂದ್ರಿಯ ಗವಾಕ್ಷಗಳಂತಿವೆ. ಅವುಗಳನ್ನು ಆಲಿಸಿದರೆ ಎಂತಹ ಶ್ರದ್ಧಾಳುವಿಗೂ ವಿಚಾರಬುದ್ಧಿ ತತ್ತರಿಸದಿರುವುದಿಲ್ಲ. ಶ್ರೀಮಾತೆ ಸಾಮಾನ್ಯೆಯಂತೆ ತೋರಿದರೂ ಅತ್ಯಂತ ಅಸಾಧಾರಣೆಯಾಗಿರುವುದರಿಂದಲೆ ಬರಿಯ ವಿಚಾರಮಾತ್ರ ಸುಲಭರಲ್ಲ.

" ಅಲೋಕಸಾಮಾನ್ಯಮಚಿಂತ್ಯ ಹೇತುಕಂ
ದ್ವಿಷಂತಿ ಮಂದಾಶ್ಚರಿತಂ ಮಹಾತ್ಮನಂ."

ಇಂತಹ ನೀರವ ಧ್ಯಾನಮಯ ಶ್ವೇತಶಿಲಾತಪಸ್ವಿನಿಯ ಅಸಾಮಾನ್ಯ ಸಾಮಾನ್ಯ ಚರಿತ್ರೆಯನ್ನು ಸ್ವಾಮಿ ಸೋಮನಾಥಾನಂದರು ಕನ್ನಡದಲ್ಲಿ ಬರೆದಿದ್ದಾರೆ. ಇಂಗ್ಲೀಷು ಮತ್ತು ಬಂಗಾಳಿ ಭಾಷೆಗಳಲ್ಲಿ ವಿಸ್ತಾರವಾಗಿ ವಿವರವಾಗಿ ಕೂಲಂಕಷವಾಗಿ ಚಿತ್ರಿತವಾಗಿರುವುದನ್ನು ಇಲ್ಲಿ ಸಂಗ್ರಹವಾಗಿ ಕೊಟ್ಟಿದ್ದಾರೆ. ಬರವಣಿಗೆಯ ರೀತಿಯಲ್ಲಿ ಮತ್ತು ಉದ್ದೇಶದಲ್ಲಿ ಅವರು ಸಾಮಾನ್ಯರನ್ನೆ ಲಕ್ಷ್ಯವಾಗಿಟ್ಟುಕೊಂಡು, ಅಂತಹರ ಲೋಕಧರ್ಮನಿಷ್ಠವಾದ ದೃಷ್ಟಿ ಮತ್ತು ಅಭಿರುಚಿಗಳಿಗೆ ಹಿಡಿಸುವಂತೆ, ಹೊಂದಿಕೊಳ್ಳುವಂತೆ, ಪ್ರಯತ್ನಿಸುತ್ತಿದ್ದಾರೆ. ಆ ಪ್ರಯತ್ನ ಅವರ ಈ ಕೃತಿಯಲ್ಲಿ ನಿಜವಾಗಿಯೂ ಸಫಲವಾಗುತ್ತದೆ ಎಂಬುದು ಈ ಮುನ್ನುಡಿಕಾರರ ಧೈರ್ಯ.

ನಮ್ಮ ಪ್ರಾರ್ಥನೆಗೆ ಶ್ರೀಮಾತೆ ಕಿವಿಗೊಡಲಿ. ಲೀಲಾಮಯಿಯಾದ ಜಗಜ್ಜನನಿ ನಮ್ಮೆಲ್ಲರ್ನೂ ಆಶೀರ್ವದಿಸಲಿ:

"ಪ್ರಸೀದ ಮಾತರ್ ವಿನಯೇನ ಯಾಚೇ
ನಿತ್ಯಂ ಭವ ಸ್ನೇಹವತೀ ಸುತೇಷು |
ಪ್ರೇಮೈಕ ಬಿಂದುಂ ಚಿರದಗ್ಧ ಚಿತ್ತೇ
ವಿಷಿಂಚ ಚಿತ್ತಂ ಕುರು ನಃ ಸುಶಾಂತಂ ||"

ಮೈಸೂರು,
೩೦-೪-೪೮.

**ಕುವೆಂಪು.**

——

# ವಿವರ

೧

# ಹಿಂದೂ ಸಂಸ್ಕೃತಿಯಲ್ಲಿ ಸ್ತ್ರೀಯರ ಸ್ಥಾನ

**ಯತ್ರ ನಾರ್ಯಸ್ತು ಪೂಜ್ಯನ್ತೇ ರಮನ್ತೇ ತತ್ರ ದೇವತಾಃ |**
**ಯತ್ರೈತಾಸ್ತು ನ ಪೂಜ್ಯನ್ತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ||**
**ಶೋಚನ್ತಿ ಜಾಮಯೊ ಯತ್ರ ವಿನಶ್ಯತ್ಯಾಶು ತತ್ಕುಲಮ್ |**
**ನಶೋಚನ್ತಿತು ಯತ್ರೈತಾ ವರ್ಧತೆ ತದ್ಧಿ ಸರ್ವದಾ || (ಮನು III ೫೬-೭.)**

"ಎಲ್ಲಿ ನಾರಿಯರನ್ನು ಪೂಜ್ಯ ದೃಷ್ಟಿಯಿಂದ ಕಾಣುವರೊ ಅಲ್ಲಿ ದೇವತೆಗಳು ಸುಪ್ರೀತರಾಗುವರು. ಎಲ್ಲಿ ಅವರನ್ನು ಅಗೌರವದಿಂದ ಕಾಣುವರೊ ಅಲ್ಲಿ ಪುರುಷರು ಮಾಡುವ ಕರ್ಮವೆಲ್ಲ ನಿಷ್ಫಲವಾದಂತೆ. ಎಲ್ಲಿ ನಾರಿಯರು ಕಂಬನಿಗರೆಯುವರೊ ಆ ಕುಲವೆ ನಾಶವಾದಂತೆ. ಎಲ್ಲಿ ಅವರು ಆನಂದದಿಂದ ಇರುವರೊ ಆ ಕುಲ ಅಭಿವೃದ್ಧಿಯಾಗುವುದು," ಎಂದು ಮನು ಹಲವು ಶತಮಾನಗಳ ಹಿಂದೆ ಸಾರಿದನು.

ನಮ್ಮ ನಾಡು ದೌರ್ಭಾಗ್ಯಕ್ಕೆ ಈಡಾಗಿ ಕೆಲವು ಶತಮಾನಗಳಿಂದ ಹೇಡಿಗಳ ದೊಡ್ಡಿಯಾಗಿತ್ತು. ಯಾರು ನಮ್ಮನ್ನು ತುಳಿಯುತ್ತಾರೆಯೊ ಅವರ ಪಾದವನ್ನು ಪೂಜಿಸುವಂತಾಗಿತ್ತು. ಪವಿತ್ರ ಭಾರತ ಭೂಮಿ ಆರ್ಯಸಂಸ್ಕೃತಿಯ ತೊಟ್ಟಿಲು. ಋಷಿಗಳ, ತ್ಯಾಗಿಗಳ, ವೀರಪುಂಗವರ ನಾಡು, ಗತವೈಭವವನ್ನು ಮೆಲುಕುಹಾಕುವ ಹೀನ ಸ್ಥಿತಿಗೆ ಬಂದಿದೆ. ಅನೇಕ ಜೀವನದಿಗಳು ಇಲ್ಲಿ ಹರಿಯುತ್ತಿವೆ. ಭೂಮಿ ಫಲವತ್ತಾಗಿದೆ. ಅತುಳ ಸಂಪತ್ತಿದೆ. ವಿಶ್ವದ ಜನಸಂಖ್ಯೆಯಲ್ಲಿ ಐದನೆಯ ಒಂದು ಪಾಲು ಇಲ್ಲಿರುವುದು. ಆದರೇನು ಎಲ್ಲವನ್ನೂ ನೀಗಿಕೊಂಡು, ನಮ್ಮ ನಾಡಿನಲ್ಲಿ ನಾವೇ ದಾಸರಾಗಿ, ಅನ್ಯರಿಗೆ ದುಡಿದು ಅವರೆಸೆದ ಕೂಳಿಗೆ ಕೈಯೊಡ್ಡಿ ಉದರಪೋಷಣೆ ಮಾಡುವ ಕಾಲ ಒದಗಿತ್ತು. ನಮ್ಮ ಇಂದಿನ ದುಃಸ್ಥಿತಿಗೆ ಹಲವು ರಾಜಕೀಯ, ಆರ್ಥಿಕ, ಸಾಮಾಜಿಕ ಕಾರಣಗಳಿವೆ. ಆದರೆ ಅವುಗಳಲ್ಲಿ ನಮ್ಮ ಸ್ತ್ರೀಯರ ದುಃಸ್ಥಿತಿಯೂ ಒಂದು ಮುಖ್ಯವಾದ ಕಾರಣವೆಂಬುದನ್ನು ಮರೆತೆವು. "ಯಾ ದೇವೀ ಸರ್ವ ಭೂತೇಷು ಶಕ್ತಿ ರೂಪೇಣ ಸಂಸ್ಥಿತಾ" ಸರ್ವ ಭೂತಗಳಲ್ಲೂ ಶಕ್ತಿಸ್ವರೂಪಿಣಿಯಾದ ದೇವಿಗೆ ನಮಸ್ಕಾರ (ದೇವೀ ಮಹಾತ್ಮ್ಯ). "ತ್ವಂ ಸ್ತ್ರೀ ತ್ವಂ ಪುಮಾನಸಿ ತ್ವಂ ಕುಮಾರ ಉತ ವಾ ಕುಮಾರೀ" (ಶ್ವೇತಾಶ್ವತರ). ಸ್ತ್ರೀಯು ನೀನೆ, ಪುರುಷನು ನೀನೆ, ಹುಡುಗಿಯು ನೀನೆ, ಹುಡುಗನು ನೀನೆ ಎಂದು ಸಾರಿದ

ಉಪನಿಷತ್ತಿನ ಋಷಿಗಳ ಬೋಧನೆ ಮರೆಯಿತು. "ಕೇನೇಶ ನಿರ್ಮಿತಂ ನಾರಿ ಮೋಹಿನಿ" ಈ ನಾರಿಯೆಂಬ ಮೋಹಿನಿಯನ್ನು ಯಾರು ನಿರ್ಮಿಸಿದರು!

ಬೀಜಂ ಭವಸ್ಯ ನರಕ ದ್ವಾರಸ್ಯ ದೀಪಿಕಾ
ಶುಚಾಂ ಕನ್ದಃ ಕಲೇರ್ಮೂಲಂ ದುಃಖಾನಾಂ ಖನಿರಂಗನಾ ||

"ನಾರಿಯೆ ಸಂಸಾರಕ್ಕೆ ಬೀಜ. ನರಕದ ಬಾಗಿಲಿಗೆ ಒಯ್ಯುವ ದಾರಿಯನ್ನು ಬೆಳಗುತ್ತಿರುವ ಪಂಜು. ಇವಳೇ ಅಶುಚಿಯ ಬೆಟ್ಟ. ಕೊಳೆಗೆ ಮೂಲ. ದುಃಖದ ಗಣಿ" ಎಂದು ನೋಡಲು ಮೊದಲುಮಾಡಿದೆವು. ಯಾರನ್ನು ಜಗನ್ಮಾತೆಯ ಪೂಜ್ಯಸ್ಥಾನದಲ್ಲಿಟ್ಟು ಪೂಜಿಸುತ್ತಿದ್ದೆವೋ ಅಂತಹ ದೇವತೆಯನ್ನು ನಿಕೃಷ್ಟ ದೃಷ್ಟಿಯಿಂದ ನೋಡುವ ಕಸದ ಗುಂಡಿಗೆ ನೂಕಲು ಮೊದಲು ಮಾಡಿದಂದಿನಿಂದಲೇ ಪ್ರಾರಂಭವಾಯಿತು ನಮ್ಮ ಅಧಃಪತನ.

ಸ್ತ್ರೀ ನಮ್ಮೆಲ್ಲರನ್ನು ಜಗತ್ತಿಗೆ ತಂದ ತಾಯಿ. ಆಕೆಯಲ್ಲಿರುವಷ್ಟು ಪ್ರೀತಿ ಮತ್ತೆಲ್ಲಿಯೂ ಕಾಣುವುದಿಲ್ಲ. ರೂಪುತಾಳಿದ ತ್ಯಾಗ ಅವಳು. ಸಹಿಷ್ಣುತಾ ಮೂರ್ತಿ. ಆಕೆ ಮಹಾ ತಪಸ್ವಿನಿ. ಜಗತ್ತಿಗೆ ಯತಿ ಚಕ್ರವರ್ತಿಗಳನ್ನು, ಕ್ಷಾತ್ರಪುಂಗವರನ್ನು ಪುರುಷಸಿಂಹರನ್ನು ದಾನಮಾಡಿದವಳು. ಈಕೆ ಪುರುಷನಷ್ಟು ನಮ್ಮೆದುರಿಗೆ ಎದ್ದು ಕಾಣುವುದಿಲ್ಲ. ಆದರೆ ಈಕೆ ಅಷ್ಟು ಪ್ರಾಮುಖ್ಯಳಲ್ಲ ಎನ್ನಲಾಗುವುದಿಲ್ಲ. "ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು ಕಣ್ಣುಕಾಣದ ಗಾವಿಲರು! ಪೆಣ್ಣಲ್ಲವೆ ನಮ್ಮನೆಲ್ಲ ಪಡೆದವಳು ಪೆಣ್ಣಲ್ಲವೆ ಪೊರೆದವಳು" (ಹದಿಬದೆಯ ಧರ್ಮ). ತನ್ನೆದೆ ರಕ್ತವನ್ನು ಹಾಲುಮಾಡಿ ಉಣಿಸುವಳು. ನಮ್ಮ ಪೋಷಣೆಯಲ್ಲಿ ಅವಳ ಸುಖವನ್ನು ಮರೆಯುವಳು. ಯಾವ ಪ್ರತಿಫಲವನ್ನು ನಿರೀಕ್ಷಿಸದೆ ನಮ್ಮನ್ನು ಹರಸಿ ಜಗತ್ತಿನ ಕಾರ್ಯರಂಗಕ್ಕೆ ಆಶೀರ್ವದಿಸಿ ಕಳುಹಿಸುವಳು. ನಮ್ಮ ಶೀಲ, ಭವಿಷ್ಯ ಜೀವನದ ಆದರ್ಶಬೀಜಗಳನ್ನು ನಮ್ಮ ಎಳೆ ಎದೆಯಲ್ಲಿ ಬಿತ್ತುವಳು. ಬಾಲಕರಾದಾಗ ನಮ್ಮನ್ನು ಮಲಗಿಸಲು ಹಾಡುತ್ತಿದ್ದ ಜೋಗುಳದ ಹಾಡುಗಳು, ವಿರಾಮವಾದಾಗ ಅವಳು ಹೇಳುತ್ತಿದ್ದ ಕಥೆ, ನಾವು ತಪ್ಪುಮಾಡಿದಾಗ ಎದೆನೊಂದು ಹೇಳುತ್ತಿದ್ದ ಬುದ್ಧಿವಾದ, ಇವೇ ನಾವು ಮುಂದೆ ಕಟ್ಟುವ ಜೀವನದ ಸೌಧಕ್ಕೆ ತಳಹದಿ. ನಾವು ವಯಸ್ಸಾದ ಮೇಲೆ ಕಲಿಯುವ ವಿದ್ಯೆಯೆಲ್ಲ ಕೇಳುವ ಬುದ್ಧಿವಾದವೆಲ್ಲ, ಆಗಲೆ ಆಕೆ ಬಾಲ್ಯದಲ್ಲಿ ನೆಟ್ಟ ಬೀಜಕ್ಕೆ ನೀರನ್ನು ಎರೆದಂತೆ. ನಾರಿಯರನ್ನು ಗೌರವಿಸದೆ, ಅವರಿಗೆ ಸಂಕಟದ ಉಣಿಸನ್ನು ಕೊಡುವ ಜನರಿಗೆ ಏಳಿಗೆ

ಯಾಗುವುದಿಲ್ಲ. ಅವರಿಗೆ ಇರುವ ಆತಂಕವನ್ನು ನಿವಾರಿಸಿ ಮತ್ತೊಮ್ಮೆ ವೇದ ಉಪನಿಷತ್ತಿನ ಕಾಲದಲ್ಲಿದ್ದ ಪೂಜ್ಯಸ್ಥಾನಕ್ಕೆ ಇವರನ್ನು ಕರೆದೊಯ್ಯುವ ತನಕ ನಾವು ಜಗದ ರಾಷ್ಟ್ರಗಳಲ್ಲಿ ಮಾನ್ಯರಾಗೆವು, ನಮ್ಮ ನಾಡು ಋಷಿಗಳ, ಭಕ್ತರ, ವೀರಯೋಧರ, ವಿದುಷಿಗಳ ತವರೂರಾಗಲಾರದು.

ವೇದ ಉಪನಿಷತ್ತು ಪುರಾಣ ಯುಗಗಳಲ್ಲಿ ಆಕೆಗೆ ಅತ್ಯಂತ ಗೌರವದ ಸ್ಥಾನ ದೊರಕಿತ್ತು. ಅದು ಸ್ಮೃತಿಕಾಲದಿಂದ ಇಂದಿನವರೆಗೆ ಹೇಗೆ ಅಧೋಗತಿಗೆ ಇಳಿಯಿತು ಎಂಬುದನ್ನು ಸಂಕ್ಷೇಪವಾಗಿ ನೋಡೋಣ. ವೇದಗಳ ಕಾಲದಲ್ಲಿ ಸ್ತ್ರೀಯರು ಉತ್ತಮಸ್ಥಿತಿಯಲ್ಲಿದ್ದರು. ಮೊದಮೊದಲು ಅವರು ಹೆಣ್ಣುಮಗುವಿಗಿಂತ ಗಂಡು ಮಗುವಿಗೆ ಹೆಚ್ಚು ಆಸೆಪಡುತ್ತಿದ್ದರೂ ಕ್ರಮೇಣ ಅದು ಮಾಯವಾಯಿತು. ಪಂಡಿತಳಾದ ಮಗಳು ಜನಿಸಲಿ ಎಂದು ಯಜ್ಞಗಳನ್ನು ಮಾಡುತ್ತಿದ್ದರೆಂದು ಬೃಹದಾರಣ್ಯಕೋಪನಿಷತ್ತಿನಲ್ಲಿ ಓದುತ್ತೇವೆ. ಕೌಶೀತಕೀ ಬ್ರಾಹ್ಮಣದಲ್ಲಿ ಪತ್ಯಾವಸ್ತೀ ಎಂಬ ಸ್ತ್ರೀ ತನ್ನ ವಿದ್ಯೆಯನ್ನು ಪೂರೈಸಿದಮೇಲೆ ವಾಕ್ ಎಂಬ ಹೆಸರನ್ನು ಗಳಿಸುತ್ತಾಳೆ. ಐತರೇಯ ಬ್ರಾಹ್ಮಣದಲ್ಲಿ ಗಂಧರ್ವಗ್ರಹೀತಾ ಎಂಬಾಕೆ ಯಾವುದೋ ಒಂದು ವಿಶೇಷ ಜ್ಞಾನದಲ್ಲಿ ಪಾಂಡಿತ್ಯವನ್ನು ಪಡೆದಿದ್ದಳಂತೆ. ವೇದವನ್ನು ಓದಲು ಸ್ತ್ರೀಯರಿಗೂ ಅಧಿಕಾರವಿತ್ತು. ಬಾಲಕರಿಗೆ ಇರುವಂತೆ ಅವರಿಗೂ ಉಪನಯನ ಸಂಸ್ಕಾರವಿತ್ತು. ಬಾಲಕರೊಂದಿಗೆ ಅಥವಾ ತಾವೇ ಬೇರೆ ಗುರುಗಳೆಡೆಯಲ್ಲಿ ವೇದಾಧ್ಯಯನ ಮಾಡುತ್ತಿದ್ದರು. ವಿದ್ಯಾರ್ಥಿನಿಯರಲ್ಲಿ ಎರಡು ವಿಧ. ಒಂದು ಬ್ರಹ್ಮವಾದಿನಿ; ಎರಡನೆಯದು ಸದ್ಯೋದ್ವಾಹ. ಮೊದಲನೆಯವರು ಆಜನ್ಮಬ್ರಹ್ಮಚಾರಿಣಿಯರಾಗಿ ತತ್ತ್ವಜಿಜ್ಞಾಸೆ ಮತ್ತು ತತ್ತ್ವಬೋಧನೆಯಲ್ಲಿ ಕಾಲ ಕಳೆಯುತ್ತಿದ್ದರು. ಅದಕ್ಕೇ ಆಗಿನ ಕಾಲದಲ್ಲಿ ಅವರಿಗೆ ಬೇರೆ ಹೆಸರನ್ನು ಕೊಟ್ಟಿದ್ದರು. ಉಪಾಧ್ಯಾಯರ ಸತಿಗೆ ಉಪಾಧ್ಯಾಯಿನಿ ಎಂದು, ಸ್ವಯಂ ಪಾಠಹೇಳುವ ಹೆಂಗಸರಿಗೆ ಉಪಾಧ್ಯಾಯಾ ಎಂದು ಕರೆಯುತ್ತಿದ್ದರು. ಕೆಲವು ವೇಳೆ ದೊಡ್ಡ ದೊಡ್ಡ ರಾಜಾಸ್ಥಾನಗಳಲ್ಲಿ ಹೆಸರಾಂತ ತತ್ತ್ವಜ್ಞರೊಂದಿಗೆ ವಾದಿಸುತ್ತಿದ್ದರು. ಬೃಹದಾರಣ್ಯಕೋಪನಿಷತ್ತಿನಲ್ಲಿ ಬರುವ ಪ್ರಸಂಗದಲ್ಲಿ ಜನಕರಾಜನ ಆಸ್ಥಾನದಲ್ಲಿ ಗಾರ್ಗೇಯಿ, ಹೆಸರಾಂತ ಯಾಜ್ಞವಲ್ಕ್ಯನನ್ನು ತನ್ನ ವಾದದ ಬಾಣಗಳಿಂದ ಎದುರಿಸುವಳು (ಬೃ. ಉ III ೬ ೮). ಪೂರ್ವಮೀಮಾಂಸದಲ್ಲಿ ಬರುವ ಯಾಗ ಯಜ್ಞ

ಗಳಷ್ಟು ನೀರಸವಾದ ಭಾಗಗಳನ್ನೂ ಕೂಡ ಕಲಿಯುತ್ತಿದ್ದ ಸ್ತ್ರೀಯರು ಎಷ್ಟೋ ಮಂದಿ ಇದ್ದರು. ಮೀಮಾಂಸದ ಮೇಲೆ ಕಾಶಕೃತ್ಸ್ನ ಎಂಬಾತನು ಕಾಶಕ್ರಿಷ್ಣಿ ಎಂಬ ಗ್ರಂಥವನ್ನು ಬರೆದಿದ್ದನು. ಅದನ್ನು ಓದುವ ಸ್ತ್ರೀಯರಿಗೆ ಕಾಶಕೃಷ್ಣಾ ಎಂಬ ಹೆಸರು ಮಹಾಭಾಷ್ಯದಲ್ಲಿ ಬರುವುದು. (ಮಹಾಭಾಷ್ಯ IV, ೧. ೧೪.) ಇಂತಹ ಶ್ರಮಸಾಧ್ಯವಾದ ವಿದ್ಯೆಗೇ ಹಲವರು ಸ್ತ್ರೀಯರು ಬರುತ್ತಿದ್ದಾಗ, ಸಾಧಾರಣ ವ್ಯಾಸಂಗಕ್ಕೆ ಎಷ್ಟು ಮಂದಿ ಬರುತ್ತಿದ್ದರು ಎಂಬುದನ್ನು ಊಹಿಸಬಹುದು. ಋಗ್ವೇದದ ಹಲವು ಸೂಕ್ತಗಳನ್ನು ಸ್ತ್ರೀಯರೇ ಬರೆದಿರುವರು. ಇವರಲ್ಲಿ ಕೆಲವರು ಇವರು–ಲೋಪಾಮುದ್ರಾ (I ೧೭೯) ವಿಶ್ವವರಾ (V ೩೪) ಸಿಕತಾ (VIII ೯೧) ನಿವಾವರೀ (IX ೮೧, ೧೧, ೩೦) ಘೋಷಾ (X ૩೯).

ಸಾಧಾರಣವಾಗಿ ಸದ್ಯೋದ್ವಾಹ ಎಂಬ ಎರಡನೆ ಗುಂಪಿಗೆ ಸೇರಿದ ಹುಡುಗಿಯರು ಹದಿನಾರು ಹದಿನೇಳು ವರ್ಷಗಳಾದ ಮೇಲೆ ಮದುವೆಯಾಗುತ್ತಿದ್ದರು. ಯುವಕರೊಂದಿಗೆ ಆಟ ನೋಟಗಳಿಗೆ ಹೋಗುತ್ತಿದ್ದರೆಂದೂ, ಪ್ರೀತಿಯ ಬಹುಮಾನಗಳನ್ನು ಒಬ್ಬರು ಇನ್ನೊಬ್ಬರಿಗೆ ಕೊಡುತ್ತಿದ್ದರೆಂದೂ, ಆದ ಮದುವೆಗಳಲ್ಲಿ ಕೆಲವು ಪರಸ್ಪರ ಅನುರಾಗದಿಂದ ಆದವು ಎಂದು ತಿಳಿಸುವ ಹಲವು ನಿದರ್ಶನಗಳಿವೆ (ಅಥರ್ವ ವೇದ. ೨. ೩೦. ೫). ಮದುವೆಯಾದಮೇಲೆ ಪತಿ ಮಾಡುವ ಧರ್ಮ ಕಾರ್ಯಗಳೆಲ್ಲೆಲ್ಲ ಈಕೆ ಭಾಗಿನಿ. ಕೆಲವು ಸಮಯದಲ್ಲಿ ಪತಿ ಇಲ್ಲದಿದ್ದರೆ ಇವಳೇ ಆ ಕಾರ್ಯವನ್ನು ಮಾಡುತ್ತಿದ್ದಳು. ಘೋಷಾಪದ್ಧತಿ ಇರಲಿಲ್ಲ. ಪತಿ ಸತ್ತರೆ ಸತಿ ಅವನೊಂದಿಗೆ ಸಹಗಮನ ಮಾಡುತ್ತಿರಲಿಲ್ಲ. ಹಲವು ವೇಳೆ ಅವಳು ಬೇಕಾದರೆ ಪುನಃ ಮದುವೆಯಾಗಬಹುದಾಗಿತ್ತು. (ಅಥರ್ವವೇದ IX ೫. ೨೯–೮).

ಪೌರಾಣಿಕ ಯುಗಕ್ಕೆ ಬಂದರೆ ಅಲ್ಲಿ ಕೂಡ ಅವಳಿಗೆ ಉತ್ತಮ ಸ್ಥಾನವಿತ್ತು. ರಣವಿದ್ಯೆಯೂ ಕೂಡ ಅವಳಿಗೆ ಹೊಸದಾಗಿರಲಿಲ್ಲ. ದಶರಥನೊಂದಿಗೆ ಕೈಕೇಯಿ ಯುದ್ಧರಂಗಕ್ಕೆ ಹೋಗುತ್ತಿದ್ದಳು. ಅವನಿಗೆ ಕೆಲವು ವೇಳೆ ಸಹಾಯವನ್ನೂ ಮಾಡುತ್ತಿದ್ದಳು. ಸ್ತ್ರೀಯರು ಬಯಲಲ್ಲಿ ಆಟಗಳನ್ನು ಆಡುತ್ತಿದ್ದರು. ಋತುಮತಿಯಾದ ಮೇಲೆ ವಿವಾಹವಾಗುತ್ತಿತ್ತು. ಸೀತೆ ಅರಣ್ಯದಲ್ಲಿ ಅನಸೂಯೆಯೊಂದಿಗೆ ಮಾತನಾಡುತ್ತಿದ್ದಾಗ ತಾನು ಋತುಮತಿಯಾದ ಮೇಲೆ ಜನಕನಿಗೆ ತನ್ನ ಮದುವೆಯ ವಿಚಾರದಲ್ಲಿ ತುಂಬಾ ಆಲೋಚನೆಯಾಯಿತೆಂದು ಹೇಳುವಳು (II ೧೧೯, ૩೪).

ಆಗಲೂಕೂಡ ಅವರಿಗೆ ವೇದ ಕಾಲದಲ್ಲಿ ಇದ್ದಂತೆ ಉಪನಯನ ಸಂಸ್ಕಾರ, ವೇದಾಧ್ಯಯನ, ಯಾಗ ಯಜ್ಞಗಳನ್ನು ಮಾಡುವ ಅಧಿಕಾರವಿತ್ತು. ರಾಮ ಕಾಡಿಗೆ ಹೋಗುವುದಕ್ಕೆ ಮುಂಚೆ ಕೌಸಲ್ಯೆಯ ಅಪ್ಪಣೆಯನ್ನು ಪಡೆಯಲು ಹೋದಾಗ ಅವಳು ಮಂತ್ರಗಳನ್ನು ಉಚ್ಚರಿಸುತ್ತ ಯಜ್ಞ ವನ್ನು ಮಾಡುತ್ತಿದ್ದಳೆಂದು ಕವಿ ವರ್ಣಿಸುತ್ತಾನೆ. ವಾಲಿಯ ಸತಿ ತಾರೆ ಮಂತ್ರವಿದ್ ಎಂದು ಪ್ರಖ್ಯಾತಳಾಗಿದ್ದಳು. ಹನುಮಂತನು ಲಂಕೆಯಲ್ಲಿ ಸೀತೆಯನ್ನು ಹುಡುಕುತ್ತಿದ್ದಾಗ ಅವಳು ಕಾಣದಿರಲು ಸಂಜೆ ಸೂರ್ಯಾ ಸ್ತಮಯ ಸಮಯದಲ್ಲಿ ನದೀ ತೀರಕ್ಕೆ ಸಂಧ್ಯಾವಂದನೆ ಮಾಡುವುದಕ್ಕೆ ಅವಳು ಬರದೆ ಇರಳು ಎಂದು ಹೇಳುತ್ತಾನೆ.

ಭಾರತದ ನಾರಿಯರ ಆದರ್ಶಶೀಲವೆಂತಹುದು ಎಂಬುದನ್ನು ನಾವು ರಾಮಾಯಣದಲ್ಲಿ ಸೀತೆಯ ಶೀಲದಲ್ಲಿ ಕಾಣುವೆವು. ನಾವು ರಾಮಾಯಣ ವನ್ನು ರಾಮಾಯಣವೆಂದು ಕರೆಯದೆ ಬೇರೊಂದು ಹೆಸರಿನಿಂದ ಕರೆಯ ಬೇಕೆಂದರೆ "ಸೀತಾಯಾಶ್ಚರಿತಂ" ಎನ್ನಬಹುದು. ವಾಲ್ಮೀಕಿ ರಾಮ ನನ್ನು ಎಂತಹ ಧೀರ, ಮಹಾತ್ಮ, ಸತ್ಯವಂತ, ಪರಾಕ್ರಮ ಶೀಲ ಎಂದು ಚಿತ್ರಿಸಿರುವನೋ ಅಷ್ಟೆ ಅಥವಾ ಅದಕ್ಕಿಂತ ಹೆಚ್ಚಾಗಿ ಸೀತೆ ಧೀರಳು, ಮಹಾತ್ಮಳು, ಸತ್ಯಸಂಧಳು, ಕ್ಷಮಾಗಣೆ ಎಂದು ಚಿತ್ರಿಸಿ ರುವನು. "ಪ್ರಪಂಚದ ಕಾವ್ಯ ನಾಯಕಿಯರಲ್ಲಿ ಪ್ರಸಿದ್ಧರಾದ ನಾಯಕಿ ಯರ ಮಧ್ಯೆ ಸೀತಾದೇವಿ ಅಗ್ರಗಣ್ಯಳು. ಕಾವ್ಯ ಇದಕ್ಕೆ ಹೆಚ್ಚಿನದನ್ನು ಕಂಡಿಲ್ಲ. ಇದಕ್ಕೆ ಹೆಚ್ಚಿನದನ್ನು ಚಿತ್ರಿಸಿಲ್ಲ." ಭಾರತೀಯ ನಾರಿಯರ ಒಂದು ವೈಶಿಷ್ಟ್ಯ ಗುಣವಾದ ಮೂಕಪ್ರೇಮ, ಪಾತಿವ್ರತ್ಯ, ಸಹಿಷ್ಣುತಾ ಶಕ್ತಿಗಳನ್ನು ಅನೇಕ ಶತಮಾನಗಳಿಂದಲೂ ಪೋಷಿಸುತ್ತಿರುವ ಎಂದಿಗೂ ಬತ್ತದ, ಒಂದು ಮಹಾನದಿಯಾಗಿದೆ ಸೀತೆಯ ಶೀಲ.

ರಾಮಾಯಣದಲ್ಲಿ ಕವಿ ವಾಲ್ಮೀಕಿ ಸಾತ್ವಿಕ ಪ್ರಧಾನಮೂರ್ತಿಯಾದ ಸೀತೆಯನ್ನು ಚಿತ್ರಿಸುವನು. ವ್ಯಾಸ ಮಹಾಭಾರತದಲ್ಲಿ ರಾಜಸಿಕ ಪ್ರಧಾನಮೂರ್ತಿಯಾದ ದ್ರೌಪದಿಯನ್ನು ಚಿತ್ರಿಸುವನು. ಧರ್ಮಾತ್ಮ ರಾದ ಪಾಂಡವರ ಹೃದಯದಲ್ಲಿ ಅನೇಕ ವೇಳೆ ಗೊಡ್ಡು ವೈರಾಗ್ಯದ ಬೂದಿ ಅವರ ಪೌರುಷದ ಅಗ್ನಿಕುಂಡದಮೇಲೆ ಸೇರುತ್ತಿತ್ತು. ದ್ರೌಪದಿ ತನ್ನ ಪೌರುಷದ ಮಾತಿನ ಸಲಾಕಿಯಿಂದ ಅದನ್ನು ಕೆಣಕುವಳು. ಛಲದ ಬಿರುಗಾಳಿಯಿಂದ ಅದನ್ನು ಊದುವಳು. ಮತ್ತೊಮ್ಮೆ ಪೌರುಷದ ಕಿಡಿ ಸಿಡಿಯುವಂತೆ ಮಾಡುವಳು. ಅಧರ್ಮಿಗಳಾದ ಕೌರವ ಕುಲನಾಶಕ್ಕೆ

ಮೂಲಪ್ರಚೋದನ ಶಕ್ತಿಯಂತೆ ಇದ್ದವಳು ದ್ರೌಪದಿ. ಆಕೆ ವಿದ್ಯಾವಂತೆ. ಅನೇಕ ಕಡೆ ಕವಿ ಅವಳನ್ನು ಪಂಡಿತಾ ಎಂದು ಕರೆದಿರುವನು. ಸಂಸ್ಕೃತಳು. ಬಹಳ ದೂರಾಲೋಚನೆಯುಳ್ಳವಳು. ಯುದ್ಧದ ಸಮಯದಲ್ಲಿ ಕುಂತಿ ಧರ್ಮರಾಯನಿಗೆ, ದ್ರೌಪದಿಯ ಅಭಿಪ್ರಾಯದಂತೆ ನಡೆಯಿರಿ ಎನ್ನುವಳು. ಎಲ್ಲಕ್ಕಿಂತ ಹೆಚ್ಚಾಗಿ ಕೃಷ್ಣಭಕ್ತಳು. ಪ್ರಪಂಚದಲ್ಲಿ ಎಲ್ಲಾ ಕೈಬಿಟ್ಟರೂ ಎಂದೆಂದಿಗೂ ಕೈಬಿಡದ ಒಂದು ಮಹಾಶಕ್ತಿ ಭಗವಂತನೊಬ್ಬನೇ ಎಂಬುದನ್ನು ಅಕ್ಷರಶಃ ಮನಗಂಡವಳು, ಅದರಂತೆ ಆಚರಿಸಿದವಳು. ಇದಲ್ಲದೆ ಇನ್ನೂ ಹಲವು ಸುಂದರ ಶೀಲಗಳು ಮಹಾಭಾರತದಲ್ಲಿ ಬರುವುವು. ವನಪರ್ವದಲ್ಲಿ ಬರುವ ಶಿವಾ ಎಂಬಾಕೆಗೆ ವೇದಪಾರಗಾ ಎಂಬ ಹೆಸರಿತ್ತು. ಉದ್ಯೋಗಪರ್ವದಲ್ಲಿ ವಿದುಳಾ ಎಂಬಾಕೆ ರಣರಂಗದಿಂದ ಬಂದ ತನ್ನ ಮಗನಿಗೆ ಕ್ಷಾತ್ರಧರ್ಮದ ಮೇಲೆ ಒಂದು ದೊಡ್ಡ ಬುದ್ಧಿವಾದವನ್ನು ಕೊಡುವಳು. ಶಾಂತಿ ಪರ್ವದಲ್ಲಿ ಬರುವ ವಿದುಳಾ ಎಂಬಾಕೆ ಜನಕರಾಜನಿಗೆ, ಯೋಗ ಸಮಾಧಿ, ಮೋಕ್ಷ ಮುಂತಾದವುಗಳ ಮೇಲೆ ಉಪನ್ಯಾಸವನ್ನು ಕೊಡುವಳು.

ಕಾಳಿದಾಸಾದಿ ಕವಿಗಳ ಕಾವ್ಯಗಳಲ್ಲಿ ಬರುವ ನಾಯಕಿಯರು ವಿದ್ಯಾವತಿಯರಾಗಿದ್ದರು. ಶಕುಂತಲೆ ತನ್ನ ಪ್ರಿಯತಮನಿಗೆ ಪ್ರೇಮದ ಪತ್ರವನ್ನು ಬರೆಯುವಳು. ಮೇಘದೂತದಲ್ಲಿ ಕಥಾನಾಯಕಿ ವಿರಹದಿಂದ ಪರಿತಪಿಸುವಾಗ ಪ್ರಿಯತಮನ ನೆನಪುಗಳನ್ನು ತರುವ ಕವನಗಳನ್ನು ಬರೆಯುತ್ತಿದ್ದಳೆಂದು ಕವಿ ಹೇಳುತ್ತಾನೆ. ರಾಜಶೇಖರನ ಕಾವ್ಯ ಮೀಮಾಂಸದಲ್ಲಿ ಕೂಡ ಅನೇಕ ವಿದ್ಯಾವತಿಯರ ಹೆಸರಿವೆ. ಶೀಲ ಭಟ್ಟಾರಿಕಾ ಕವಯತ್ರಿಯಾಗಿದ್ದಳು. ವಿಜಯಾಂಕಾ ಪ್ರತ್ಯಕ್ಷ ಸರಸ್ವತಿಯಂತೆ ಇದ್ದಳು. ವಿಕಳನಿತಂಬಾ ಬರೆದ ಕವನಗಳು ಅತಿ ಮಧುರವಾಗಿದ್ದುವು. ಒಬ್ಬ ಕವಿಯ ಸತಿಯಾದ ಆವಂತಿಸುಂದರಿಯು ಅನೇಕ ಕಾವ್ಯ ಶಾಸ್ತ್ರಗಳ ಕರ್ತೃವಾಗಿದ್ದಳು.

ಬೌದ್ಧ ಧರ್ಮದ ಪ್ರಾಬಲ್ಯಸ್ಥಿತಿಯಲ್ಲೂ ಕೂಡ ಋತುಮತಿಯಾದ ಮೇಲೆ ವಿವಾಹ ಮಾಡುತ್ತಿದ್ದರು. ಅನೇಕ ವಿದ್ಯಾವತಿಯರಾದ ಸ್ತ್ರೀಯರು ಬೌದ್ಧ ಧರ್ಮಕ್ಕೆ ಸೇರಿದ್ದರು. ಅವರಲ್ಲಿ ಕೆಲವರು ಬಹಳ ಹೆಸರುವಾಸಿಯಾಗಿ ಹಿಂದಿನ ಗಾರ್ಗೇಯಿಯ ನೆನಪನ್ನು ತರುತ್ತಿದ್ದರು. ವಜೀರಾ ಎಂಬ ಭಿಕ್ಷುಣಿ ಒಬ್ಬ ಬಹಳ ವಿದ್ಯಾವಂತನಾದ ಭಿಕ್ಷುವಿನೊಂದಿಗೆ ಸತ್ತ್ ಅಸತ್ತ್ದ ವಿಚಾರವಾಗಿ ಪ್ರಶ್ನೆ ಮಾಡುವಳು. ಶುಕಾ ಎಂಬುವಳು

ಅತ್ಯಂತ ಪ್ರಖ್ಯಾತಳಾದ ಉಪನ್ಯಾಸಕಳಾಗುವಳು. ಆಕೆ ಮಾತನಾಡಲು ಎದ್ದರೆ ಸಭಿಕರೆಲ್ಲ ನಿಶ್ಶಬ್ದದಿಂದ ಆಕೆ ಹೇಳುವುದನ್ನು ಕೇಳುತ್ತಿದ್ದರಂತೆ. ಧಾರ್ಮಿಕ ವಿಚಾರವಾಗಿ ಮಾತನಾಡುವುದರಲ್ಲಿ ಖೇಮಾ ಎಂಬುವಳು ಪ್ರಖ್ಯಾತಳಾದಳು. ಪಾಸಿನಾಡಿ ಎಂಬ ದೊರೆಯನ್ನು ಕೂಡ ಇವಳು ತನ್ನ ಬೋಧೆಯಿಂದ ಮುಗ್ಧನನ್ನಾಗಿ ಮಾಡಿದ್ದಳು. ಇವರಲ್ಲಿ ಕೆಲವರು ಕವಯತ್ರಿಯರಾಗಿದ್ದರು. ಅವರ ಹಲವು ಕೃತಿಗಳು ಬೌದ್ಧ ಧರ್ಮದ ಭಂಡಾರದಲ್ಲಿ ಸೇರಿವೆ. ಸಮಾಜದಲ್ಲಿ ಕೂಡ ಅವರ ಗೌರವ ಹೆಚ್ಚಿತು. ಜೈನ ಧರ್ಮಕ್ಕೆ ಕೂಡ ಅನೇಕ ವಿದ್ಯಾವತಿಯರು ಮತ್ತು ಶೀಲವತಿಯರು ಸೇರಿದರು. ಚಂದನಾ ಎಂಬುವಳು ಸ್ತ್ರೀಯರ ಸಂಘಕ್ಕೆ ಅಧ್ಯಕ್ಷಳಾಗಿದ್ದಳು. ಸಾವಿರಾರು ಮಂದಿ ಅದಕ್ಕೆ ಸೇರಿದ್ದರು. ಅನಂತರ ಜೈನಧರ್ಮ ದಿಗಂಬರ ಶ್ವೇತಾಂಬರವೆಂದು ಬೇರೆಯಾದಾಗ, ದಿಗಂಬರ ಪಂಗಡದಲ್ಲಿ ಸ್ತ್ರೀಯರಿಗೆ ಭಿಕ್ಷುಣಿಗಳಾಗಲು ಅವಕಾಶ ಸಿಕ್ಕುತ್ತಿರಲಿಲ್ಲ. ಕ್ರಮೇಣ ಅವರ ಮೇಲೆ ದೂರನ್ನು ಹೊರಿಸುವುದಕ್ಕೆ ಮೊದಲು ಮಾಡಿದರು.

ಬೌದ್ಧಧರ್ಮದನಂತರ ಪ್ರಾಬಲ್ಯಕ್ಕೆ ಬಂದ ಶಂಕರಾಚಾರ್ಯರಕಾಲದಲ್ಲೂ ವಿದ್ಯಾವತಿಯರಾದ ಸ್ತ್ರೀಯರಿದ್ದರು. ಮಂಡನಮಿಶ್ರ ಮತ್ತು ಶಂಕರಾಚಾರ್ಯರು ವಾದಮಾಡುವಾಗ ಮಂಡನಮಿಶ್ರನ ಸತಿ ಭಾರತಿಯನ್ನು ತೀರ್ಪುಕೊಡಲು ಗೊತ್ತುಮಾಡುವರು. ಆಕೆ ಒಬ್ಬನು ಪತಿ, ಇನ್ನೊಬ್ಬನು ಯತಿ ಎಂಬ ಭೇದಭಾವವನ್ನು ತೋರದೆ ಶಂಕರಾಚಾರ್ಯರ ಪರವಾಗಿ ತೀರ್ಪನ್ನಿತ್ತಳು ಇದರಿಂದಅವಳು ಪತಿಯನ್ನು ಕಳೆದುಕೊಳ್ಳಬೇಕಾಯಿತು. ಅವನು ಸನ್ಯಾಸಾಶ್ರಮವನ್ನು ಸ್ವೀಕರಿಸಿ ಶಂಕರಾಚಾರ್ಯರ ಶಿಷ್ಯನಾಗಿ ಹೊರಟು ಹೋದನು. ಇಂತಹ ನಾರೀರತ್ನಗಳು ಬಹಳ ಅಪರೂಪವಾಗಿದ್ದಿರಬಹುದು. ಆದರೂ ಇಂತಹ ಕೆಲವರು ಇರಬೇಕಾದರೂ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನಗಳು ಬಹಳ ಗೌರವದ ಅಂತಸ್ಥಿನಲ್ಲಿ ಇದ್ದಿತೆಂದು ಊಹಿಸಬಹುದು.

ಸ್ಮೃತಿಗಳ ಕಾಲದಲ್ಲಿ ಸ್ತ್ರೀಯರ ಸ್ವಾತಂತ್ರ್ಯಕ್ಕೆ ಅನೇಕ ಕುಂದು ಕೊರತೆಗಳು ಬರಲು ಮೊದಲಾದುವು. ಕ್ರಿ. ಪೂ. ೬೦೦ ರಿಂದ ಕ್ರಿ. ಶ. ೧೦೦ ರವರೆವಿಗೆ ಹೆಣ್ಣುಮಕ್ಕಳ ಮದುವೆ ವಯಸ್ಸು ಕ್ರಮೇಣ ಕಡಿಮೆಯಾಗುತ್ತ ಹೋಗುವುದು. ಇದಕ್ಕೆ ಹಲವು ಕಾರಣಗಳಿರಬಹುದು. ಆರ್ಯರು ವಿಸ್ತಾರವಾದ ರಾಜ್ಯವನ್ನು ಕಟ್ಟಿದರು. ಮತ್ತೊಂದು ಜನಾಂಗದೊಂದಿಗೆ ವಿಶೇಷವಾಗಿ ಕಲೆಯಬೇಕಾಗಿ ಬಂದಿತು. ಮುಖ್ಯ ವರ್ಣ

ಗಳಲ್ಲಿ ಅನೇಕ ಒಳವಿಭಾಗಗಳಾಗಿ, ಒಬ್ಬರು ಮತ್ತೊಂದು ಪಂಗಡದ ಸಂಪರ್ಕವನ್ನು ಇಟ್ಟುಕೊಳ್ಳದಂತೆ ಮಾಡಿದರು. ಬರಬರುತ್ತ ಸರಿಯಾದ ವರ ಕನ್ಯೆಗೆ ದೊರಕುವುದೇ ಕಷ್ಟವಾಯಿತು. ಆದಕಾರಣ ವರ ಸಿಕ್ಕಿದಾಗಲೇ ಕನ್ಯೆ ಚಿಕ್ಕದಾದರೂ ಮದುವೆಮಾಡಲು ಮೊದಲುಮಾಡಿದರು. ಅನ್ಯ ಜನಾಂಗದೊಂದಿಗೆ ಬಳಕೆ ಹೆಚ್ಚಾದ ಮೇಲೆ, ವಯಸ್ಸಾಗುವ ತನಕ ಮದುವೆಮಾಡದೆ ಇದ್ದರೆ ಅನ್ಯಜಾತಿಯವರೊಂದಿಗೆ ಪರಸ್ಪರ ವಿವಾಹಗಳಾಗಿ ವರ್ಣಸಂಕರವಾಗಬಹುದೆಂಬ ಒಂದು ಅಂಜಿಕೆ ಬೇರೂರಿತು. ವೇದ ಸಾಹಿತ್ಯ ಕೂಡ ಬೆಳೆಯುತ್ತ ಬಂದಿತು. ಹಿಂದಿನಂತೆ ಅವನ್ನು ಎಂಟು ಹತ್ತು ವರ್ಷಗಳಲ್ಲಿ ಓದಿ ಪಾರಂಗತರಾಗಲು ಸಾಧ್ಯವಾಗುತ್ತಿರಲಿಲ್ಲ. ಮೊದಲು ಹೆಣ್ಣು ಮಕ್ಕಳಿಗೆ ಉಪನಯನವಾಗುತ್ತಿದ್ದರೂ, ಕ್ರಮೇಣ ಅದು ನಿಂತುಹೋಯಿತು. ಇದರಿಂದ ವೇದಾಧ್ಯಯನಕ್ಕೆ ಅವರಿಗೆ ಅವಕಾಶವಿರಲಿಲ್ಲ. ಹಿಂದೆ ಉಪನಯನವನ್ನು ಮಾಡುವ ವಯಸ್ಸಿಗೆ ಸರಿಯಾಗಿ ಮದುವೆಮಾಡಿ ಆಕೆಯ ಗಂಡನಿಂದಲೇ ವೇದವನ್ನು ಕಲಿಯಲಿ ಎಂದು ಮಾಡಿದರು.

ಕ್ರಿ.ಪೂ. ೪೦೦ರಿಂದ ವಶಿಷ್ಟ ಮತ್ತು ಬೋಧಾಯನರು ಹುಡುಗಿಗೆ ಋತುಮತಿಯಾದ ಮೂರು ವರ್ಷಗಳೊಳಗೆ ಮದುವೆಮಾಡಬೇಕೆಂಬ ನಿಯಮವನ್ನು ತಂದರು. ಮನು ಮತ್ತು ಕೌಟಿಲ್ಯ ಇವರು ಅದಕ್ಕೆ ಮುಂಚೆ ಮದುವೆಯಾದರೆ ಮೇಲೆಂದು ಅಭಿಪ್ರಾಯಪಟ್ಟರು. ಒಂದು ವೇಳೆ ಸರಿಯಾದ ವರ ಸಿಕ್ಕದಿದ್ದರೆ ಎಷ್ಟು ವರುಷಗಳು ಕಾದರೂ ಏನೂ ಕುಂದಿಲ್ಲವೆಂದು ಮನು ಒಪ್ಪಿಕೊಂಡನು (ಮನು IX ೮೯). ಇವರ ನಂತರ ಬಂದ ಗೌತಮ, ವಿಷ್ಣು ಇವರುಗಳು ಋತುಮತಿಯಾದ ಮೂರು ತಿಂಗಳೊಳಗೆ ಮದುವೆಮಾಡಬೇಕೆಂದರು.

ಸುಮಾರು ಕ್ರಿ. ಶ. ೧೯೦ರವರೆಗೆ ಹಿಂದೂಸಮಾಜದಲ್ಲಿ ಹೆಣ್ಣು ಮಕ್ಕಳಿಗೆ ಎಷ್ಟು ವಯಸ್ಸಿನಲ್ಲಿ ಮದುವೆಮಾಡಬೇಕೆಂಬ ಒಂದು ವಿವಾದ ನಡೆಯುತ್ತಿತ್ತು. ಕ್ರಿ. ಶ. ೨೦೦ ಆದ ಮೇಲೆ ಸ್ಮೃತಿಕಾರರು ಬಾಲ್ಯವಿವಾಹ ಆಗಬೇಕೆಂಬ ಒಂದು ನಿರ್ದಿಷ್ಟ ನಿರ್ಣಯಕ್ಕೆ ಬಂದರು. ಬೌದ್ಧಮತ ಪ್ರಾಬಲ್ಯಕ್ಕೆ ಬಂದಮೇಲೆ ಅನೇಕ ಸುಸಂಸ್ಕೃತರಾದ ಹಿಂದೂ ಸ್ತ್ರೀಯರು ಅದಕ್ಕೆ ಸೇರಲು ಪ್ರಾರಂಭಿಸಿದರು. ಅವರನ್ನು ವಯಸ್ಸಾಗುವವರೆಗೂ ಬಿಟ್ಟರೆ ಕ್ರಮೇಣ ಹಿಂದೂ ಸಮಾಜ ಬಲಹೀನವಾಗುವುದೆಂದು ತಿಳಿದು ಅವರಿಗೆ ಬುದ್ಧಿ ತಿಳಿಯುವುದಕ್ಕೆ ಮುಂಚೆಯೆ ಮದುವೆ

ಮಾಡಿಬಿಡಬೇಕೆಂದು ನಿರ್ಣಯಿಸಿದರು. ಕ್ರಿ. ಶ. ಮೂರನೆಯ ಶತಮಾನದಿಂದ ಈಚೆಗೆ ಬಂದ ಸ್ಮೃತಿಕಾರರೆಲ್ಲ ಬಾಲ್ಯವಿವಾಹ ಪರವಾಗಿ ವಾದಿಸಿರುವರು. ಸುಮಾರು ಇದೇ ಕಾಲದಲ್ಲಿದ್ದ ಯಾಜ್ಞವಲ್ಕ್ಯನು ಬಾಲಕಿಗೆ ಋತುಮತಿಯಾಗುವುದಕ್ಕೆ ಮುಂಚೆ ಮದುವೆಯಾಗಬೇಕೆಂದೂ ಹಾಗೆ ಇಲ್ಲದೇ ಇದ್ದರೆ ಪ್ರತಿ ತಿಂಗಳೂ ಒಂದು ಭ್ರೂಣಹತ್ಯೆಯನ್ನು ಮಾಡಿದ ಪಾತಕ ತಂದೆಗೆ ಬರುವುದೆಂದು ಬರೆದನು (ಯಾಜ್ಞವಲ್ಕ್ಯ ಸ್ಮೃತಿ I. ೧೩). ಕ್ರಿ.ಶ. ಸುಮಾರು ೪೦೦ಕ್ಕೆ ಬಂದ ಯಮನು ಹುಡುಗಿಗೆ ಸರಿಯಾದ ವರನು ಸಿಕ್ಕದೇ ಇದ್ದರೂ ಕೂಡ ಎಂತಹ ವರನಿಗಾದರೂ ಕೊಟ್ಟು ಮದುವೆಮಾಡಬೇಕೆಂದನು (ಸ್ಮೃತಿ ಚಂದ್ರಿಕಾ, ಸಂಸ್ಕಾರ ಖಂಡ ೨೧೭). ಸರಿಯಾದ ವರನು ಸಿಕ್ಕದೇ ಇದ್ದರೆ ಇಡೀ ಜೀವನವೆಲ್ಲಾ ಮದುವೆಯಾಗದೆ ಕಳೆದರೂ ಚಿಂತೆಯಿಲ್ಲ, ಎಂದು ಸಾರಿದ ಮನುವಿನ ಕಾಲಕ್ಕೂ, ಸರಿಯಾದ ವರಲು ಸಿಕ್ಕಲಿ ಸಿಕ್ಕದಿರಲಿ ಋತುಮತಿ ಎಲ್ಲಿ ಆಗಿಬಿಡುವಳೋ ಎಂಬ ಭಯದಿಂದ ಎಂತಹ ಗಂಡಿಗಾದರೂ ಧಾರೆಯೆರೆದು ಕೊಡಬೇಕೆನ್ನುವ ಯಮನ ಕಾಲಕ್ಕೂ ಎಂತಹ ತಾರತಮ್ಯ!

ಋತುಮತಿಯಾಗುವ ಸಮಯಕ್ಕೆ ಸರಿಯಾಗಿ ಮದುವೆಮಾಡಲು ಯಾವಾಗಲೂ ಸಾಧ್ಯವಿರಲಿಲ್ಲ. ಸರಿಯಾದ ವರನು ಸಕಾಲದಲ್ಲಿ ಸಿಕ್ಕದೇ ಇರಬಹುದು ಎಂದು ತಿಳಿದು ಎಂಟು ವರುಷವಾದಮೇಲೆ ಮದುವೆಮಾಡುವುದಕ್ಕೆ ಮೊದಲಾಯಿತು.

ಬಾಲ್ಯ ವಿವಾಹ ಕೆಲವು ವರ್ಣದಲ್ಲಿ ಮಾತ್ರ ರೂಢಿಯಲ್ಲಿದ್ದುದು ಕ್ಷತ್ರಿಯರಲ್ಲಿ ಇದು ಬಳಕೆಗೆ ಬರಲಿಲ್ಲ. ಕ್ರಿ. ಶ. ೩೦೦ ರಿಂದ ೧೨೦೦ ರ ವರಿಗೆ ಬರೆದ ಸಂಸ್ಕೃತ ನಾಟಕಗಳಲ್ಲಿ ನಾಯಕಿಯರು ಪ್ರಾಪ್ತವಯಸ್ಕರಾದವರು. ಕೆಲವು ಉಗ್ರ ಪಂಥದವರು ಸ್ವಲ್ಪ ಮುಂದೆ ಹೋಗಿ ನಾಲ್ಕು ವರುಷವಾದ ಮೇಲೆ ಹುಡುಗಿಗೆ ಯಾವಾಗ ಬೇಕಾದರೂ ಮದುವೆಮಾಡಬಹುದೆಂಬ ವಾದವನ್ನು ಬ್ರಹ್ಮಪುರಾಣದಿಂದ ತಂದರು. ಸರಿಯಾದ ವರನು ಸಿಕ್ಕದೇ ಇದ್ದರೆ ಎಷ್ಟು ವರುಷಗಳಾದರೂ ಕಾದುಕೊಂಡಿರಬೇಕೆಂದು ಸಾರಿದ ಮನು ವಾಕ್ಯವನ್ನು ಬೇರೆ ವಿಧವಾಗಿ ಟೀಕಿಸಲು ಮೊದಲು ಮಾಡಿದರು. ಮಾಧವನು ಪರಾಶರ ಸ್ಮೃತಿಯಲ್ಲಿ I. ii ಪುಟ ೩೮ ರಲ್ಲಿ ಇದು ವಧುವಿಗೆ ಸರಿಯಾದ ವರನನ್ನು ಹುಡುಕುವ ಪ್ರಾಮುಖ್ಯತೆಯನ್ನು ತೋರುತ್ತದೆಯೆ ವಿನಹ ಋತುಮತಿಯಾದ ಮೇಲೆ ವಿವಾಹವನ್ನು ಮಾಡಬೇಕೆಂದು ಹೇಳುವುದಿಲ್ಲ ಎಂದನು. ಬಾಲ್ಯ ವಿವಾಹವನ್ನು ಅನುಮೋದಿ

ಸುವವರು ಹೀಗೆ ಕೆಲವು ವಾದಗಳನ್ನು ತರುವರು: ಅಂದಿನ ಮದುವೆ ಉಪನಯನಕ್ಕೆ ಸಮ. ಅವಳು ಮದುವೆಯಾದ ಮೇಲೆ ಗಂಡನ ಮನೆಗೆ ಶಿಷ್ಯಳಾಗಿ ಕಾಲಿಡುತ್ತಿದ್ದಳು. ವೇದ ಸಾಹಿತ್ಯ ವಿಸ್ತಾರದಲ್ಲಿ ಬೆಳೆದಂತೆಲ್ಲಾ ಅದನ್ನು ಮದುವೆಗೆ ಮುಂಚೆ ಓದಲು ಸಾಧ್ಯವಾಗುತ್ತಿರಲಿಲ್ಲ. ಅದಕ್ಕೋಸ್ಕರ ಅದನ್ನು ಕ್ರಮೇಣ ನಿಲ್ಲಿಸಿದರು. ವೇದವನ್ನು ಕಲಿಸಬೇಕಾದರೆ ದೀರ್ಘಕಾಲ ಇವಳಿಗೆ ಪಾಠ ಹೇಳಿಕೊಡುವ ಒಬ್ಬ ಗುರು ಅತ್ಯವಶ್ಯಕವಾಗಿತ್ತು. ಪತಿಗಿಂತ ಉತ್ತಮನಾದ ಗುರು ಇಲ್ಲವೆಂದು ಅವಳಿಗೆ ಆ ವಯಸ್ಸಿನಲ್ಲಿ ಲಗ್ನ ಮಾಡುತ್ತಿದ್ದರೆಂದು ಹೇಳುವರು. ಆದರೆ ಇದು ಅಂದಿನ ಕಾಲಕ್ಕೆ ಮಾತ್ರ ಸಾಧ್ಯವಾದ ಆದರ್ಶವೆಂಬುದನ್ನು ಮರೆಯದೆ ಇರಬೇಕು. ಆಗ ಮದುವೆಯಾಗುತ್ತಿದ್ದವನು ಬ್ರಹ್ಮಚರ್ಯಾಶ್ರಮದಲ್ಲಿದ್ದು, ಸಂಯಮದ ಗರಡಿಯಲ್ಲಿ ಪಳಗಿ, ಜೀವನದ ಗುರಿ ಏನೆಂಬುದನ್ನು ಅರಿತ ವಿದ್ಯಾವಂತ. ಆದರೆ ಹಿಂದಿನಂತೆ ಆಶ್ರಮಗಳ ಶಿಸ್ತು ಇಂದಿಲ್ಲ. ಅಂದಿನ ಆಧ್ಯಾತ್ಮಿಕ ವಾತಾವರಣ ಇಂದಿಲ್ಲ. ಪ್ರೀತಿಯ ಕಥೆ, ಕಾದಂಬರಿಗಳು, ಚಲನ ಚಿತ್ರಗಳು, ಇವುಗಳ ವಾತಾವರಣದಲ್ಲಿ ಬೆಳೆಯುವನು ಇಂದಿನ ಯುವಕ. ಇವರ ಸ್ವಭಾವಕ್ಕೆ ತಕ್ಕ ಆದರ್ಶವನ್ನು ಒದಗಿಸಿಕೊಡಬೇಕು ಸಮಾಜ. ಇಲ್ಲದಿದ್ದರೆ ಸಮಾಜ ಇನ್ನೂ ಅಧೋಗತಿಗೆ ಇಳಿಯುತ್ತದೆ.

ಕ್ರಿ.ಪೂ. ೪೦೦ ರಿಂದ ಕ್ರಿ.ಶ. ೪೦೦ ರ ವರೆಗೆ ಬಂದ ಸೂತ್ರಕಾರರು ವಿಧವಾ ವಿವಾಹವನ್ನು ಅನುಮೋದಿಸುತ್ತಿದ್ದರು. ವಸಿಷ್ಠನು ಮಕ್ಕಳಿರುವ ಬ್ರಾಹ್ಮಣನ ಸತಿಯಾದರೂ ಪರದೇಶಕ್ಕೆ ಹೋದ ಗಂಡನಿಗಾಗಿ ಐದು ವರುಷಗಳು ಕಾದರೆ ಸಾಕೆಂದು, ನಂತರ ಬೇರೆ ವಿವಾಹವನ್ನು ಮಾಡಿಕೊಳ್ಳಬಹುದೆಂದು ಹೇಳುವನು. (XVII ೬೭). ಕೌಟಿಲ್ಯನು ಹೆಂಗಸು ಗಂಡನಿಗಾಗಿ ಕೆಲವು ತಿಂಗಳು ಕಾದರೆ ಸಾಕೆಂತಲೂ ನಂತರ ಅವಳು ಪುನಃ ಮದುವೆಯನ್ನು ಮಾಡಿಕೊಳ್ಳಬಹುದೆಂದೂ ಹೇಳುತ್ತಾನೆ.

ಕ್ರಿ.ಪೂ. ೨೦೦ ರಿಂದ ವಿಧವಾ ವಿವಾಹಕ್ಕೆ ಅನುಮತಿ ಕ್ರಮೇಣ ಕಡಿಮೆಯಾಗುತ್ತ ಬರುವುದು. ಮನು ಪತಿಯ ಕಾಲಾನಂತರ ಸತಿಯು ಮತ್ತೊಬ್ಬನ ಆಲೋಚನೆಯನ್ನು ಕೂಡ ಮಾಡಬಾರದೆನ್ನುತ್ತಾನೆ (V ೧೫೭). ಕ್ರಿ.ಶ. ೫೦೦ಕ್ಕೆ ಬಂದ ನಾರದನು ವಿಧವಾ ವಿವಾಹವನ್ನು ಅಷ್ಟು ಸಮ್ಮತಿಸದೇ ಇದ್ದರೂ ಗಂಡನು ಕಾಲವಾದರೆ, ಸನ್ಯಾಸಾಶ್ರಮಕ್ಕೆ ಸೇರಿದರೆ, ಅಥವಾ ಅವನು ಎಲ್ಲಿಯಾದರೂ ದೂರ ದೇಶಕ್ಕೆ ಹೊರಟು

ಹೋದರೆ ಮತ್ತೊಂದು ಮದುವೆಗೆ ಸಮ್ಮತಿಯನ್ನು ಕೊಡುವನು (ನಾರದ XII ೯೨). ಪರಾಶರನು ಇದಕ್ಕೆ ಒಪ್ಪಿಗೆಯನ್ನು ಕೊಡುತ್ತಾನೆ (ಪರಾಶರ IV ೨೮).

ಬಾಲ್ಯ ವಿವಾಹ ಜಾರಿಗೆ ಬಂದ ಮೇಲೆ, ಅನೇಕ ವೇಳೆ ಪತಿ ಕಾಲವಾದರೆ ಅಂತಹ ಸಮಯಗಳಲ್ಲಿ ಬಾಲವಿತಂತು ಮತ್ತೊಮ್ಮೆ ಲಗ್ನ ವಾಗಬಹುದೆಂದು ಸೂತ್ರಕಾರರು ಮೊದಲು ಸಹಾನುಭೂತಿಯನ್ನು ತೋರುತ್ತಾರೆ. ಕೇವಲ ಮದುವೆ ಮಾತ್ರವಾಗಿದ್ದು, ಪತಿಯೊಂದಿಗೆ ಜೀವಿಸುವುದಕ್ಕೆ ಮುಂಚೆ ಅವನು ಕಾಲವಾದರೆ ಅಂತಹವಳು ಮತ್ತೊಂದು ಲಗ್ನವನ್ನು ಮಾಡಿಕೊಳ್ಳಬಹುದೆಂದು ವಸಿಷ್ಠ (XVII-೭) ಮತ್ತು ಬೋಧಾಯನರು (II ೩-೪೭) ಅಭಿಪ್ರಾಯವನ್ನು ಕೊಡುತ್ತಾರೆ. ಲಘುಶಾತಾತಪನು ಅಂತಹ ಹುಡುಗಿಯು ಮದುವೆಯಾಗಿಲ್ಲವೆಂತಲೇ ಭಾವಿಸಬೇಕೆಂದೂ ಅವಳಿಗೆ ಮತ್ತೊಂದು ವಿವಾಹವನ್ನು ಮಾಡಲು ಅನುಮತಿಯನ್ನು ಕೊಡುತ್ತಾನೆ (V ४४).

ಕ್ರಿ. ಶ. ೬೦೦ ರ ಮೇಲೆ ವಿಧವಾ ವಿವಾಹಕ್ಕೆ ವಿರೋಧವಾದ ಅಭಿಪ್ರಾಯಗಳು ಬರಲು ಮೊದಲಾದವು. ಈ ಕಾಲಾನಂತರ ಬಂದ ಸ್ಮೃತಿಕಾರರು ಇದನ್ನು ಬಹಳ ಕಟುವಾಗಿ ವಿರೋಧಿಸಲು ಮೊದಲು ಮಾಡಿದರು. ಆಗಿನ ಕಾಲದಲ್ಲಿ ಬಳಕೆಯಲ್ಲಿದ್ದ ವಿಧವಾ ವಿವಾಹಕ್ಕೆ ಅನುಮತಿಯನ್ನು ಕೊಡುವ ಶ್ಲೋಕಗಳನ್ನು, ಅದು ಹಿಂದಿನ ಯುಗಕ್ಕೆ ಸಂಬಂಧಪಟ್ಟದ್ದೆಂದು ವಾದಿಸಲು ಮೊದಲು ಮಾಡಿದರು. ಇದೇ ಕಾಲದಲ್ಲಿ ಬಂದ ಆದಿತ್ಯಪುರಾಣ ವಿಧವಾ ವಿವಾಹ ಕಲಿಯುಗಕ್ಕೆ ಅನ್ವಯಿಸುವುದಿಲ್ಲವೆನ್ನುವುದು (XXI. ೧೪). ಮಾಧವನು ವಿಧವಾ ವಿವಾಹಕ್ಕೆ ಸಮ್ಮತಿಯನ್ನು ಕೊಡುವ ಪರಾಶರ ಸ್ಮೃತಿಯ ಮೇಲೆ ಟೀಕೆ ಮಾಡುವಾಗ ಅದು ಹಿಂದಿನ ಯುಗಕ್ಕೆ ಅನ್ವಯಿಸುತ್ತದೆಯೇ ಹೊರತು ಕಲಿಯುಗಕ್ಕೆ ಅನ್ವಯಿಸುವುದಿಲ್ಲವೆನ್ನುತ್ತಾನೆ.

ಕ್ರಿ.ಶ. ೧೦೦೦ ದಿಂದ ಬಾಲವಿತಂತುವನ್ನು ಯಾರೂ ಮದುವೆ ಮಾಡಿಕೊಳ್ಳಕೂಡದೆಂಬ ನಿಯಮವನ್ನು ಜಾರಿಗೆ ತಂದರು. ದೇವಣ್ಣ ಭಟ್ಟನು (ಕ್ರಿ.ಶ. ೧೧೫೦) ವಿಧವಾ ವಿವಾಹಕ್ಕೆ ಸಮ್ಮತಿಸುವ ಸ್ಮೃತಿಗಳು ಕಲಿಯುಗಕ್ಕೆ ಅನ್ವಯಿಸುವುದಿಲ್ಲವೆನ್ನುತ್ತಾನೆ (ಸ್ಮೃತಿ ಚಂದ್ರಿಕಾ ೨೨೧). ಕೆಲವರು ವಿಧವೆ ಎನ್ನುವುದಕ್ಕೆ ವಿಪರೀತ ಅರ್ಥವನ್ನೇ ಕಲ್ಪಿಸುತ್ತಾರೆ. ಹುಡುಗಿಯನ್ನು ಒಬ್ಬ ಹುಡುಗನಿಗೆ ಮದುವೆ ಮಾಡಿಕೊಡುತ್ತೇನೆ ಎಂದು

ಮಾತು ಕೊಟ್ಟಿದ್ದರೆ ಸಾಕು, ಆಲೋಚನೆ ಮಾಡಿದ್ದರೆ ಸಾಕು, ಆ ವರನು ವಿಧಿವಶದಿಂದ ಕಾಲವಾದರೆ, ಪಾಪ ಆ ಮಗು ತನ್ನ ಜೀವನವನ್ನೆಲ್ಲ ಚಿರ ವೈಧವ್ಯದಲ್ಲಿ ಕಳೆಯಬೇಕಾಗಿತ್ತು (ಕಾಶ್ಯಪನು ಸ್ಮೃತಿ ಚಂದ್ರಿಕೆಯಲ್ಲಿ ಪುಟ, ೨೦೨). ಯಾರಾದರೂ ತಿಳಿಯದೆ ಇಂತಹ ಹುಡುಗಿಯನ್ನು ಮದುವೆಯಾದರೆ ಅದು ತಿಳಿದೊಡನೆಯೆ ಅವಳನ್ನು ತ್ಯಜಿಸಿ ಒಂದು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗಿತ್ತು! (ಲಘು ಆಶ್ವಲಾಯನ XXI. ೬). ಆದರೆ ಇದೇ ಸಮಯದಲ್ಲಿ ಗಂಡಸಿಗೆ ಏನಾದರೂ ಹೆಂಡತಿ ಕಾಲವಾದರೆ ಅವಳಿಗೋಸುಗವಾಗಿ ಇವನು ಸುರಿಸುವ ಕಣ್ಣೀರು ಕೂಡ ಆರದಿರುವಾಗಲೆ ಮದುವೆ ಮಾಡಿಕೊಳ್ಳಬಹುದಾಗಿತ್ತು!

ಬಲವಂತದಿಂದ ಸಮಾಜವು ಎಂದು ಸ್ತ್ರೀಯರನ್ನು ಸಂಯಮಿಗಳನ್ನಾಗಿ ಮಾಡಲು ಉಪಕ್ರಮಿಸಿತೋ ಅಂದಿನಿಂದಲೇ ಅನೇಕ ನ್ಯೂನಾತಿರೇಕಗಳು ನಮ್ಮ ಸಮಾಜದಲ್ಲಿ ತಲೆದೋರಿದವು. ಪತಿಯ ಆಸರೆ ಇಲ್ಲದೆ ಬಾಲ್ಯದಲ್ಲಿಯೇ ಅವನನ್ನು ನೀಗಿಕೊಂಡು ಜಗದಲ್ಲಿ ಬಾಳನ್ನು ಹೊರುತ್ತಿರುವಾಗ ಒಮ್ಮೆ ಎಡವಿದರೆ ಸಾಕು, ಸಮಾಜದ ಕಟುನಿಂದೆಗೆ ಈಡಾಗುತ್ತಿದ್ದರು. ಅಂತಹವರು ವಾರಾಂಗನೆಯ ಕೆಲಸಕ್ಕೆ ಕೈಹಾಕಬೇಕಾಗಿತ್ತು: ಇಂತಹ ಪ್ರಸಂಗಗಳು ಹಲವು ಇವೆ (ಕಾಮಸೂತ್ರ IV. ೨). ಬಲಾತ್ಕಾರದಿಂದ ಪುರುಷನಾಗಲೀ ಸ್ತ್ರೀಯರಾಗಲೀ ಇಂದ್ರಿಯಗಳನ್ನು ನಿಗ್ರಹಿಸಲಾರರು. ಇಂದ್ರಿಯಗಳನ್ನು ನಿಗ್ರಹಿಸಬೇಕೆಂಬ ಇಚ್ಛೆ ತಮ್ಮ ಅಂತರಾಳದಿಂದ ಬರಬೇಕು. ಸಮಾಜದ ಕಟ್ಟುಗಳ ಪಂಜರದಲ್ಲಿರುವಾಗ ತೋರಿಕೆಗೆ ಅವರು ಸಾಧುವಾಗಿ ಕಾಣಬಹುದು. ಆದರೆ ಅದರಿಂದ ಅವರ ಮನಸ್ಸಿನ ಮೇಲೆ, ನಂತರ ಸಮಾಜದ ಮೇಲೆ, ಘೋರ ಪರಿಣಾಮವಾಗುವುದು.

ತಮ್ಮ ಜೀವನವನ್ನು ಪತಿಯ ಕಾಲಾನಂತರ ಭಗವಂತನ ಪ್ರಾರ್ಥನೆಯಲ್ಲಿ ಮತ್ತು ಜನರ ಸೇವೆಯಲ್ಲಿ ಕಳೆಯಲು ಇಚ್ಛಿಸುವ ವಿಧವೆಯರಿಗೆ ತಕ್ಕ ವಾತಾವರಣವನ್ನು ಕಲ್ಪಿಸಿಕೊಡುವುದೊಳ್ಳೆಯದು. ಹಿಂದೂ ಸಮಾಜದಲ್ಲಿ ಅವರಿಗೆ ಯಾವಾಗಲೂ ಗೌರವದ ಸ್ಥಾನವಿದೆ. ಆದರೆ ಯಾರು ಆ ಮಟ್ಟಕ್ಕೆ ಏಳಲಾರರೋ, ಯಾರೆದೆಯಲ್ಲಿ ಪ್ರಪಂಚವನ್ನು ಅನುಭವಿಸಬೇಕೆಂಬ ಆಸೆ ಇನ್ನೂ ಕುದಿಯುತ್ತಿರುವುದೋ ಅವರ ಕೈಗೆ ನಿಲುಕುವ ಒಂದು ಆದರ್ಶವನ್ನು ಸಮಾಜ ಒದಗಿಸಿ ಕೊಡಬೇಕು. ವಿಧವಾ ವಿವಾಹ ಹಿಂದೆ ಕೆಲವು ವೇಳೆ ಜಾರಿಯಲ್ಲಿತ್ತು ಎನ್ನುವುದನ್ನು

ನೋಡಿದೆವು. ಆದರೆ ಕಾಲಕ್ರಮದಲ್ಲಿ ಇದು ನಿಂತು ಹೋಯಿತು. ಮತ್ತೊಮ್ಮೆ ನಾವು ಗಮನಕ್ಕೆ ತೆಗೆದುಕೊಳ್ಳಬೇಕಾದ ಸಂಗತಿ ಇದು.

ಮಹಮ್ಮದೀಯರು ಭರತಖಂಡದಮೇಲೆ ಧಾಳಿ ಎತ್ತಲು ಮೊದಲು ಮಾಡಿದಂದಿನಿಂದ ನಮ್ಮ ಸ್ತ್ರೀಯರ ಗತಿ ಮತ್ತೂ ಶೋಚನೀಯವಾಗುತ್ತ ಬಂದಿತು. ಹಿಂದೂ ರಾಜರುಗಳು ಐಕಮತ್ಯವಿಲ್ಲದೆ ತಮ್ಮತಮ್ಮಲ್ಲಿ ಕಾದು ಬಲಹೀನರಾದರು. ದಂಡೆತ್ತಿ ಬಂದ ಮಹಮ್ಮದೀಯರ ಬಲೆಗೆ ಬೀಳುತ್ತ ಒಬ್ಬೊಬ್ಬರಾಗಿ ಉತ್ತರ ಭರತಖಂಡದ ರಂಗದಿಂದ ಕಣ್ಮರೆಯಾಗುತ್ತ ಬಂದರು. ಎಂದು ಹಿಂದೂ ರಾಜರ ಬಲ ಕುಂದಿತೋ ಅಂದಿನಿಂದಲೇ ಹಿಂದೂ ಸಮಾಜ ಅನ್ಯ ಧರ್ಮದೊಂದಿಗೆ ಕಾದಬೇಕಾಯಿತು. ಆಗ ಹಿಂದೂ ಧರ್ಮದ ಗುರಿ ಅಭಿವೃದ್ಧಿಯಲ್ಲ, ಇರುವುದನ್ನು ಹೇಗಾದರೂ ಉಳಿಸಿಕೊಳ್ಳಬೇಕೆಂಬುದಾಯಿತು. ಸೂತ್ರಕಾರರು ನಾರಿಯರನ್ನು ಇನ್ನೂ ಹೆಚ್ಚು ಬಂಧನಗಳಿಂದ ಬಿಗಿಯ ತೊಡಗಿದರು. ಎಂಟು ವರುಷಕ್ಕೆ ಮುಂಚೆಯೇ ವಿವಾಹ ಜರುಗಲು ಮೊದಲಾಯಿತು. ಮಹಮ್ಮದೀಯರ ಪ್ರಾಬಲ್ಯವಿದ್ದೆಡೆಯಲ್ಲೆಲ್ಲಾ ಘೋಷಾ ಪದ್ಧತಿ ಜಾರಿಗೆ ಬಂದಿತು. ಸಹ ಗಮನದ ಉರಿ, ದೇಶದ ನಾನಾಕಡೆ ಎದ್ದಿತು. ಇದಾವುದೂ ವೈದಿಕ ಕಾಲದಲ್ಲಿರಲಿಲ್ಲ. ಪತಿಯನ್ನು ಚಿತೆಗೇರಿಸಿ ಬರುವ ವಿಧವೆಯನ್ನು ಮಕ್ಕಳು ಮತ್ತು ಆಸ್ತಿಯೊಂದಿಗೆ ಸುಖವಾಗಿರು ಎಂದು ಹರಸುವ ಹಲವು ಮಂತ್ರಗಳು ಅಥರ್ವ ವೇದದಲ್ಲಿವೆ (XVII ೨. ೧.). ರಾಮಾಯಣದಲ್ಲಿ ದಶರಥನ ಕಾಲಾನಂತರ ಅವನ ಸತಿಯರಾರು ಚಿತಿಯನ್ನೇರುವುದಿಲ್ಲ. ಮಹಾಭಾರತದಲ್ಲಿ ಮಾದ್ರಿ ಪಾಂಡುವಿನೊಂದಿಗೆ ಚಿತೆಗೇರಿದರೂ ಕೂಡ ಅಲ್ಲಿರುವ ಋಷಿಗಳೆಲ್ಲ ಬೇಡವೆನ್ನುತ್ತಾರೆ. ಘಟೋದ್ಗಜನ ಸತಿ, ಅಭಿಮನ್ಯುವಿನ ಸತಿ ಇವರೆಲ್ಲ ವಿಧವೆಯರಾಗಿಯೇ ಜೀವಿಸಿರುತ್ತಾರೆ. ಆಪಸ್ತಂಭ ಧರ್ಮ ಸೂತ್ರದಲ್ಲಿ ಅದರ ಹೆಸರೇ ಇಲ್ಲ. ಬುದ್ಧನ ಕಾಲದಲ್ಲಿ ಕೂಡ ಇದು ಇರಲಿಲ್ಲ. ಇದ್ದಿದ್ದರೆ ಒಂದು ಮೂಕ ಕುರಿಗೋಸುಗವಾಗಿ ತನ್ನ ಪ್ರಾಣವನ್ನು ತೆರಲು ಸಿದ್ಧನಾದ ಬುದ್ಧ ಇದನ್ನು ನಿಲ್ಲಿಸದೆ ಇರುತ್ತಿರಲಿಲ್ಲ. ಮೆಗಾಸ್ತನೀಸ್ ಮತ್ತು ಕೌಟಿಲ್ಯರು ಇದರ ಹೆಸರನ್ನೇ ಹೇಳುವುದಿಲ್ಲ. ಕ್ರಿ.ಪೂ. ೬೦೦ರ ರಿಂದ ಕ್ರಿ.ಪೂ. ೩೦೦ರ ವರೆವಿಗೆ ಬಂದ ಸ್ಮೃತಿಗಳೆಲ್ಲ ವಿಧವೆ ಏನೇನು ಮಾಡಬೇಕೆಂದು ಹೇಳುತ್ತವೆ. ಆದರೆ ಸತಿಯ ಸುದ್ದಿಯೇ ಇಲ್ಲ. ಅನಂತರವೂ ಕೂಡ ಇದು ಬಳಕೆಯಲ್ಲಿದ್ದಾಗಲೂ ಅನೇಕರು ಇದನ್ನು ವಿರೋಧಿಸುತ್ತಿದ್ದರು. ಮೇಧತಿಥಿ ಇದನ್ನು ವಿರೋಧಿ

ಸುತ್ತಾನೆ. ದೇವಣ್ಣಭಟ್ಟ (೧೨ ಶತಮಾನ) ಇದನ್ನು ಬಹಳ ಹೀನವಾದ ಆಚಾರವೆಂದು ಅಲ್ಲಗಳೆಯುತ್ತಾನೆ. ಮೊದಲು ಇದು ಕ್ಷತ್ರಿಯರಲ್ಲಿ ಬಳಿಕೆಗೆ ಬಂದು ನಂತರ ಉಳಿದ ವರ್ಗಗಳಿಗೂ ಹರಡಿತು.

ಕ್ರಿ. ಶ. ಒಂಭತ್ತನೇ ಶತಮಾನದವರೆಗೆ ಅಪಹೃತಳಾದ, ಅನ್ಯ ಧರ್ಮಕ್ಕೆ ಸೇರಿದ ಹಿಂದೂ ನಾರಿಯನ್ನು ಪುನಃ ಸ್ವೀಕರಿಸಬಹುದಾಗಿತ್ತು. ಆಕೆ ಒಂದು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾಗಿತ್ತು ಅಷ್ಟೆ. ವಸಿಷ್ಠನು ಧರ್ಮಸೂತ್ರದಲ್ಲಿ, ಸ್ತ್ರೀ ವೈರಿಯಿಂದ ಅಪಹೃತಳಾದರೆ, ಬಲಾತ್ಕಾರದಿಂದ ಮಾನಭಂಗಕ್ಕೆ ಒಳಗಾದರೆ ಅವಳನ್ನು ಮನೆಯವರು ತ್ಯಜಿಸಕೂಡದು ಎಂದಿರುವನು (ವಸಿಷ್ಠ XXVIII ೨-೩). ಅತ್ರಿಯೂ ಕೂಡ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ (V ೩೫). ಪರಾಶರನು ಕೂಡ ಇದನ್ನು ಅನುಮೋದಿಸುತ್ತಾನೆ. ಎಲ್ಲಿಯವರೆವಿಗೆ ತಾವು ತಪ್ಪಿಸಿಕೊಂಡು ಬಂದರೆ ಸಮಾಜ ತಮ್ಮನ್ನು ಸ್ವೀಕರಿಸುತ್ತದೆ ಎಂದಿದ್ದರೋ ಅಲ್ಲಿಯವರೆವಿಗೂ ಅವರು ತಪ್ಪಿಸಿಕೊಂಡು ಬರಲು ಪ್ರಯತ್ನಿಸುತ್ತಿದ್ದರು; ಇಲ್ಲವೇ ಛಲದಿಂದ ಮಾನವನ್ನು ಕಾಪಾಡಿಕೊಳ್ಳಲು ಪ್ರಾಣವನ್ನಾದರೂ ಬಿಡುತ್ತಿದ್ದರು. ಎಂದು ನಮ್ಮ ಸ್ಮೃತಿಕಾರರು ಮಹಮ್ಮದೀಯರಿಂದ ಅಪಹೃತಳಾದ ಸ್ತ್ರೀಗೆ ಸ್ವಾಗತವನ್ನು ಕೊಡದೆ, ನಮ್ಮ ಸಮಾಜದ ಬಾಗಿಲನ್ನು ಹಾಕಿದರೊ ಅಂದಿನಿಂದ ಅವರು ತಪ್ಪಿಸಿಕೊಂಡು ಬರುವುದನ್ನು ಬಿಟ್ಟರು. ನಾಯಿ ಮುಟ್ಟಿದ ಕೂಳನ್ನು ನಾಯಿಗೇ ಎಸೆಯಿರಿ ಎಂಬ ಪೈಶಾಚಿಕ ದೃಷ್ಟಿ ನಮ್ಮೆದೆಯಲ್ಲಿ ನಾಟಿತು. ನಮ್ಮ ಹೇಡಿತನದಿಂದ ಅನ್ಯರ ಪಾಲಾಗುತ್ತಿದ್ದ ಅಕ್ಕತಂಗಿಯರ, ನಮಗೆ ಜನ್ಮವಿತ್ತ ತಾಯಂದಿರ ಗೋಳನ್ನು ಮರೆತೆವು. ನಮ್ಮ ಹೃದಯ ಪಾಷಾಣವಾಯಿತು. ಭರತ ಖಂಡದಲ್ಲಿ ಮಹಮ್ಮದೀಯರ ಜನಸಂಖ್ಯೆ ಹೆಚ್ಚಾಗಲು ಅವರ ಸಂತಾನರಾದ ನಾವು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗಿದೆ. ಭರತಖಂಡದಲ್ಲಿ ಈಗಿರುವ ಮಹಮ್ಮದೀಯರೆಲ್ಲ ಮೆಕ್ಕಾದಿಂದ ಬಂದವರಲ್ಲ. ಕೆಲವು ತಲೆಗಳ ಹಿಂದೆ ಅವರೆಲ್ಲ ನಮ್ಮ ಕುಲಕ್ಕೆ ಸೇರಿದ್ದರು. ನಮ್ಮ ಸಮಾಜದ ನಿರ್ದಯ ಸಂಕುಚಿತ ದೃಷ್ಟಿಯಿಂದ ಪುನಃ ಅವರು ಇಲ್ಲಿಗೆ ಬರಲಾಗಲಿಲ್ಲ. ಅವರ ಗೋಳಿಗೆ ಕುರುಡು ಕಿವಿಗೊಟ್ಟೆವು. ಅವರ ದುಃಖ ನಮ್ಮ ಎದೆಗೆ ತಗಲಲಿಲ್ಲ. ಅನ್ಯಧರ್ಮದ ಪಾಲಾದ ಹಿಂದಿನ ನಮ್ಮ ಅಕ್ಕತಂಗಿಯರು, ತಾಯಂದಿರು ನರಳಿ ಸಿರಾಶೆಯಿಂದ ಜನ್ಮವಿತ್ತ ಸಂತಾನ ಹೇಗೆ ಸ್ನೇಹಿತರಾಗಬಲ್ಲರು. ಹಿಂದೂ ಮಹಮ್ಮದೀಯ ಘರ್ಷಣೆ ನೆವದಲ್ಲಿ

ಹರಿದ ರಕ್ತಪಾತಕ್ಕೆ ಒಂದು ಕಾರಣ ನಮ್ಮಲ್ಲಿಯೇ ಇದೆ. ಇದರ ವಿಷ ಬೀಜವನ್ನು ಹಿಂದಿನ ನಮ್ಮವರು ಬಿತ್ತರು. ನಾವು ಅದರ ಫಲವನ್ನು ಅನುಭವಿಸಬೇಕಾಗಿದೆ. ಹಿಂದೂ ಸಮಾಜ ತನ್ನ ದೃಷ್ಟಿಯನ್ನು ಈಚೆಗೆ ನಡೆದ ಘಟನೆಯ ದೃಷ್ಟಿಯಿಂದ ಸರಿಪಡಿಸಿಕೊಳ್ಳಬೇಕು.

ಮುಸುಕು ಹಾಕಿಕೊಳ್ಳುವುದು ವೇದದ ಕಾಲದಲ್ಲಿ ಇರಲಿಲ್ಲ. ಮದುವೆಯಾದ ಮೇಲೆ ವಧುವನ್ನು ಎಲ್ಲರಿಗೂ ತೋರಬೇಕೆಂದು ಋಗ್ವೇದದಲ್ಲಿದೆ (X ೮೫-೩೩). ಮುಸುಕು ಪೌರಾಣಿಕ ಕಾಲದಲ್ಲಿರಲಿಲ್ಲ. ಸೀತೆ ದ್ರೌಪದಿಯರು ಇದನ್ನು ಅನುಸರಿಸುತ್ತಿರಲಿಲ್ಲ. ಭಾಸ, ಶೂದ್ರಕರ ಕಾಲಕ್ಕೆ ರಾಜಾಸ್ಥಾನದ ಕೆಲವು ನಾರಿಯರು ಅದನ್ನು ಒಂದು ಸ್ಥಾನ ಗೌರವವಾಗಿ ಉಪಯೋಗಿಸುತ್ತಿದ್ದರು. ಕಾಳಿದಾಸನ ಕಾಲಕ್ಕೆ ಅದರ ಸುಳಿವೇ ಇಲ್ಲ. ಅಜಂತಗುಹೆಗಳಲ್ಲಿರುವ ಚಿತ್ರಗಳಲ್ಲಿ ಮತ್ತು ಆಗಿನ ಕಾಲಕ್ಕೆ ಸಂಬಂಧಪಟ್ಟ ಶಿಲ್ಪಗಳಲ್ಲಿ ಅದಕ್ಕೆ ಪ್ರಮಾಣವಿಲ್ಲ. ಎಲ್ಲರಿಗೂ ಕಾಣುವಂತೆ ಮಹಡಿಯ ಮೇಲೆ ನಿಂತು ಆಟಪಾಟಗಳನ್ನು ನೋಡುತ್ತಿದ್ದುದು ಚಿತ್ರಿತವಾಗಿದೆ. ಮನು ಅಥವಾ ಯಾಜ್ಞವಲ್ಕ್ಯರ ಸ್ಮೃತಿಗಳಲ್ಲಿ ಅದರ ಮಾತೆ ಇಲ್ಲ. ಮಹಮ್ಮದೀಯರು ಧಾಳಿ ಇಟ್ಟಂದಿನಿಂದ ಉತ್ತರ ದೇಶದಲ್ಲಿ ಹಲವು ಹೆಂಗಸರು ಇದನ್ನು ಅನುಸರಿಸಿದರು. ಇದಾದರೂ ತಮ್ಮನ್ನು ಕ್ರೂರ ಕಾಮುಕರ ನೋಟದಿಂದ ತಪ್ಪಿಸಬಹುದೆಂದು ತಿಳಿದಿದ್ದರು.

ನಾರಿಯರ ಆತ್ಮ ವಿಕಾಸಕ್ಕೆ ಎಷ್ಟೋ ಅಡಚಣೆಗಳು ಬಂದೊದಗಿದರೂ ಕೂಡ ನಾರೀ ಭಕ್ತರತ್ನಗಳೆಷ್ಟೊ ಭರತ ಖಂಡದ ಮೂಲೆ ಮೂಲೆಗಳಲ್ಲಿ ಬೆಳಗಿದುವು. ಮೀರಾಬಾಯಿ ರಾಜ್ಯ ಸುಖಕ್ಕೆ ತರ್ಪಣಕೊಟ್ಟು ಶ್ರೀಕೃಷ್ಣನ ಮೇಲೆ ಪ್ರೇಮೋನ್ಮತ್ತಳಾಗಿ ತನ್ನ ಜೀವನವನ್ನೆಲ್ಲ ಆತನ ಗುಣಗಾನದಲ್ಲಿ ಕಳೆದಳು. ಮಹಾರಾಷ್ಟ್ರದಲ್ಲಿ ಸಖೂಬಾಯಿ, ಮುಕ್ತಾಬಾಯಿ ಮುಂತಾದವರು, ದಕ್ಷಿಣದಲ್ಲಿ ಅವ್ವೈ, ಆಂಡಾಳ್, ಅಕ್ಕಮಹಾದೇವಿ ಮುಂತಾದ ವ್ಯಕ್ತಿಗಳೆಷ್ಟೊ ಬಂದು ಹೋದರು.

ಎಂತಹ ನಿಪುಣನಿಗೂ ಕೂಡ ತಲೆ ನೋವು ತರುವ ರಾಜ್ಯಾಡಳಿತದ ಭಾರವನ್ನು ವಹಿಸುವುದು ಕೂಡ ಇವರಿಗೆ ಅಸಾಧ್ಯವಾಗಿರಲಿಲ್ಲ. ಸಾವು ನೋವಿನಿಂದ ಕೂಡಿದ ರಣರಂಗಕ್ಕೂ ಇವರು ಅಪರಿಚಿತರಲ್ಲ. ಸುಗಂಧಿ, ದಿದ್ದ ಮೊದಲಾದ ವಿಧವೆಯರಾದ ರಾಣಿಯರೂ ರಾಜ್ಯಭಾರವನ್ನು ವಹಿಸಿಕೊಂಡರು. ಪೃಥ್ವಿರಾಜನ ಸಮೇತ ಯುದ್ಧ ಮಾಡುವಾಗ

ಸಮರಶಿ ಕಾಲವಾಗಲು ಅವನ ಸತಿ ಕುಮಾರದೇವಿ ರಾಜ್ಯಾಡಳಿತವನ್ನು ತಾನೇ ವಹಿಸಿ, ದಂಡೆತ್ತಿ ಬರುತ್ತಿದ್ದ ಕುತುಬುದ್ದೀನನನ್ನು ತಡೆಗಟ್ಟಿದಳು. ಗುಜರಾತಿನ ಸುಲ್ತಾನ್ ಬಹುದ್ದೂರ್ ಷಾ, ಚಿತ್ತೂರಿನ ಮೇಲೆ ಧಾಳಿ ಮಾಡಿದಾಗ ಗತಿಸಿದ ರಾಣಾಸಿಂಗನ ಸತಿ, ಕರ್ಣವತಿ ಅವನನ್ನು ಎದುರಿಸಿದಳು. ಮಹಾರಾಷ್ಟ್ರದ ಚರಿತ್ರೆಯಲ್ಲಿ, ಕೊಲ್ಹಾಪುರದ ತಾರಾದೇವಿ, ಇಚಾಲ್‌ಕರಂಜಿಯ ಅನೂಬಾಯಿ ಘೋರ್ಪಡೆ, ಇಂದೂರಿನ ಅಹಲ್ಯಾಬಾಯಿ, ಝಾನ್ಸಿ ಲಕ್ಷ್ಮೀಬಾಯಿ, ಮುಂತಾದವರು ತಮ್ಮ ವಿರೋಧಿಗಳಿಂದಲೂ ಕೂಡ ಮುಕ್ತಕಂಠದಿಂದ ಹೊಗಳಿಕೆಗೆ ಪಾತ್ರರಾಗಿದ್ದರು. ಅವರು ಇಂದಿನ ಮಹಾರಾಜರುಗಳಂತೆ ಕೇವಲ ಒಂದು ಸಹಿ ಮಾಡುವ ಯಂತ್ರವಾಗಿರಲಿಲ್ಲ. ರಾಜ್ಯದ ಪ್ರತಿಯೊಂದು ಆಡಳಿತದಲ್ಲಿಯೂ ಒಳಹೊಕ್ಕು ಪರಿಶೀಲಿಸುತ್ತಿದ್ದರು. ಇದನ್ನೆಲ್ಲ ನೋಡಿದ ಒಬ್ಬ ಆಂಗ್ಲ ಅಧಿಕಾರಿಯೆ ಜೇಮ್ಸ್ ಸ್ಟುಯರ್ಟ್ ಮಿಲ್ಲನಿಗೆ ಬರೆದ ಕಾಗದದಲ್ಲಿ ರಾಣಿಯರ ಕೈಕೆಳಗಿದ್ದ ಹಲವು ರಾಜ್ಯಗಳು ಬಹಳ ಒಳ್ಳೆಯ ಸ್ಥಿತಿಯಲ್ಲಿದ್ದುವೆಂದೂ, ದಕ್ಷತೆಯಿಂದಲೂ ಮಿತವ್ಯಯದಿಂದಲೂ ಅಧಿಕಾರಿಗಳು ಕೆಲಸ ಮಾಡುತ್ತಿದ್ದರೆಂದೂ ಮುಕ್ತಕಂಠದಿಂದ ಹೊಗಳಿದ್ದಾನೆ.

ಅನೇಕ ಕಟ್ಟುನಿಟ್ಟುಗಳಿಂದ ಬಂಧಿಸಿರುವಾಗಲೇ ಇಂತಹ ನಾರೀರತ್ನಗಳು ಹಲವು ಜನಿಸಿದುವು. ಭರತಖಂಡದಲ್ಲಿ ಆಕೆಯ ಆತ್ಮವಿಕಾಸಕ್ಕೆ ಜ್ಞಾನಾರ್ಜನೆಗೆ ಹಿಂದೂ ಸಮಾಜ ಸರಿಯಾದ ವಾತಾವರಣವನ್ನು ಕಲ್ಪಿಸಿಕೊಟ್ಟರೆ, ವೀರ ಮಾತೆಯರಿಗೆ, ವಿದ್ಯಾವತಿಯರಿಗೆ, ಪಾವನ ತಪಸ್ವಿನಿಯರಿಗೆ ಬರುವುದೇ ಬರಗಾಲ!

ಕಳೆದ ಶತಮಾನದ ಮಧ್ಯಭಾಗದಲ್ಲಿ ಆಂಗ್ಲ ಚಕ್ರಾಧಿಪತ್ಯದ ಅಡಿಗೆ ಹಿಮಾಲಯದಿಂದ ಕನ್ಯಾಕುಮಾರಿಯವರಿಗೆ, ಸಿಂಧೂ ನದಿಯಿಂದ ಇರಾವಾಡಿ ನದಿಯವರಿಗೆ ಇರುವ ಭಿನ್ನ ಭಿನ್ನ ಭಾಷೆಗಳಿಂದ ಕೂಡಿದ ಭರತಖಂಡವೆಲ್ಲವೂ ಬಂದಿತು. ಆಂಗ್ಲೇಯ ವಿದ್ಯಾಸಂಸ್ಥೆಗಳು ಭರತಖಂಡದ ಮೂಲೆ ಮೂಲೆಯಲ್ಲಿ ಸ್ಥಾಪಿತವಾಗತೊಡಗಿದವು. ಆಂಗ್ಲಭಾಷೆಯ ಮೂಲಕ ಪಾಶ್ಚಾತ್ಯ ಸಂಸ್ಕೃತಿ, ವಿಜ್ಞಾನ, ಧರ್ಮ, ಸಾಹಿತ್ಯ, ರಾಜಕೀಯ ವಿಷಯಗಳು ಮತ್ತು ಸಾಮಾಜಿಕ ಭಾವನೆಗಳು ಕ್ರಮೇಣ ಹಿಂದೂ ದೇಶದ ವಾತಾವರಣದಲ್ಲಿ ತಮ್ಮ ಪ್ರಭಾವವನ್ನು ಬೀರಿದವು. ಪರೋಪಕಾರ ಮಾಡುವ ನೆವದಲ್ಲಿ ವಿದ್ಯೆಯನ್ನು ಜನಸಮುದಾಯಕ್ಕೆ ಹಂಚುವ ನೆವ ಹೂಡಿ ಕ್ರೈಸ್ತಧರ್ಮಾನುಯಾಯಿಗಳು ಸಾರ್ವಭೌಮ

ಸರ್ಕಾರದ ಸಹಾಯದಿಂದ ಚಿಕಿತ್ಸಾಲಯ, ಅನಾಥಾಲಯ, ಪಾಠಶಾಲೆ, ಪ್ರೌಢವಿದ್ಯಾಸಂಸ್ಥೆ ಮುಂತಾದುವನ್ನು ಸ್ಥಾಪಿಸಿದರು. ತಮ್ಮ ಸೇವೆಯಿಂದ ಭಾರತೀಯರ ಮನಸ್ಸನ್ನು ಒಲಿಸಿ ನಂತರ ಆಕ್ರಮಿಸಿ, ಕ್ರಮೇಣ ತಮ್ಮ ಮತದ ಪ್ರಾಶಸ್ತ್ಯವನ್ನೂ, ಅನ್ಯಮತೀಯರ ಆಚಾರ ವ್ಯವಹಾರ, ಅವರು ಪೂಜಿಸುವ ದೇವರು, ಇವನ್ನು ನಿಂದಿಸುವ ವಿಷಬೀಜವನ್ನು ಹಿಂದುಗಳೆದೆಯಲ್ಲಿ ಬಿತ್ತಲು ಮೊದಲು ಮಾಡಿದರು. ಮೊದಮೊದಲು ಪಾಶ್ಚಾತ್ಯರ ಸಮ್ಮೋಹನಾಸ್ತ್ರಕ್ಕೆ ಮರುಳಾಗಿ ನಮ್ಮವರು ಬಲಿಗೆ ಬೀಳುತ್ತಿದ್ದರು. ಕೆಲವು ಕಾಲದ ಮೇಲೆ ಹಿಂದೂಧರ್ಮ ಜಾಗ್ರತವಾಯಿತು. ಆರ್ಯ ಸಂಸ್ಕೃತಿಗೂ ಪಾಶ್ಚಾತ್ಯಸಂಸ್ಕೃತಿಗೂ ಒಂದು ಮೌನವಾದ ಆದರೆ ಘೋರತರವಾದ ಸಮರ ನಡೆಯುತ್ತಿದೆ ಎಂಬುದು ವ್ಯಕ್ತವಾಯಿತು. ಈ ಸಂಸ್ಕೃತಿಗಳ ಸಮರ ಬಾಹ್ಯ ಸಮರದಂತೆ ಗೋಚರಿಸದೆ ಇರಬಹುದು. ಕಲಿಗಳ ಆರ್ಭಟವಿಲ್ಲ. ಮದ್ದು ಗುಂಡುಗಳ ಸಿಡಿತವಿಲ್ಲ. ಆದರೂ ಇದರ ಪರಿಣಾಮ ಯುದ್ಧವನ್ನು ಮೀರಿರುವುದು. ಭರತಖಂಡ ಹಿಂದೆ ಅನೇಕರೊಂದಿಗೆ ಹೋರಾಡಿತು. ಕೆಲವು ವೇಳೆ ಸೋತಿತು. ಆದರೆ ಅಂದು ನಾವು ಕಳೆದುಕೊಂಡುದು ಕೇವಲ ರಾಜಕೀಯ ಸ್ವಾತಂತ್ರ್ಯವನ್ನು ಮಾತ್ರ. ನಮ್ಮ ಸಂಸ್ಕೃತಿಯನ್ನು, ಧರ್ಮದ ನಿಧಿಯನ್ನು, ಯಾವ ಬಾಹ್ಯ ಶತ್ರುವಿನ ಯುದ್ಧಸಾಮಗ್ರಿಯೂ ಸೂರೆಗೊಳ್ಳದಾಗಿತ್ತು. ಇಂದಿನ ಸಂಸ್ಕೃತಿಗೆ ಆಗುತ್ತಿರುವ ಮೌನ ಸಮರದಲ್ಲಿ ಹಿಂದೂಜನಾಂಗ ಸೋತರೆ ಪುರಾತನ ಆರ್ಯ ಮಹರ್ಷಿಗಳು ನಮಗಾಗಿ ಶೇಖರಿಸಿಟ್ಟ ವಿದ್ಯಾನಿಧಿ, ನಾವು ಪೂಜಿಸುವ ದೇವರು, ನಮ್ಮ ಅನುದಿನದ ಆಚಾರ ವ್ಯವಹಾರಗಳು, ನಮ್ಮ ಜೀವನಕ್ಕೆ ಅಮೃತವನ್ನು ಧಾರೆಯೆರೆಯುತ್ತಿರುವ ಸನಾತನ ಹಿಂದೂ ಧರ್ಮ ಎಲ್ಲವನ್ನೂ ಕಳೆದುಕೊಂಡು ದಿವಾಳಿಯಾಗಬೇಕಾಗುವುದು.

ಒಂದು ಜನಾಂಗ ಪ್ರಪಂಚದಲ್ಲಿ ಬಾಳಬೇಕಾದರೆ, ತನ್ನನ್ನು ಧ್ವಂಸ ಮಾಡಲು ಬರುವ ಇತರ ಪ್ರವಾಹಗಳನ್ನು ಎದುರಿಸಿ ನಿಲ್ಲಬೇಕಾದರೆ, ಜೀವನದ ತಾಯಿಬೇರನ್ನು ಸಂಸ್ಕೃತಿ ಹರಿಯುತ್ತಿರುವ ಆಳಕ್ಕೆ ಕಳುಹಿಸಬೇಕು. ಅಲ್ಲಿಂದ ಸಾರವನ್ನು ಹೀರಿ ಪೋಷಣೆ ಹೊಂದಬೇಕು. ಆಗ ಮಾತ್ರ ಆ ಜನಾಂಗ ತಲೆಯೆತ್ತಿ ನಿಲ್ಲುವುದು. ಎಂದು ಅದು ಮತ್ತೊಂದು ಸಂಸ್ಕೃತಿಯ ಆಘಾತಕ್ಕೆ ಸಿಕ್ಕಿ ತಲೆ ತಗ್ಗಿಸುವುದೋ ಅಂದಿನಿಂದ ಆ ಜನಾಂಗದ ಏಳಿಗೆ ಕೊನೆಗಂಡಂತೆ. ಆದರೆ ಹಿಂದೂ ಧರ್ಮವಿನ್ನೂ ಅಳಿದಿರಲಿಲ್ಲ. ಆಕೆಯ ನಾಡಿಯಲ್ಲಿ ಇನ್ನೂ ಬಿಸಿರಕ್ತ ಹರಿಯು

ತ್ತಿತ್ತು. ತನ್ನನ್ನು ಕೆಣಕಲು ಬಂದ ಅನ್ಯಧರ್ಮಗಳನ್ನು ಎದುರಿಸಿ ನಿಲ್ಲಲು ಹಿಂದೆ ರಾಜನಾಗಿದ್ದ ವಿಶ್ವಾಮಿತ್ರ, ವಸಿಷ್ಠನನ್ನು ಕೆಣಕಲು ಬಂದಾಗ ಅವನ ಕಾಮಧೇನು ವೈಕೊಡಹಲು ವೀರರುದ್ಭವಿಸಿ ಹೇಗೆ ವಿಶ್ವಾಮಿತ್ರನನ್ನು ಕಾದಿ ಸೋಲಿಸಿದರೋ, ಅಂತೆಯೆ ಭರತಮಾತೆ ಅನೇಕ ಸುಪುತ್ರರಿಗೆ ಜನ್ಮವಿತ್ತಳು. ಅವರಲ್ಲಿ ಪ್ರಮುಖರಾದವರೆ ರಾಜಾರಾಮ ಮೋಹನರಾಯ್, ಮಹರ್ಷಿ ದೇವೇಂದ್ರನಾಥ ಠಾಕೂರ, ಕೇಶವ ಚಂದ್ರಸೇನ, ದಯಾನಂದ ಸರಸ್ವತಿ, ಶ್ರೀರಾಮಕೃಷ್ಣಪರಮಹಂಸರು, ಸ್ವಾಮಿ ವಿವೇಕಾನಂದರು, ಮತ್ತು ಇಂದು ರಾಜಕೀಯ ಪ್ರಪಂಚದಲ್ಲಿ ತನ್ನದೇ ಒಂದು ಹೊಸ ಅಸ್ತ್ರದಿಂದ ಸಾರ್ವಭೌಮ ಚಕ್ರಾಧಿಪತ್ಯವನ್ನು ಕೆಣಕಿ ಬೇರುಸಹಿತ ಕಿತ್ತೊಗೆದ ಆ ಅರ್ಧನಗ್ನ, ಚಲಿಸುವ ಅಸ್ಥಿಪಂಜರ ದಂತೆ ತೋರುತ್ತಿದ್ದ ತಪೋವ್ಯಕ್ತಿ ಮಹಾತ್ಮ ಗಾಂಧಿ ಮುಂತಾದವರು.

ಇವರಲ್ಲಿ ಒಬ್ಬೊಬ್ಬರು ಸಮಾಜದ ಒಂದೊಂದು ಅನ್ಯಾಯಕತೆಯ ಕಡೆ ಗಮನ ಕೊಟ್ಟರು. ಇವರುಗಳೊಂದಿಗೆ ಇನ್ನೂ ಹಲವರು ಸೇರಿ ಭಾರತೀಯ ನಾರಿಯರ ಪ್ರಶ್ನೆಯನ್ನು ಬಿಡಿಸಲು ಬದ್ಧಕಂಕಣರಾದರು. ಹಿಂದೂ ಸಮಾಜದಲ್ಲಿ ನಾರಿಯರಿಗೆ ಅನೇಕ ಕುಂದುಕೊರತೆಗಳಿವೆ ಎಂಬುದು ಹೆತ್ತ ತಾಯಿ ತಂದೆಯರಿಗೆ ಒಡಹುಟ್ಟಿದ ಅಣ್ಣತಮ್ಮಂದಿರಿಗೆ ತಿಳಿಯದ ವಿಷಯವಲ್ಲ. ಹಲವು ಕಡೆ ಬಳಕೆಯಲ್ಲಿರುವ ಬಾಲ್ಯವಿವಾಹ, ಚಿಕ್ಕತನದಲ್ಲಿ ಬೊಂಬೆಯೊಂದಿಗೆ ಆಟವಾಡುವಾಗಲೆ, ತನ್ನ ಮೇಲೆ ಬೀಳುವ ತಾಯ್ತನದ ಹೊರೆ, ಗಂಡನಾರೆಂಬ ಪರಿಚಯವಿಲ್ಲದಿರುವಾಗಲೆ ಆತನನ್ನು ಕಳೆದುಕೊಂಡು ಜೀವನವನ್ನೆಲ್ಲ ಚಿರವೈಧವ್ಯದಲ್ಲಿ ಕಳೆದು ದುಃಖಿಸುವವರ ಕಣ್ಣೀರು ಯಾರ ಮನಸ್ಸನ್ನು ತಾನೆ ಕರಗಿಸದು. ಆಕೆಗೆ ಪುರುಷನಿಗಿರುವಂತೆ ಸ್ವಾತಂತ್ರ್ಯವಿಲ್ಲ. ಆಕೆ ಕೇವಲ ಪತಿಯ ಕ್ರೀಡಾ ವಸ್ತು. ಅನೇಕರು ಅವಳನ್ನು ಮಕ್ಕಳನ್ನು ತಯಾರುಮಾಡುವ ಒಂದು ಕಾರ್ಖಾನೆಯೆಂದು ತಿಳಿದಿರುವರು. ಇವರ ದುಃಸ್ಥಿತಿಯನ್ನು ನಿವಾರಿಸಲು ಅನೇಕರು ಮುಂದಾದರು. ರಾಜಾ ರಾಮಮೋಹನರಾಯ್ ಪ್ರಯತ್ನ ಪಟ್ಟು ಸಹಗಮನವನ್ನು ನಿಲ್ಲಿಸುವ ನಿರ್ಣಯವನ್ನು ತಂದನು. ಆಂಗ್ಲ ಸರ್ಕಾರದವರು ಅದನ್ನು ಅನುಮೋದಿಸಿ ಸಹಗಮನ ಮಾಡುವುದು ಕಾನೂನಿಗೆ ವಿರುದ್ಧವೆಂದು ಸಾರಿದರು. ಈಶ್ವರಚಂದ್ರ ವಿದ್ಯಾಸಾಗರನು ನಮ್ಮ ಹಿಂದಿನ ಸ್ಮೃತಿಗಳಿಗೆ ಹೋಗಿ ಅಲ್ಲಿ ವಿಧವೆಯರಿಗೆ ಪುನಃ ಮದುವೆ ಯಾಗಲು ಅಧಿಕಾರವಿದೆ, ಅದರಂತೆ ಈಗಿನವರು ನಡೆಯಲು ಅಭ್ಯಂತರ

ವಿಲ್ಲವೆಂದು ವಿಶದಪಡಿಸಿದನು. ಇತ್ತ ಪಂಜಾಬ್ ಕಡೆ ದಯಾನಂದ ಸರಸ್ವತಿ ವೈದಿಕಕಾಲದಲ್ಲಿ ಸ್ತ್ರೀಯರಿಗೆ ಯಾವ ಸ್ವಾತಂತ್ರ್ಯವಿತ್ತೊ ಅದನ್ನು ಕೊಡಲು ಮೊದಲು ಮಾಡಿದನು. ಋತುಮತಿಯಾದ ಮೇಲೆ ವಿವಾಹ, ವೇದಾಧ್ಯಯನಕ್ಕೆ ಅಧಿಕಾರ ಮುಂತಾದುವುಗಳನ್ನು ಒದಗಿಸಿಕೊಟ್ಟನು. ನಂತರ ಮಹಾತ್ಮ ಗಾಂಧಿಯವರು ರಾಜಕೀಯ ಪ್ರಪಂಚಕ್ಕೆ ಕಾಲಿಟ್ಟಂದಿನಿಂದ ಸ್ತ್ರೀಯರ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವನ್ನು ಬರೆದಂತೆ ಆಗಿದೆ. ಪುರುಷನಿಗೆ ಸರಿಸಮಾನರಾಗಿ ಅವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದರು, ಹಿಂಸೆ ಸಹಿಸಿದರು. ಸೆರೆಮನೆಗೆ ನಗುಮುಖದಿಂದ ಹೋದರು. ರಾಜ್ಯಾಡಳಿತ ಸೂತ್ರವನ್ನು ವಹಿಸಿರುವರು. ಕೆಲವು ಸಂಸ್ಥಾನಗಳಲ್ಲಿ ಸ್ತ್ರೀಯರು ಮಂತ್ರಿಗಳಾಗಿರುವರು. ಹಲವೆಡೆ ಪ್ರಜಾಪ್ರತಿನಿಧಿ ಸಭೆಗಳಲ್ಲಿ, ಶಾಸನರಚನಾ ಸಭೆಗಳಲ್ಲಿ ಸದಸ್ಯರಾಗಿ ಹೋಗಿ ತಮ್ಮ ಕುಂದು ಕೊರತೆಗಳನ್ನು ಬಹಿರಂಗವಾಗಿ ವ್ಯಕ್ತಪಡಿಸುತ್ತಿರುವರು. ಪುರುಷರಂತೆ ಅವರು ವಿದ್ಯಾವ್ಯಾಸಂಗಮಾಡುತ್ತಿರುವರು. ವಿದ್ಯಾ ಸಂಸ್ಥೆಗಳಿಂದ ಪ್ರತಿವರ್ಷವೂ ಅನೇಕ ಸ್ತ್ರೀ ಪದವೀಧರರು ಬರುತ್ತಿರುವರು. ಎಲ್ಲಾ ವೃತ್ತಿಗಳ ಮೂಲೆಗಳಿಗೂ ನುಗ್ಗಿರುವರು ; ಅವರಲ್ಲಿ ಉಪಾಧ್ಯಾಯನಿಯರಿರುವರು, ವೈಜ್ಞಾನಿಕರಿರುವರು, ವಕೀಲರಿರುವರು, ರಾಜಕಾರಣ ಪಟುಗಳಿರುವರು.

ಪಾಶ್ಚಾತ್ಯ ರೀತಿಯಲ್ಲಿ ವಿದ್ಯಾಪ್ರಚಾರ ಮೊದಲಾದಂದಿನಿಂದ ಮತ್ತೊಂದು ಅಪಾಯ ತಲೆದೋರಿದೆ. ಹೇಗೆ ಹಿಂದಿನದೆಲ್ಲ ಪರಮ ಪವಿತ್ರವೆಂದು ವಾದಿಸುವ ಪೂರ್ವಾಚಾರ ಪರಾಯಣರ ಗುಂಪೊಂದು ಇದೆಯೋ, ಹಾಗೆಯೆ ಇಂದಿನ ಸಮಾಜದಲ್ಲಿ ಇರುವುದೆಲ್ಲ ಒಂದು ಅನ್ಯಾಯದ ಹೊರೆ ಎಂದು ತಿಳಿದು ಅದನ್ನು ತೊರೆದು ಪರಾನುಕರಣಕ್ಕೆ ಕೈಯಿಡುತ್ತಿರುವ ಮತ್ತೊಂದು ಆಧುನಿಕ ಪಂಗಡವಿದೆ. ಸತ್ಯ ಇವೆರಡರ ಮಧ್ಯದಲ್ಲಿದೆ. ಪರಾನುಕರಣದಿಂದ ಆಗುವ ಉಪಕಾರಕ್ಕಿಂತಲೂ ಅಪಕಾರವೆ ಹೆಚ್ಚೆಂದು ಹೇಳಬಹುದು. ತಳಕು ಬೆಳಕಿನ ಪಾಶ್ಚಾತ್ಯ ನಾಗರಿಕತೆಯ ಮಾಯಾಮೃಗವನ್ನು ನಾವು ಬೆನ್ನಟ್ಟಿ ಹೋದರೆ, ನಮಗೆ ಸುಂದರ ಮೃಗ ಸಿಕ್ಕುವುದಿಲ್ಲ. ಸತ್ತ ರಾಕ್ಷಸನ ಕರಾಳ ದೇಹ ಸಿಕ್ಕುವುದು. ಸಮಾಜದ ನಿಯಮಗಳು ಆಯಾ ದೇಶ ಕಾಲಕ್ಕೆ ತಕ್ಕಂತೆ ಅನುಸರಿಸುವುವು. ಹಿಂದೆ ಯಾವುದೋ ಒಂದು ಕಾಲದಲ್ಲಿ ಮಾಡಿದ ನಿಯಮಗಳು ಈಗ ಸರಿಹೋಗುವುದಿಲ್ಲ. ಮುಸಲ್ಮಾನರ ಕಾಟ ಬಹಳ

ವಾದಾಗ ಬಾಲ್ಯ ವಿವಾಹ ಮುಂತಾದುವು ಜಾರಿಗೆ ಬಂದವು. ಪುರುಷರ ಸಂಖ್ಯೆ ಸ್ತ್ರೀಯರ ಸಂಖ್ಯೆಗಿಂತಲೂ ಕಡಿಮೆಯಾದಾಗ ವಿಧವಾ ವಿವಾಹ ನ್ಯಾಯ ಸಮ್ಮತವಲ್ಲವೆಂದು ರೂಢಿಗೆ ಬಂದಿರಬಹುದು. ಈ ಕಾನೂನು ಗಳಿಂದ ಅಂದಿನ ಕಾಲದ ಸಮಾಜಕ್ಕೆ ಸ್ವಲ್ಪ ಅನುಕೂಲವಾಗಿರಬಹುದು. ಆದರೆ ಈಗ ಕಾಲ ಬದಲಾಯಿಸಿದೆ. ಅಂದಿದ್ದ ಅಂಜಿಕೆ ಇಂದಿಲ್ಲ. ಆದರೆ ಅಂದಿನ ನಿಯಮಗಳು ಇಂದೂ ಇವೆ. ಆದರೆ ಇವು ಸಡಿಲವಾಗ ಬೇಕು. ಸ್ಮೃತಿ ಸಮಾಜದ ಬೆಳವಣಿಗೆಗೆ ಪೋಷಕವಾಗಬೇಕು. ಅದರ ವಿಕಾಸಕ್ಕೆ ಆತಂಕ ತರಬಾರದು. ಇದು ದೇಹರಕ್ಷಣೆಗೆ ತೊಡಿಸುವ ಒಂದು ಕವಚ. ದೇಹವನ್ನು ಬಂಧಿಸುವ ಬೇಡಿಯಲ್ಲ. ಸ್ಮೃತಿ ಇರು ವುದು ಸಮಾಜಕ್ಕಾಗಿ, ಸ್ಮೃತಿಗೋಸುಗವಾಗಿ ಸಮಾಜವಿಲ್ಲ. ಸಮಾಜ ಕೆಲವನ್ನು ಬದಲಾಯಿಸಬಹುದು. ನಿಯಮಗಳು ಬ್ರಹ್ಮಬರಹವಲ್ಲ. ಅವನ್ನು ಮಾನವನು ಮಾಡಿದ್ದು. ಕೆಲವನ್ನು ರದ್ದು ಮಾಡಬಹುದು. ನಮ್ಮ ಹಿಂದಿನ ಸ್ಮೃತಿಕಾರರೆ ಇದನ್ನು ಒಪ್ಪಿಕೊಂಡಿರುವರು. ಅವರೇ ಇದನ್ನು ಅನುಸರಿಸಿರುವರು. ವೇದಕಾಲದಲ್ಲಿ ಸ್ತ್ರೀಧನಕ್ಕೆ ಅವಕಾಶವಿರಲಿಲ್ಲ. ಆದರೆ ನಂತರ ಬಂದ ಸ್ಮೃತಿಕಾರರು ಅದಕ್ಕೋಸುಗವಾಗಿ ಹೋರಾಡಿದರು. ವೇದ ಕಾಲದಲ್ಲಿ ನಿಯೋಗಕ್ಕೆ ಅವಕಾಶವಿತ್ತು. ನಂತರ ಬಂದ ಸ್ಮೃತಿಕಾರರು ಅದನ್ನು ವಿರೋಧಿಸಿದರು. ಸೆರೆ ಹಿಡಿದುಕೊಂಡು ಬಂದ ಅಥವಾ ಕ್ರಯಕ್ಕೆ ಕೊಂಡ ಹೆಣ್ಣನ್ನು ಮದುವೆಯಾಗುತ್ತಿದ್ದರು. ನಂತರ ಬಂದ ಧರ್ಮಶಾಸ್ತ್ರ ಕಾರರು ಅದನ್ನು ವಿರೋಧಿಸಿದರು. ಹೇಗೆ ಅಂದಿನ ಸ್ಮೃತಿಕಾರರು ವೇದ ಕಾಲದಲ್ಲಿದ್ದ ಕೆಲವು ಆದರ್ಶಗಳು ಆಗಿನ ಕಾಲಕ್ಕೆ ಸರಿಹೋಗುವುದಿಲ್ಲ ವೆಂದು ವಿರೋಧಿಸಿದರೋ, ಅದರಂತೆಯೇ, ಇಂದಿನ ಸಮಾಜ ಸುಧಾರಕರು ಕೆಲಸಕ್ಕೆ ಬಾರದವನ್ನು ತೆಗೆದು ಹಾಕಬೇಕು. ಹೊಸ ನಿಯಮಗಳನ್ನು ಸೇರಿಸಬೇಕು.

ಆದರೆ ಬದಲಾಯಿಸುವರು ಮಾತ್ರ ಜೋಪಾನವಾಗಿರಬೇಕು. ಸಮಾಜ ಸುಧಾರಕರಾಗಲು ಇಂದು ನಮ್ಮ ಸಮಾಜವನ್ನು ನೋಡಿ ಅದರಲ್ಲಿರುವ ತಪ್ಪುಗಳಿಗೆ ರೇಗಿ ಬೇಸತ್ತರೆ ಸಾಲದು. ಆ ತಪ್ಪಿನ ವ್ಯಾಧಿಯನ್ನು ನಿವಾರಣೆಮಾಡುವಾಗ ರೋಗವನ್ನು ಮಾತ್ರ ಹೋಗ ಲಾಡಿಸಿ ರೋಗಿಯನ್ನು ಉಳಿಸಬೇಕು. ಹಾಗಿಲ್ಲದೆ ಅಂಥ ಅನುಕರಣೆಗೆ ಕೈಹಾಕಿದರೆ ರೋಗದೊಂದಿಗೆ ರೋಗಿಯನ್ನು ಕೊಂದಂತೆ ಆಗುವುದು. ಹಿಂದೂ ಸಮಾಜದಲ್ಲಿ ಸುಧಾರಕನ ಪಾತ್ರವಹಿಸುವನಿಗೆ ಹಿಂದೂ ಧರ್ಮದ

ಪರಮ ಆದರ್ಶದ ಪೂರ್ಣಪಂಚಯನಿರಬೇಕು. ಹಿಂದೆ ನಮ್ಮ ಸಮಾಜ ಯಾವ ಆದರ್ಶಗಳನ್ನು ಸಾಧಿಸುವುದಕ್ಕಾಗಿ ಪ್ರಯತ್ನಿಸುತ್ತಿತ್ತು, ಇಂದಿನ ಹೀನ ಸ್ಥಿತಿಗೆ ಕಾರಣಗಳೇನು ಎಂಬುದನ್ನು ಶಾಂತಿರೀತಿಯಿಂದ ಮೂಲಂ ಕಷವಾಗಿ ವಿಚಾರಿಸಿದರೆ ಆಗ ಮಾತ್ರ ರೋಗದ ಸುಳಿವು ಗೊತ್ತಾಗುವುದು.

ಭಾರತೀಯ ನಾರಿಯರ ಆದರ್ಶದ ವಿಚಾರವಾಗಿ ಸ್ವಾಮಿ ವಿವೇಕಾ ನಂದರು ಎಂದ ನುಡಿಗಳಿವು—"ಮರೆಯದಿರಿ ಭಾರತೀಯ ನಾರಿಯರ ಆದರ್ಶ ಸೀತಾ ಎನ್ನುವುದನ್ನು. ಪವಿತ್ರೋತ್ತಮಳವಳು. ಎಂತಹ ಸಹಿಷ್ಣುತೆ, ಬಂದ ಎಲ್ಲಾ ಕಷ್ಟಗಳನ್ನೂ ಮರುಮಾತಿಲ್ಲದೆ ಅನುಭವಿಸಿ ದಳು. ನಮ್ಮ ಪುರಾಣಗಳೆಲ್ಲ ನಾಶವಾಗಬಹುದು. ವೇದವಿಲ್ಲದೆಹೋಗ ಬಹುದು. ಸಂಸ್ಕೃತ ಭಾಷೆಯೆ ಮಾಯವಾಗಬಹುದು. ಆದರೆ ಎಲ್ಲಿಯ ವರೆಗೆ ಐದು ಹಿಂದುಗಳಾದರೂ ಇರುವರೋ, ಅಲ್ಲಿಯವರೆವಿಗೂ ಸೀತೆ ಎನ್ನುವ ಹೆಸರು ಪೃಥ್ವಿಯಿಂದ ಹೋಗುವುದಿಲ್ಲ. ಆಕೆಯ ಹೆಸರು, ಆಕೆಯ ಆದರ್ಶ ನಮ್ಮ ಜೀವನದಲ್ಲಿ ಐಕ್ಯವಾಗಿ ಹೋಗಿವೆ. ಪ್ರತಿಯೊಬ್ಬ ಭಾರತೀಯನ ನಾಡಿನಾಡಿಯಲ್ಲಿಯೂ ಹರಿಯುವ ರಕ್ತಕಣದಲ್ಲಿ ಆಕೆಯ ಹೆಸರು ಅನುರಣಿತವಾಗುತ್ತಿದೆ. ನೀವು ವಿಶ್ವಸಾಹಿತ್ಯವೆಲ್ಲವನ್ನು ಹುಡುಕ ಬಹುದು. ಮುಂದೆ ಬರುವ ಸಾಹಿತ್ಯಕ್ಕೂ ಕಾದುಕುಳಿತುಕೊಳ್ಳಬಹುದು. ಆದರೆ ಆದಿಕವಿ ವಾಲ್ಮೀಕಿ ಚಿತ್ರಿಸಿದ ಸೀತೆಯಂತಹ ಶೀಲ ಸಿಕ್ಕಲಾರದು. ಶ್ರೀರಾಮನಂತಹ ವ್ಯಕ್ತಿಗಳು ಹಲವರು ಬರಬಹುದು. ಆದರೆ ಸೀತೆ ಯಂತಹ ಶೀಲ ಬರುವುದು ಬಹಳ ಅಪರೂಪ. ಇಂತಹ ಶೀಲದ ಎರಕದಲ್ಲಿ ಭಾರತೀಯ ನಾರಿಯರ ಜೀವನ ರೂಪುಗೊಳ್ಳಬೇಕು."

ಅನೇಕ ಶತಮಾನಗಳಿಂದಲೂ ನಾನಾ ವಿಧದ ಕುಂದು ಕೊರತೆಗಳ ಬಂಧನದಲ್ಲಿದ್ದರೂ ಇಂದಿನ ನಮ್ಮ ಸ್ತ್ರೀಯರಲ್ಲಿ ಸೀತೆ, ಸಾವಿತ್ರಿಯಂತಹ ಆದರ್ಶಗಳು ಅಳಿಯದೆ ಉಳಿದಿವೆ. ಬೀಜ ಒಳ್ಳೆಯದಾದರೂ ಸಕಾಲಕ್ಕೆ ಮಳೆಯಿಲ್ಲದೆ, ಗೊಬ್ಬರವಿಲ್ಲದೆ ಬಡಬಡಕಲಾಗಿ ಬೆಳೆದ ಗಿಡದಂತಿದೆ ಅವರ ಬಾಳು. ಆದರೂ ಅವರು ಸೀತೆ ಸಾವಿತ್ರಿಯರ ವಂಶಾನುಗತರು. ಅವರ ಜೀವನದ ವಿಕಾಸಕ್ಕೆ ಇರುವ ಅಡಚಣೆಗಳನ್ನು ನಿವಾರಿಸಿದರೆ ವೇದೋಪ ನಿಷತ್ತಿನ ಕಾಲದ ಮಹಾವ್ಯಕ್ತಿಗಳು ಮತ್ತೊಮ್ಮೆ ಭಾರತ ಸಂಸ್ಕೃತಿಯ ತರುವಿನಲ್ಲಿ ಫಲಿಸುವುದೆಂಬುದರಲ್ಲಿ ಸಂದೇಹವಿಲ್ಲ.

ಆಧ್ಯಾತ್ಮಿಕ ಜೀವನದಲ್ಲಿ ಪರಮಪದವನ್ನು ಮುಟ್ಟಿದ ಶ್ರೀರಾಮ ಕೃಷ್ಣ ಪರಮಹಂಸರು ಭಾರತೀಯ ನಾರಿಯರ ಉದ್ಧಾರಕ್ಕೆ ಏನು ಮಾಡಿ

ದರು ? ಅವರು ಎಲ್ಲಿ ನೋಡಿದರೂ ಎಲ್ಲರಲ್ಲಿಯೂ ಜಗನ್ಮಾಯಿಯನ್ನೇನೋ ನೋಡುತ್ತಿದ್ದರು. ಆದರೂ ಪಾಪಿ, ದುಃಖಿನಿ, ನಿರಾಶಿನಿ ವೇಷವನ್ನು ಧರಿಸಿದ ಜಗನ್ಮಾಯಿಯ ಗೋಳು ಅವರೆದೆಗೆ ತಟ್ಟಿತು. ಅವರ ಉಪಶಮನಕ್ಕಾಗಿ ಎಲ್ಲರಂತೆ ವೇದಿಕೆಯ ಮೇಲೆ ನಿಂತು ಉಪನ್ಯಾಸಮಾಡುವುದಕ್ಕಾಗಲೀ ಶಾಸನ ಸಭೆಯಲ್ಲಿ ಕಾನೂನು ರಚಿಸುವುದಕ್ಕಾಗಲೀ, ಅಥವಾ ಸಾಹಿತ್ಯ ಕ್ಷೇತ್ರದಲ್ಲಿ ಅವರ ಕಷ್ಟ ದುಃಖಗಳನ್ನು ಚಿತ್ರಿಸುವ ಕಾರ್ಯಕ್ಕಾಗಲೀ ಕೈಹಾಕಲಿಲ್ಲ. ದೇವಶಿಲ್ಪಿಗಳವರು. ಹಿಂದೆ ಪ್ರಖ್ಯಾತರಾದ ಸ್ತ್ರೀಶ್ರೇಣಿಯಿಂದ ಸೀತೆ, ಸಾವಿತ್ರಿ ಮುಂತಾದವರಲ್ಲಿದ್ದ ಪಾತಿವ್ರತ್ಯ, ಗಾರ್ಗೇಯಿ, ಮೀರಾಬಾಯಿ, ಆಂಡಾಳ್ ಮುಂತಾದವರಲ್ಲಿದ್ದ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ತಮ್ಮ ಧರ್ಮ ಪತ್ನಿ ಶ್ರೀ ಶಾರದಾದೇವಿಯರಲ್ಲಿ ಆವಾಹನೆ ಮಾಡಿ ಭಾರತೀಯ ಮಹಿಳೆಯರಿಗೆ ಅವರು ಆದರ್ಶವಾಗುವಂತೆ ಮಾಡಿದರು. ಸೋದರಿ ನಿವೇದಿತಾ ಹೇಳುವಂತೆ " ಶ್ರೀರಾಮಕೃಷ್ಣ ಪರಮಹಂಸರು ಭಾರತೀಯ ನಾರಿಯರ ಆದರ್ಶದ ವಿಚಾರವಾಗಿ ಹೇಳಿರುವ ಕೊನೆಯ ಮಾತು ಶ್ರೀ ಶಾರದಾದೇವಿ."

ಈ ದೇವಿಯ ಪಾವನ ಜೀವನ ಚರಿತ್ರೆ ಶ್ರೀರಾಮಕೃಷ್ಣರ ಜೀವನದ ಎಲ್ಲೋ ಒಂದು ಮೂಲೆಯಲ್ಲಿ ಅಡಗಿಕೊಂಡಿದೆ. ಇವರ ಜೀವನದಲ್ಲಿ ರೋಮಾಂಚನವೆಸಗುವ ಘಟನೆಗಳಿಲ್ಲ. ಎಲ್ಲರನ್ನೂ ಬೆರಗುಮಾಡುವ ಪವಾಡಗಳಿಲ್ಲ. ಆದರೂ ಈ ಮಹಾಪತಿವ್ರತೆಯ ತ್ಯಾಗದ ಅಡಿಗಲ್ಲಿನ ಮೇಲೆ ಶ್ರೀರಾಮಕೃಷ್ಣ ಪರಮಹಂಸರ ಜಗದ್ವಂದ್ಯ ಕೀರ್ತಿ ಸೌಧ ನಿಂತಿದೆ. ಶ್ರೀ ಶಾರದಾದೇವಿಯರು ಯುವತಿಯಾದ ಮೇಲೆ ದಕ್ಷಿಣೇಶ್ವರಕ್ಕೆ ಪತಿಯ ಸಂದರ್ಶನಕ್ಕೆ ಮೊದಲು ಬಂದಾಗ ಶ್ರೀರಾಮಕೃಷ್ಣರು ಅವರನ್ನು ಕುರಿತು " ನನಗೆ ಜಗದ ಸ್ತ್ರೀಯರೆಲ್ಲ ಜಗನ್ಮಾತೆಯ ಪ್ರತಿಬಿಂಬದಂತೆ ಕಾಣುವರು. ನಿನಗೆ ಸಂಸಾರ ಸುಖದಲ್ಲಿ ಆಸೆ ಇದ್ದರೆ ನನ್ನನ್ನು ಇಂದ್ರಿಯ ಸುಖದ ಕೆಸರಿಗೆ ಇಳಿಸುವ ಅಧಿಕಾರ ನಿನಗಿದೆ. ಹಾಗೆ ನೀನು ಬಯಸಿದರೆ ನಾನು ನನ್ನ ಪಥದಿಂದ ಚ್ಯುತಿಯಾಗಲು ಸಿದ್ಧವಾಗಿರುವೆ " ಎಂದರು. ಶ್ರೀ ಶಾರದಾದೇವಿಯರು ಹಾಗೆ ಆಶಿಸಿದ್ದರೆ ಜಗತ್ತು ಶ್ರೀರಾಮಕೃಷ್ಣರನ್ನು ಕಾಣುತ್ತಿತ್ತೊ ಇಲ್ಲವೋ ! ಆದರೆ ತಪೋಧನನನ್ನು ಕೈಹಿಡಿದ ತಪಸ್ವಿನಿ. ಇವರು ಪತಿ ಮೆಚ್ಚುವ ಮತ್ತು ಅವರಿಗೆ ಸರಿಸಮನಾದ ಉತ್ತರವನ್ನೇ ಕೊಟ್ಟರು. " ನಾನೇಕೆ ನಿಮ್ಮನ್ನು ಇಂದ್ರಿಯಸುಖಾಭಿಲಾಷಿತರನ್ನಾಗಿ ಮಾಡಲಿ ? ನಿಮ್ಮನ್ನು ಸೇವಿಸುವ ಪುಣ್ಯ ನನಗೆ ಸಿಕ್ಕಿದರೆ ಸಾಕು. ನಿಮ್ಮ ಮನಸ್ಸಿನಲ್ಲಿ

ನನ್ನ ಪ್ರೀತಿಗೆ ಎಡೆಗೊಟ್ಟರೆ ನನಗೆ ಅದೇ ಪರಂಧಾಮ" ವೆಂದರು. ಇವರ ಜೀವನ ಕಾರ್ಮುಗಿಲಿನಿಂದ ಆವೃತವಾಗಿ ಗುಡುಗು ಮಿಂಚುಗಳನ್ನು ಕಾರುವ ಪ್ರಚಂಡ ಮುಂಗಾರಿನ ಆಕಾಶದಂತೆ ಅಲ್ಲ. ಅದು ವಿವೇಕಾನಂದರ ಜೀವನ. ತುಂತುರು ಮಳೆ ಬೀಳುತ್ತಿರುವಾಗ ಆಕಾಶದ ಮೂಲೆಯೊಂದರಲ್ಲಿ ಎಸೆವ ಕಾಮನಬಿಲ್ಲಿನಂತೆ ಶ್ರೀ ಶಾರದಾದೇವಿಯರ ಜೀವನ. ಇದು ಮೌನವಾದರೂ ಇದರಲ್ಲಿ ಒಂದು ಭವ್ಯಸೌಂದರ್ಯವಿದೆ. ನೋಡಿದರೆ ಒಂದು ಆನಂದವನ್ನು ನೀಡುವುದು. ನಮ್ಮ ಮನಸ್ಸನ್ನು ಸೆಳೆಯುವುದು. ನಮ್ಮನ್ನು ಪುನೀತರನ್ನಾಗಿ ಮಾಡುವುದು. ಶ್ರೀರಾಮಕೃಷ್ಣರು ಜಗನ್ಮಾತೆಯನ್ನು ಪೂಜಿಸಿದ ಪುಷ್ಪಗಳಲ್ಲಿ ಶ್ರೀ ಶಾರದಾದೇವಿಯರು ಮಹಾಪುಷ್ಪ.

ಇವರು ಆದರ್ಶ ಸತಿ. ಆದರೆ ಪುರಾತನ ಕಾಲದಿಂದಲೂ ಸತಿಯ ಮುಂದೆ ಪಾತಿವ್ರತ್ಯವೆಂಬ ಆದರ್ಶವನ್ನು ಇಟ್ಟು ತಾನು ಮಾತ್ರ ಸ್ವೇಚ್ಛಾಚಾರಿಯಾಗಿರುವ ಪತಿಯ ಮುಂದೆ ಅಲ್ಲ. ಹೆಂಗಸಿಗೆ ಹೇಗೆ ಒಂದು ಪತಿವ್ರತವಿದೆಯೊ ಅದರಂತೆಯೇ ಪತಿಗೆ ಒಂದು ಸತೀವ್ರತವಿದೆ ಎಂದು ತಿಳಿದು, ಅವರಲ್ಲಿ ದೈವತ್ವವನ್ನು ಕಂಡು ಮಣಿದ ಶ್ರೀರಾಮಕೃಷ್ಣರ ಆದರ್ಶ ಸತಿ. ಇವರು ಆದರ್ಶ ಮಾತೆ. ಆದರೆ ನವಮಾಸಗಳು ಹೊತ್ತು ಪ್ರಸವವೇದನೆ ತಿಂದು ತಾಯ್ತನವನ್ನು ಇವರು ಕೊಳ್ಳಬೇಕಾಗಿರಲಿಲ್ಲ. ತಮ್ಮಲ್ಲಿಗೆ ಬಂದವರೆಲ್ಲರನ್ನು ಇವರು ತಮ್ಮ ಮಕ್ಕಳಂತೆ ಕಂಡರು. ಎಷ್ಟು ಪಾಪಿಗಳಾಗಲೀ ಎಷ್ಟು ನೀಚರಾಗಲಿ, ಸಮಾಜ ಯಾರನ್ನು, ಜಾರ, ಪತಿತೆ, ಭ್ರಷ್ಟೆ ಎಂದು ಧಿಕ್ಕರಿಸಿ ನೋಡುವುದೋ, ಅವರಿಗೆಲ್ಲ ಪಕ್ಷಪಾತವಿಲ್ಲದೆ ಮಾತೃಪ್ರೇಮದ ಅಮೃತವನ್ನು ಉಣಿಸಿದರು. ತಪ್ಪುಮಾಡುವುದು ಮಕ್ಕಳ ಸ್ವಭಾವ. ಪಾಪಿಗಳಲ್ಲವೆ ಮಿಂದು ಪಾಪವನ್ನು ಕಳೆದುಕೊಳ್ಳಲು ಬರುವುದು ಗಂಗೆಗೆ. "ನಾನು ಮಡಿ, ನೀವಾರು ಮುಟ್ಟಬೇಡಿ, ಮುಟ್ಟಿದರೆ ಮೈಲಿಗೆಯಾಗುತ್ತೇನೆ ಎನ್ನುವಳೆ ಗಂಗೆ?" ಇವರು ಆದರ್ಶ ಗುರುಗಳು. ಆಗತಾನೆ ತಪ್ಪುಮಾಡಿ ಎಡವುತ್ತಿರುವ ಅಜ್ಞಾನಿಯಿಂದ ಹಿಡಿದು ಪರಮಪದವನ್ನು ಮುಟ್ಟುತ್ತಿರುವ ಜೀವಿಯವರೆಗೂ ಅವರವರಿಗೆ ತಕ್ಕ ಉಪದೇಶಗಳನ್ನು ಕೊಡುತ್ತಿದ್ದರು. ಅವರ ಭಾವ ಪೋಷಣೆಮಾಡುತ್ತಿದ್ದರು. ಅವರ ಸಂದೇಹವನ್ನು ನಿವಾರಿಸುತ್ತಿದ್ದರು. ಭಕ್ತರು ಬಂದರೆ ಭಕ್ತರಂತೆ ಮಾತನಾಡುತ್ತಿದ್ದರು. ಜ್ಞಾನಿಗಳು ಬಂದರೆ ಜ್ಞಾನಿಗಳಂತೆ ಮಾತನಾಡುತ್ತಿದ್ದರು. ಸ್ತ್ರೀಸಾಧಕಿಯರು ಬಂದರೆ ದೇವರೆ ಗಂಡಸಿನ

ರೂಪಿನಲ್ಲಿ ಬಂದರೂ ಒಮ್ಮೆಲೆ ನೆಚ್ಚಬೇಡಿ ಎನ್ನುತ್ತಿದ್ದರು. ಪುರುಷರ ಮುಂದೆ ಸ್ತ್ರೀ ಭಕ್ತಿಪರವಶಳಾಗಿ ನೆಲದ ಮೇಲೆ ಬಿದ್ದಿದ್ದರೂ ಮುಟ್ಟಬೇಡಿ ಎನ್ನುವರು. ಜಗದ ವಿಶ್ವವಿದ್ಯಾನಿಲಯಗಳಲ್ಲಿಯೂ ಇವರು ನಮ್ಮ ಅಕ್ಕತಂಗಿಯರಂತೆ ಓದಿದವರಲ್ಲ. ಆದರೇನು? ಎಲ್ಲಾ ಶಾಸ್ತ್ರದ ಗುರಿಯಾದ, ಉಪನಿಷತ್ತುಗಳನ್ನೆಲ್ಲಾ ಮೀರಿದ ಆತ್ಮಸಾಕ್ಷಾತ್ಕಾರದ ತೀರ್ಥವನ್ನು ಸವಿದವರು ಇವರು. ಇಂತಹ ಮಹಾತಪಸ್ವಿನಿಯರು ಬಗೆಹರಿಸದ ಪ್ರಶ್ನೆಯಿಲ್ಲ. ನಿವಾರಿಸಿದ ಕಷ್ಟವಿಲ್ಲ. ಹೋಗಲಾಡಿಸಿದ ಪಾಪವಿಲ್ಲ.

ಇನ್ನು ಇವರ ಪಾವನಮಯ ಶಾಂತಜೀವನದ ವಿಶಾಲ ಪರಿಚಯಕ್ಕೆ ಹೊರಡೋಣ.



## ೨. ಜನನ ಮತ್ತು ಬಾಲ್ಯ

ಬಂಗಾಳ ಪ್ರಾಂತ್ಯದಲ್ಲಿ ಜಯರಾಮವಟಿ ಎಂಬ ಒಂದು ಸುಂದರ ಗ್ರಾಮವಿದೆ. ಅದು ಹೂಗ್ಲಿ ಜಿಲ್ಲೆಗೆ ಸೇರಿದೆ. ಕಲ್ಕತ್ತೆಗೆ ಪಶ್ಚಿಮದಲ್ಲಿ ಅರವತ್ತು ಮೈಲಿ ದೂರ. ಅದು ಸುಮಾರು ಒಂದುನೂರು ಮನೆಗಳಿರುವ ಹಳ್ಳಿ. ಆಗಿನ ಕಾಲದಲ್ಲಿ ಈಗಿನಂತೆ ರೈಲು, ಬಸ್ಸುಗಳಿರಲಿಲ್ಲ. ಕಲ್ಕತ್ತೆಗೆ ಹೋಗಬೇಕಾದರೆ ಕಳ್ಳಕಾಕರಿಂದ ಕೂಡಿದ ಕಾಡುಮೇಡುಗಳಲ್ಲಿ ಎರಡು ಮೂರು ದಿನ ನಡೆಯಬೇಕಾಗಿತ್ತು. ಇದು ಒಂದು ದೃಷ್ಟಿಯಿಂದ ಅನಾನುಕೂಲವಾದರೂ ಮತ್ತೊಂದು ದೃಷ್ಟಿಯಿಂದ ಒಳ್ಳೆಯದಾಯಿತು ಎನ್ನಬಹುದು. ಆಧುನಿಕ ಕಾಲದ ನವನಾಗರೀಕತೆಯ ದೂತರು ಬಂದು ಹಳ್ಳಿಯ ಸುಂದರ ಶಾಂತ ವಾತಾವರಣವನ್ನು ಕಲಕಿರಲಿಲ್ಲ. ಆ ಹಳ್ಳಿಯ ಪಕ್ಕದಲ್ಲಿಯೇ ಆಮೋದರಾ ಎಂಬ ಹೊಳೆ ಹರಿಯುತ್ತಿದೆ. ಅದೇ ಆ ಸಣ್ಣ ಹಳ್ಳಿಯ ಗಂಗೆ. ಹಳ್ಳಿಯ ಜನರು ಬಹುಪಾಲು ಬೇಸಾಯ ಗಾರರು. ಅವರಿಗೆ ಅವಶ್ಯಕವಾಗಿ ಬೇಕಾದ ಬಡಗಿ, ಕಮ್ಮಾರರು ಕೆಲವು ಮನೆತನದವರಿದ್ದರು. ರೈತರು ಬೆವರುಸುರಿಸಿ ಕಷ್ಟಪಟ್ಟು ಕೆಲಸಮಾಡುತ್ತಿದ್ದರು. ಭೂಮಿ ಫಲವತ್ತಾಗಿತ್ತು. ಇವರ ಕಷ್ಟಕ್ಕೆ ತಕ್ಕ ಪ್ರತಿಫಲವಾಗಿ ಒಳ್ಳೆಯ ಬೆಳೆಯನ್ನು ಕೊಡುತ್ತಿತ್ತು. ಭತ್ತ, ಆಲೂಗೆಡ್ಡೆ, ನಾನಾ ತರಹ ತರಕಾರಿ ಮುಂತಾದ ಆಹಾರಕ್ಕೆ ಅತ್ಯಾವಶ್ಯಕವಾದ ಪದಾರ್ಥಗಳನ್ನು ಬೆಳೆಯುತ್ತಿದ್ದರು. ಆದರೂ ಬೇರೆ ಸಾಮಾನುಗಳನ್ನು ಕೊಳ್ಳಲು ಸಂತೆ ಮುಂತಾದುವುಗಳು ಆಗದೆ ಇದ್ದುದರಿಂದ ಸುಮಾರು ಆರು ಮೈಲಿ ಸುತ್ತಳತೆಯಲ್ಲಿದ್ದ ಕೋತಾಲಪುರ, ಕೋಯಪೇಟೆ ಮತ್ತು ಕಮಾರಪುಕೂರ್ ಮುಂತಾದ ಹಳ್ಳಿಗಳಿಗೆ ಹೋಗಿ ಬರುತ್ತಿದ್ದರು. ಈಗಿನಂತೆ ಆಗ ಹಳ್ಳಿಹಳ್ಳಿಗೂ ಸಿನಿಮಾ, ನಾಟಕ, ನರ್ಕಸ್ಸುಗಳು ಹೋಗಿ ಅಲ್ಲಿಯ ಜನರ ಬೇಜಾರನ್ನು ಪರಿಹರಿಸುವ ನೆಪದಿಂದ ಅವರಲ್ಲಿದ್ದ ದುಡ್ಡನ್ನು ಕಸಿಯುವುದಕ್ಕಾಗಿ ಆಟ ನೋಟಗಳು ಇರಲಿಲ್ಲ. ವರ್ಷದಲ್ಲಿ ಮಧ್ಯೆ ಮಧ್ಯೆ ಬರುತ್ತಿದ್ದ ದುರ್ಗಾಪೂಜೆ, ಕಾಳಿಪೂಜೆ, ಚೈತನ್ಯ ಪೂರ್ಣಿಮ, ಇಂತಹ ಹಬ್ಬಗಳೇ ಅವರಿಗೆ ಆನಂದದ ಸುದಿವಸಗಳು. ದೇವರ ಹೆಸರಿನಲ್ಲಿ ಆಟವನ್ನು ಆಡುತ್ತಿದ್ದರು. ಯಕ್ಷಗಾನ ನಾಟಕವನ್ನು ಕಟ್ಟುತ್ತಿದ್ದರು. ಒಟ್ಟಿನಲ್ಲಿ ಆ ಹಳ್ಳಿ ನೋಡಲು ಮುದ್ದಾಗಿತ್ತು. ಜನರು ಧನವಂತರಲ್ಲದಿದ್ದರೂ ಎಲ್ಲರಿಗೂ ಹೊಟ್ಟೆಗೆ ಬಟ್ಟೆಗೆ ಸಿಕ್ಕುತ್ತಿತ್ತು.

ಈ ಸಣ್ಣ ಹಳ್ಳಿಯಲ್ಲಿ ಬ್ಯಾನರ್ಜಿ, ಮುಖರ್ಜಿ ಎಂಬ ಎರಡು

ಬ್ರಾಹ್ಮಣ ಸಂಸಾರಗಳು ಮಾತ್ರ ಇದ್ದವು. ಶ್ರೀಶಾರದಾದೇವಿಯರು ಮುಖರ್ಜಿ ಮನೆತನದಲ್ಲಿ ಹುಟ್ಟಿದವರು. ಅವರ ತಂದೆ ರಾಮಚಂದ್ರ ಮುಖರ್ಜಿಯವರಿಗೆ ಮೂರು ಜನ ತಮ್ಮಂದಿರಿದ್ದರು. ತ್ರೈಲೋಕ್ಯನಾಥ್ ಎಂಬುವನು ಸಂಸ್ಕೃತದಲ್ಲಿ ಬಹಳ ಪಾಂಡಿತ್ಯವನ್ನು ಪಡೆದಿದ್ದನು. ಆದರೆ ಅಲ್ಪವಯಸ್ಸಿನಲ್ಲೇ ಪಿಧಿವಶನಾದನು. ಉಳಿದ ಈಶ್ವರಚಂದ್ರ, ನೀಲ ಮಾಧವ ಇವರಿಬ್ಬರು ಮದುವೆಯಾಗದೆ ಆಜನ್ಮ ಬ್ರಹ್ಮಚಾರಿಗಳಾಗಿ ಕಾಲ ಕಳೆದರು. ಎಲ್ಲರೂ ಒಂದೇ ಮನೆಯಲ್ಲಿದ್ದರು. ರಾಮಚಂದ್ರ ಮುಖ್ಯೋಪಾಧ್ಯಾಯರು ಅಷ್ಟೇನು ಶ್ರೀಮಂತರಲ್ಲ. ಆದರೂ ಅವರು ಮತ್ತು ಅವರ ಸತಿ ಶ್ರೀಶಾರದಾದೇವಿ ಎಂಬ ನಾರೀರತ್ನವನ್ನು ಜಗತ್ತಿಗೆ ದಾನ ಮಾಡಿದ ಅಸಾಧಾರಣ ವ್ಯಕ್ತಿಗಳಾಗಿದ್ದರು. ಅಮೂಲ್ಯವಾದ ಪೂರ್ವ ಸಂಸ್ಕಾರದ ನಿಧಿಯನ್ನು ಹೊಂದಿ ಶ್ರೀಶಾರದಾದೇವಿಯರು ಹುಟ್ಟಿದ್ದರೂ, ಅದು ವಿಕಾಸವಾಗಬೇಕಾದರೆ ಒಂದು ವಾತಾವರಣ ಬೇಕು. ಬೀಜ ಚೆನ್ನಾಗಿರಬಹುದು. ಅದನ್ನು ಸುಮ್ಮನೆ ನೆಲದಲ್ಲಿ ಹಾಕಿದರೆ ಅದರಿಂದ ಒಳ್ಳೆಯ ಫಲ ದೊರಕುವುದಿಲ್ಲ. ನೆಲ ಫಲವತ್ತಾಗಿರಬೇಕು ; ಚೆನ್ನಾಗಿ ಉತ್ತಿರಬೇಕು ; ಗೊಬ್ಬರ ಹಾಕಿರಬೇಕು ; ಸಕಾಲಕ್ಕೆ ನೀರೆರೆಯಬೇಕು ; ಆಗ ಮಾತ್ರ ಬೀಜ ತನ್ನಲ್ಲಿರುವ ಚೈತನ್ಯವನ್ನು ವಿಕಾಸಗೊಳಿಸಿ ಫಲಕ್ಕೆ ಬರುವುದು. ಶ್ರೀಶಾರದಾದೇವಿಯವರ ತಂದೆತಾಯಿಗಳು ಅಂತಹ ಸುಗುಣಗಳಿಗೆ ನೆಲೆಯಾಗಿದ್ದರು. ರಾಮಚಂದ್ರ ಮುಖ್ಯೋಪಾಧ್ಯಾಯರು ಸತ್ಯವಂತರಾಗಿದ್ದರು. ಮೋಸ, ಮುಂತಾದ ಕಳಂಕವಿರಲಿಲ್ಲ ಅವರ ಶೀಲದಲ್ಲಿ. ಅವರು ಕುಲದಲ್ಲಿ ಮಾತ್ರ ಬ್ರಾಹ್ಮಣರಾಗಿರಲಿಲ್ಲ. ವೃತ್ತಿಯಲ್ಲಿಯೂ ಬ್ರಾಹ್ಮಣರಾಗಿದ್ದರು. ಸಿಕ್ಕಿದವರು ಕೊಟ್ಟ ದಾನಧರ್ಮಗಳನ್ನು ಸ್ವೀಕರಿಸುತ್ತಿರಲಿಲ್ಲ. ಕಷ್ಟಸುಖಗಳಲ್ಲಿ ಎಂದಿಗೂ ಜಾರದ ಅಚಲ ಭಕ್ತಿ ದೇವರ ಮೇಲೆ. ಸರಳ ಸ್ವಭಾವದವರು. ಅನೇಕವೇಳೆ ಮನೆಯಮುಂದೆ ಗುಡುಗುಡಿ ಸೇದುತ್ತಿದ್ದಾಗ ಯಾರಾದರು ಹೋಗುತ್ತಿದ್ದರೆ ಅವರನ್ನು ಕರೆದು "ಒಳಕ್ಕೆ ಬನ್ನಿ, ಸ್ವಲ್ಪ ಕುಳಿತು ಸೇದಿ ಹೋಗಿ" ಎನ್ನುತ್ತಿದ್ದರು.

ದೀನನಾದರೂ ಬಹಳ ಧಾರಾಳಿ. ಮತ್ತೊಬ್ಬರ ಕಷ್ಟಕ್ಕೆ ಮರುಗುವ ಹೃದಯ. ಒಮ್ಮೆ ಗಲಟಳ ರಲ್ಲಿ ದೊಡ್ಡ ಕ್ಷಾಮ ಬಂದಿತ್ತು. ಆಗ ದೈವವಶಾತ್ ಇವರ ಕಣಜದಲ್ಲಿ ಎಂದಿಗಿಂತ ಹೆಚ್ಚು ಭತ್ತವಿತ್ತು. ಪೌರೋಹಿತ್ಯ ಮಾಡುವುದು, ಯಜ್ಞೋಪವೀತಗಳನ್ನು ಮಾಡಿ ಮಾರುವುದು, ಇದರಿಂದ ಬರುವ ಸ್ವಲ್ಪ ಪುಡಿಕಾಸಲ್ಲದೆ ಅವರಿಗೆ ಬೇರೆ ಆದಾಯವಿರಲಿಲ್ಲ.

ಆದರೂ ತಮ್ಮ ನೆರೆಹೊರೆಯವರಲ್ಲಿ ಅನೇಕರು ಉಪವಾಸದಿಂದ ನರಳು ತ್ತಿರುವಾಗ ಅವರು ಮಾತ್ರ ತಮ್ಮ ಮನೆಯಲ್ಲಿ ಸುಖಭೋಜನವನ್ನು ಉಣಲು ಬಯಸಲಿಲ್ಲ. ಅನೇಕ ಪಾತ್ರೆಗಳಲ್ಲಿ ಅನ್ನ ಮತ್ತು ಬೇಳೆ ಸೇರಿಸಿ ಬೇಯಿಸಿ ಮನೆಯಲ್ಲಿ ಇಡುತ್ತಿದ್ದರು. ಹಸಿದವರು ಯಾರು ಬಂದರೂ ಅವರಿಗೆ ಕೊಡುತ್ತಿದ್ದರು. ಕೆಲವು ವೇಳೆ ಅದು ಮುಗಿದು ಹೋದರೆ ಹೊಸದಾಗಿ ಬಿಸಿಯಾಗಿ ಅಡಿಗೆ ಮಾಡಿ ಇಡುತ್ತಿದ್ದರು. ರಾಜರಿಂದ, ಸರ್ಕಾರದಿಂದ ಬಿರುದುಬಾವಲಿಗಳ ಆಸೆಗಾಗಿ ಶ್ರೀಮಂತರು ಮಾಡುವ ದೊಡ್ಡ ದಾನಗಳಿಗಿಂತಲೂ, ದೀನನು ತನ್ನಲ್ಲಿರುವ ಒಂದು ತುತ್ತು ಅನ್ನವನ್ನು ಮತ್ತೊಬ್ಬನಿಗೆ ನೀಡುವುದು ಹೃದಯದ ಹಿರಿಮೆಯ ಹೆಗ್ಗುರುತು. ರಾಮಚಂದ್ರ ಮುಖರ್ಜಿ ಎಲ್ಲರಂತೆ ಬಡವರು. ಆದರೆ ಅಕಸ್ಮಾತ್ ಆ ವರುಷ ಬೆಳೆ ಸ್ವಲ್ಪ ಹೆಚ್ಚಾಗಿತ್ತು. ಮುಂದೆ ತನ್ನ ಗತಿ ಯೇನು ಎನ್ನದೆ ಇರುವುದನ್ನೆಲ್ಲ ದಾನ ಮಾಡುವರು.

ರಾಮಚಂದ್ರ ಮುಖರ್ಜಿಯವರ ಪತ್ನಿ ಶ್ಯಾಮಸುಂದರಿದೇವಿ ಸಿಹೋ ರಿನ ಹರಿಪ್ರಸಾದ ಮಜುಮ್‌ದಾರರ ಮನೆಯಿಂದ ಬಂದ ಹೆಣ್ಣು ಮಗಳು. ದಯೆಯಲ್ಲಿ, ದೈವ ಭಕ್ತಿಯಲ್ಲಿ, ಪರೋಪಕಾರದಲ್ಲಿ ಪತಿಗೆ ತಕ್ಕ ಸತಿ. ಅವರು ದೃಢಕಾಯರಾಗಿದ್ದರು. ಆರೋಗ್ಯವಾಗಿದ್ದರು. ಬಹಳ ಸರಳ ಸ್ವಭಾವದವರು. ಸ್ವಲ್ಪವೂ ಕಪಟವಿರಲಿಲ್ಲ. ಬಡವರು ಬಂದರೆ ಅವರಿಗೆ ಬಡಿಸಿ ಉಣಿಸುವುದರಲ್ಲಿ ತುಂಬಾ ಆಸೆ. ಅವರ ಕಷ್ಟವನ್ನು ಕೇಳಿ, ಪಶ್ಚಾತ್ತಾಪ ತೋರಿ, ದುಃಖದ ಭಾರವನ್ನು ಇಳಿಸುತ್ತಿದ್ದರು. ನೆರೆಹೊರೆ ಯವರಿಗೆ ಯಾವ ಕಷ್ಟ ಬಂದರೂ ಅವರ ಸಹಾಯಕ್ಕೆ ಸದಾ ಸಿದ್ಧರಾಗಿರು ತ್ತಿದ್ದರು. ತಾಯಿಯೊಲುಮೆ ಇವರಲ್ಲಿ ಮೂರ್ತಿಮತ್ತಾಗಿತ್ತು. ಅವರ ಮಗಳು ಶ್ರೀಶಾರದಾದೇವಿ ಶ್ರೀರಾಮಕೃಷ್ಣಪರಮಹಂಸರನ್ನು ಕೈಹಿಡಿದು ಶ್ರೀಮಾತೆ ಎಂದು ಪ್ರಖ್ಯಾತರಾದಮೇಲೆ, ತಮ್ಮ ಮನೆಗೆ ಬರುತ್ತಿದ್ದ ಆ ಭಕ್ತರ ತಂಡವನ್ನೆಲ್ಲ ತಮ್ಮ ಮೊಮ್ಮಕ್ಕಳಂತೆ ಕಂಡು ಪ್ರೀತಿಸುತ್ತಿದ್ದರು.

ಜಯರಾಮವಟಿಯ ಸಮೀಪದಲ್ಲಿ ಶಿಹೂರ್ ಎಂಬ ಗ್ರಾಮವಿದೆ. ಒಂದು ದಿನ ಶ್ಯಾಮಸುಂದರಿದೇವಿ ಆ ಊರಿನಲ್ಲಿದ್ದ ದೇವಾಲಯಕ್ಕೆ ಹೋಗಿದ್ದರು. ದೇವರ ದರ್ಶನ ಮಾಡಿಕೊಂಡು, ಸಂಜೆ ಜಯರಾಮವಟಿಗೆ ಹಿಂತಿರುಗುತ್ತಿದರು. ಆ ಊರಿನ ಪಶ್ಚಿಮದಲ್ಲಿ ಸ್ವಲ್ಪ ದೂರಕ್ಕೆ ಜಾತ್ರ ಸಿದ್ಧಾದೇವಿಯ ಸಣ್ಣ ದೇವಾಲಯವಿದೆ. ಅದರ ಸಮೀಪದಲ್ಲಿ ಒಂದು ಮರದಡಿಯಲ್ಲಿ ಇವರು ಕುಳಿತಿದ್ದಾಗ ಅವರೆದುರು ಅತಿ ತೇಜಸ್ಸಿನಿಂದ

ಕೂಡಿದ ಐದು ವರ್ಷದ ಒಂದು ಸಣ್ಣ ಹುಡುಗಿ ಬಂದು ನಿಂತಿತು. ಮಗು ಮುಂದಹಾಸವನ್ನು ಬೀರಿ, ಇವರನ್ನು ತನ್ನ ಕೋಮಲ ಕರಗಳಿಂದ ತಬ್ಬಿ ಕೊಂಡು "ಅಮ್ಮಾ ನಾನು ನಿಮ್ಮ ಮನೆಗೆ ಬರುತ್ತೇನೆ" ಎಂದಂತೆ ಇವರಿಗೆ ಕಂಡಿತಂತೆ. ತಕ್ಷಣವೇ ಇವರು ಪ್ರಜ್ಞಾಶೂನ್ಯರಾಗಿ ಅಲ್ಲಿ ಬಿದ್ದರು. ನಂತರ ನಂಟರು ಬಂದು ಇವರನ್ನು ಮನೆಗೆ ಕರೆದುಕೊಂಡು ಹೋಗಿ ಶೈತ್ಯೋಪಚಾರವನ್ನು ಮಾಡಿದಮೇಲೆ ಪ್ರಜ್ಞೆ ಬಂದಿತು. ಇವರ ಪತಿ ಕಾರ್ಯನಿಮಿತ್ತದಿಂದ ಕಲ್ಕತ್ತೆಗೆ ಹೋಗಿದ್ದರು. ಅವರು ಬಂದ ಮೇಲೆ ಈ ವಿಷಯವನ್ನೆಲ್ಲಾ ಕೇಳಿ ಅತಿ ಕುತೂಹಲರಾಗಿ ಆ ಭವಿಷ್ಯ ಸಿದ್ಧಿಸುವುದನ್ನೇ ಎದುರು ನೋಡುತ್ತಿದ್ದರು.

೧೮೫೩ನೇ ಇಸವಿ ಡಿಸೆಂಬರ್ ೨೨ನೇ ತೇದಿ. ಕೃಷ್ಣಪಕ್ಷ, ಸಪ್ತಮಿ ದಿನ, ಗುರುವಾರ. ಎಂದಿನಂತೆ ರವಿ ಪಡುವಲ ಅಂಚಿನಲ್ಲಿ ಸಂಧ್ಯಾರಾಗ ವನ್ನು ಚೆಲ್ಲಿ ಮರೆಯಾದನು. ತಿಮಿರವೇಣಿನ ಸನುಗತ್ತಲ ಜಯರಾಮವಟಿ ಗ್ರಾಮವನ್ನು ಮುಸುಕುತ್ತಿದೆ. ಚಳಿಗಾಲದ ತಂಗಾಳಿ ತೀಡುತ್ತಿದೆ. ತಾರೆಯ ಸೊಡರುಗಳು ಗಗನದಲ್ಲಿ ಒಂದೊಂದಾಗಿ ಮಿನುಗಲು ಮೊದ ಲಾಗಿವೆ. ತಮ್ಮ ದಿನದ ಪಯಣವನ್ನು ಪೂರೈಸಿ ಬಂದ ಹಕ್ಕಿಗಳು ಹತ್ತಿರದ ಗಿಡಮರಗಳಮೇಲೆ ಕುಳಿತು ಸ್ವರ ನೈವೇದ್ಯವನ್ನು ದೇವರಿಗೆ ನೀಡುತ್ತಿವೆ. ಆಗತಾನೆ ಸಿಂಹವಾಹಿನಿ ದೇವಮಂದಿರದಲ್ಲಿ ಮಂಗಳಾರತಿಗೆ ಮೊದಲಾಯಿತು. ಶಂಖ, ಜಾಗಟೆ, ಗಂಟೆಗಳ ಮಂಗಳ ನಿನಾದ ಮೌನ ವಾತಾವರಣವನ್ನು ತುಂಬಿದೆ. ಪ್ರಕೃತಿಯೇ ಮೌನವಾಗಿ ಸೃಷ್ಟಿಕರ್ತ ನೆದುರಿಗೆ ಬಾಗಿರುವ ಸಮಯವಿನು. ಇಂತಹ ಶುಭಸಮಯದಲ್ಲಿ, ಉತ್ತರ ಫಲ್ಗುಣೀ ನಕ್ಷತ್ರದಲ್ಲಿ, ಶ್ಯಾಮಸುಂದರಿದೇವಿಗೆ ಒಂದು ಹೆಣ್ಣು ಶಿಶು ಜನಿಸಿತು. ಆ ಶಾಂತ ಮನೆ, ಜನಿಸಿದ ಮೊದಲನೇ ಶಿಶುವಿನ ಆನಂದದಿಂದ ತುಂಬಿ ತುಳುಕಾಡಿತು. "ಶ್ರೀ ಶಾರದಾದೇವಿ" ಎಂದು ಮಗುವಿಗೆ ನಾಮಕರಣ ಮಾಡಿದರು. ಮಗು ತನ್ನ ಬಾಲಲೀಲೆಗಳಿಂದ ಹೆತ್ತ ತಂದೆತಾಯಿಗಳಿಗೆ ಸಂತೋಷಪಡಿಸುತ್ತ ಅವರ ಲಾಲನೆಪಾಲನೆ ಯಲ್ಲಿ ಬೆಳೆಯಿತು.

ಶ್ರೀ ಶಾರದಾದೇವಿ ಹಿರಿಯ ಮಗಳು. ತಂದೆ ತಾಯಿಗಳು ಮುದ್ದಿ ನಿಂದ ಪ್ರೀತಿಸುತ್ತಿದ್ದರು. ಶಾರದಾದೇವಿಯರಿಗೆ ಸುಮಾರು ಐದು ವರ್ಷ ವಾಗುತ್ತಲೇ ಪೂಜೆಗಾಗಿ ಹೂವು ತುಳಸಿ ಮುಂತಾದವುಗಳನ್ನು ತಂದು ಕೊಡುತ್ತಿದ್ದರು. ಮನೆಗೆಲಸದಲ್ಲಿ ತಾಯಿಗೆ ಸಹಾಯಮಾಡುತ್ತಿದ್ದರು.

ಅನಿವಾರ್ಯವಾದಾಗ ಇವರೇ ಅಡಿಗೆಯನ್ನು ಕೂಡ ಮಾಡಬೇಕಾಗಿತ್ತು. ಆಗ ಒಲೆಯ ಮೇಲಿದ್ದ ಅನ್ನದ ತಪ್ಪಲೆಯನ್ನು ತಂದೆಯು ಕೆಳಗೆ ಇಳಿಸುತ್ತಿದ್ದರಂತೆ.

ಬಂಗಾಳಾದೇಶದಲ್ಲಿ ಮಳೆ ಬಹಳ ಹೆಚ್ಚು. ಕೆಲವು ಸಮಯದಲ್ಲಿ ಮನೆಯಿಂದ ಮನೆಗೆ ಹೋಗಬೇಕಾದರೆ ದೋಣಿಯಲ್ಲಿ ಹೋಗಬೇಕು. ಇಂತಹ ಸಮಯಗಳಲ್ಲಿ ದನಕ್ಕೆ ಹುಲ್ಲು ಇಲ್ಲದೇ ಇರುವಾಗ ಸಣ್ಣ ಹುಡುಗಿಯಾದ ಶಾರದಾದೇವಿ ಮಂಡಿಯುದ್ದ ನೀರಿನಲ್ಲೇ ನಡೆದು ಹೋಗಿ ಹುಲ್ಲನ್ನು ಕೊಯ್ದು ತರುತ್ತಿದ್ದರು.

ಕೆಲವು ಸಮಯದಲ್ಲಿ ಇವರ ಗದ್ದೆಯಲ್ಲಿ ಆಳುಗಳು ಕೆಲಸ ಮಾಡುವಾಗ, ಇವರ ತಂದೆ ಕೆಲಸದವರನ್ನು ನೋಡಿಕೊಳ್ಳುತ್ತ ಗದ್ದೆಯಲ್ಲಿರುತ್ತಿದ್ದರು. ಆಗ ಸಣ್ಣದೊಂದು ಬುಟ್ಟಿಯಲ್ಲಿ ಆಳುಗಳಿಗೆ ಆಹಾರವನ್ನು ಶಾರದಾದೇವಿ ತೆಗೆದುಕೊಂಡು ಹೋಗುತ್ತಿದ್ದರು. ಹಗಲೆಲ್ಲ ಬಿಸಿಲಿನಲ್ಲಿ ಕೆಲಸಮಾಡಿ ಸಾಕಾಗಿರುವವರಿಗೆ ದೂರದಲ್ಲಿ ಗೂಡೆ ಕಂಡೊಡನೆಯೆ ಆನಂದ! ಆಳುಗಳೆಲ್ಲರನ್ನು ಕರೆದು ಕೈಕಾಲು ತೊಳೆದುಕೊಳ್ಳುವಂತೆ ಹೇಳುವರು. ಎಲ್ಲರಿಗೂ ಆಹಾರವನ್ನು ಬಡಿಸಿ ಅವರ ಊಟವಾದಮೇಲೆ ಅವರೊಂದಿಗೆ ಸ್ವಲ್ಪ ಹೊತ್ತು ಮಾತನಾಡುತ್ತಿದ್ದು ನಂತರ ಮನೆಗೆ ಬರುತ್ತಿದ್ದರು.

ಒಮ್ಮೆ ಯಾವುದೋ ಒಂದು ರೋಗ ಬಂದು ಸುತ್ತಮುತ್ತಲಿರುವ ಭತ್ತದ ತೆನೆಯನ್ನೆಲ್ಲ ಹಾಳುಮಾಡಿತು. ಅನೇಕರಿಗೆ ಮನೆಯಲ್ಲಿ ತಿನ್ನಲು ಒಪ್ಪತ್ತು ಊಟಕ್ಕೆ ಕೂಡ ಇರಲಿಲ್ಲ. ಅದೇ ಸಮಯದಲ್ಲಿ ಶಾರದಾದೇವಿಯರು ಗದ್ದೆಯಿಂದ ಗದ್ದೆಗೆ ಹೋಗಿ ಅಲ್ಲಲ್ಲಿ ಬಿದ್ದಿರುವ ಕೆಲವು ಭತ್ತದ ಕಾಳುಗಳನ್ನು ಆರಿಸಿ ಒಂದು ಸಣ್ಣ ಬುಟ್ಟಿಯೊಳಗೆ ಹಾಕಿ ತಾಯಿಗೆ ತಂದು ಕೊಡುತ್ತಿದ್ದರು. ಅವರು ಇದನ್ನು ಕುಟ್ಟಿ ಅಕ್ಕಿಮಾಡಿದ ಮೇಲೆಯೇ ಎಲ್ಲರಿಗೂ ಊಟ. ಒಮ್ಮೆ ದೊಡ್ಡ ಕ್ಷಾಮ ತಲೆದೋರಿತು. ದೈವವಶಾತ್ ಇವರ ಮನೆಯಲ್ಲಿ ಎಂದಿಗಿಂತ ಹೆಚ್ಚಾಗಿ ದವಸವಿತ್ತು. ಆಗ ಮನೆಯವರು ಬಡವರಿಗಾಗಿ ಅಡಿಗೆಯನ್ನು ಮಾಡಿಡುತ್ತಿದ್ದರು. ಶ್ರೀ ಶಾರದಾದೇವಿಯರು ಆಹಾರ ಬಿಸಿಯಾಗಿದ್ದರೆ ಬೀಸಣಿಗೆಯಿಂದ ಬೀಸಿ, ಆರಿಸಿ, ಬಂದ ಬಡವರಿಗೆ ಆದರದಿಂದ ಭಡಿಸುತ್ತಿದ್ದರು. ಒಂದು ದಿನ ಅವರು ಮನೆ ಹೊರಗೆ ಹಸುವಿಗಾಗಿ ಇಟ್ಟ ಅಕ್ಕಿ ತೊಳೆದ ನೀರಿನಲ್ಲಿ ತೌಡನ್ನು ಬೆರಸುತ್ತಿದ್ದರು. ಯಾರೋ ಒಬ್ಬ ಹಸಿದ ಹೆಂಗಸು ಬಂದು ಅದನ್ನು ಕುಡಿಯಲು ಮೊದಲು

ಮಾಡಿದಳು. ಒಳಗೆ ಅನ್ನ ಇದೆ, ತಿನ್ನು ಹೋಗು, ಎಂದು ಹೇಳಿದರೂ ಕೇಳಲಿಲ್ಲ. ಪಾಪ ಅವಳಿಗೆ ಅಷ್ಟೊಂದು ಹಸುವಿನ ಆತುರ!

ಯಾರು ಮುಂದೆ ಯುಗಾವತಾರಪುರುಷ ಶ್ರೀರಾಮಕೃಷ್ಣಪರಮ ಹಂಸರನ್ನು ಕೈಹಿಡಿದರೋ, ಯಾರನ್ನು ದೇವಿಯ ಪೀಠದಮೇಲಿಟ್ಟು ಜಗದ ನಾನಾಭಾಗಗಳಿಂದ ಬಂದ ಶಿಷ್ಯರು ತಾಯಿಯೆಂದು ಪೂಜಿಸಿದರೋ, ಯಾರು ಭಾರತೀಯ ನಾರಿಯರಿಗೆ ಮುಂದೆ ಆದರ್ಶಪ್ರಾಯರಾದರೋ, ಅವರ ಜೀವನ ಮೊದಲಾದುದು ಇಂದಿನ ಯಾವುದೊಂದು ಸೌಲಭ್ಯ ಗಳಿಲ್ಲದ ಇಂತಹ ಒಂದು ಸಣ್ಣ ಹಳ್ಳಿಯಲ್ಲಿ. ತಂದೆತಾಯಿಗಳು ಬಡವರು. ಶ್ರೀಮಂತರ ಮಕ್ಕಳುಗಳಿಗಿರುವ ಜೀವನ ಸೌಕರ್ಯಗಳಿರಲಿಲ್ಲ. ಬಡತನ, ಕಷ್ಟಗಳ ಗರಡಿಯಲ್ಲಿ ಇವರ ಜೀವನ ಪರಿಪುಷ್ಟಿಗೊಂಡಿತು. ಕಷ್ಟಪಟ್ಟು ಕೆಲಸಮಾಡುವುದನ್ನು ಕಲಿತರು. ಪರರ ದುಃಖಕ್ಕೆ ಮರುಗುವುದನ್ನು ಕಲಿತರು ಅವರ ಕಷ್ಟ ಶಮನಕ್ಕಾಗಿ ದುಡಿಯಲು ಪ್ರಯತ್ನಿಸುತ್ತಿದ್ದರು. ಈ ಶೀಲವೇ ಇವರ ಮುಂದಿನ ಜೀವನದಲ್ಲಿಯೂ ವಿಕಾಸವಾಗಿ ಬೆಳಗು ವುದನ್ನು ನಾವು ಕಾಣುತ್ತೇವೆ.

ಶ್ರೀ ಶಾರದಾದೇವಿಯರು ಹುಡುಗಿಯಾಗಿದ್ದಾಗ ಕೂಡ ಉಳಿದ ಮಕ್ಕಳಂತೆ ಮನಬಂದ ರೀತಿಯಲ್ಲಿ ಆಡುತ್ತಿರಲಿಲ್ಲ. ಅವರು ಆಡುವಾಗಲೇ ಮುಂದೆ ತಾವು ಯಾವ ಆದರ್ಶಕ್ಕೆ ಜೀವನವನ್ನು ಮೀಸಲಾಗಿಡ ಬೇಕೆಂದು ಬಯಸಿದರೋ ಅದರ ಕುರುಹುಗಳನ್ನು ಬಾಲ್ಯದಲ್ಲಿಯೇ ಕಾಣ ಬಹುದಾಗಿತ್ತು. ಬಯ್ಯುವುದಾಗಲಿ, ಜಗಳವಾಡುವುದಾಗಲಿ ಅವರಿಗೆ ಹಿಡಿಸದು. ಯಾರಾದರೂ ಜಗಳವಾಡಿದರೆ ಅವರಿಗೆ ಸಹನೆಯಿಂದ ಬುದ್ಧಿ ಹೇಳುತ್ತಿದ್ದರು. ಆಟದಲ್ಲೆಲ್ಲಾ ತಾವು ಚೋಟು ಹುಡುಗಿ ಯಾಗಿದ್ದರೂ, ಮನೆಯ ಹಿರಿಯ ರಾಣಿಯಂತೆ ವರ್ತಿಸುತ್ತಿದ್ದರು. ಮಕ್ಕಳು ಸಾಧಾರಣವಾಗಿ ಆಡುವ ಆಟದ ಸಾಮಾನುಗಳನ್ನು ಬಿಟ್ಟು, ಕಾಳಿ, ಶಿವ ಮುಂತಾದ ವಿಗ್ರಹಗಳನ್ನು ಪೂಜಿಸುತ್ತಿದ್ದರು. ಒಮ್ಮೆ ಜಗದ್ಧಾತ್ರಿಯ ಪೂಜೆಯ ಸಮಯದಲ್ಲಿ ವಿಗ್ರಹದ ಮುಂದೆ ಬಾಹ್ಯಪ್ರಜ್ಞೆಯಿಲ್ಲದೆ, ಧ್ಯಾನಾಸಕ್ತರಾಗಿದ್ದುದನ್ನು ನೋಡಿ ಅಲ್ಲಿದ್ದ ಕೆಲವು ಪಂಡಿತರು ಆಶ್ಚರ್ಯ ಪಟ್ಟರಂತೆ. ಬೆಳೆಯುವ ಪೈರು ಮೊಳಕೆಯಲ್ಲಿಯೇ ಕಾಣುವುದು ಎಂಬ ನಾಣ್ಣುಡಿಯಂತೆ, ಮುಂದೆ ಅರಳುವ ಸುಂದರ ಆಧ್ಯಾತ್ಮಿಕ ಜೀವನದ ಹೂವಿಗೆ ಆಗಲೇ ಸನ್ನಾಹಗಳು ಆಗುತ್ತಿದ್ದವು.

ಕೆಲವು ವೇಳೆ ತನ್ನ ತಮ್ಮಂದಿರನ್ನು ಶಾಲೆಗೆ ಕರೆದುಕೊಂಡುಹೋಗಿ

ಬಿಟ್ಟು ಬರುತ್ತಿದ್ದರು. ಆದರೂ ಅವರನ್ನು ಮಾತ್ರ ತಂದೆತಾಯಿಗಳು ಶಾಲೆಗೆ ಸೇರಿಸಿರಲಿಲ್ಲ. ಅವನು ಹೆಣ್ಣು ಮಗುವಿಗೆ ಓದು ಅಷ್ಟು ಅವಶ್ಯಕ ವೆಂದು ತಿಳಿದಿರಲಿಲ್ಲವೇನೋ! ಏನು ಕಲಿತರೆ ಏನು. ಕೊನೆಗೆ ಮದುವೆ ಯಾಗಿ ಮಕ್ಕಳನ್ನು ಹೆತ್ತು ಅವರ ಲಾಲನೆಪಾಲನೆಯಲ್ಲಿ ಹೆಂಗಸಿನ ಜೀವನ ಕಳೆಯುತ್ತದೆ. ಆದಕಾರಣ ಅವರಿಗೆ ಓದು ಬರಹ ಏಕೆ ಬೇಕು ಎಂದು ಅವರ ಭಾವನೆಯಾಗಿರಬಹುದು. ಮುಂದೆ ಶ್ರೀರಾಮಕೃಷ್ಣ ರೊಂದಿಗೆ ದಕ್ಷಿಣೇಶ್ವರದಲ್ಲಿದ್ದಾಗ ಲಕ್ಷ್ಮೀದೇವಿಯೆಂಬ ರಾಮಕೃಷ್ಣರ ಅಕ್ಕನಮಗಳು ಇವರೊಂದಿಗಿದ್ದರು. ಇವರ ಕೈಯ್ಯಲ್ಲಿ ಒಂದಾಣೆ ಕೊಟ್ಟು ಬಂಗಾಳಿ ಮೊದಲನೆ ಪುಸ್ತಕವನ್ನು ತರಿಸಿ ಓದಲು ಪ್ರಯತ್ನ ಪಡುತ್ತಿದ್ದರು. ಒಂದು ದಿವಸ ಹೃದಯರಾಮ ಎಂಬ ಶ್ರೀರಾಮಕೃಷ್ಣರ ಸೋದರಳಿಯ ಇದನ್ನು ನೋಡಿದನು. ಹೆಂಗಸರು ಹೀಗೆ ಓದು ಕಲಿತರೆ ಅವರು ಕ್ರಮೇಣ ಪ್ರೀತಿಯ ಕತೆ ನಾಟಕಗಳನ್ನು ಓದುತ್ತಾರೆ, ಆಮೇಲೆ ಅವರ ಮಾನಕ್ಕೆ ಚ್ಯುತಿಬರುತ್ತದೆ ಎಂದು ಅವನು ಗದರಿಸಿ, ಆ ಪುಸ್ತಕವನ್ನು ಕಿತ್ತು ಗಂಗೆಗೆ ಬಿಸಾಡಿದನಂತೆ! ಅನಂತರ ಶ್ರೀರಾಮಕೃಷ್ಣರು ಚಿಕಿತ್ಸೆಗಾಗಿ ಕಲ್ಕತ್ತೆ ಯಲ್ಲಿದ್ದಾಗ, ಭಾವಮುಖರ್ಜಿ ಮನೆಗೆ ಸೇರಿದ ಒಬ್ಬ ಹುಡುಗಿ ಪ್ರತಿ ದಿನವೂ ಗಂಗಾನದಿಗೆ ಬಟ್ಟೆ ಒಗೆಯಲು ಬರುತ್ತಿದ್ದಳು. ಅವಳಿಂದ ಸ್ವಲ್ಪ ಓದುವುದನ್ನು ಕಲಿತುಕೊಂಡರು. ಕ್ರಮೇಣ ಸ್ವಂತವಾಗಿ ರಾಮಾಯಣ ಮಹಾಭಾರತಗಳನ್ನು ಓದಿ ತಿಳಿದುಕೊಳ್ಳುವಷ್ಟು ಪಾಂಡಿತ್ಯ ವನ್ನು ಪಡೆದರು. ಆದರೂ ಬರೆಯಲು ಬರುತ್ತಿರಲಿಲ್ಲ. ಒಮ್ಮೆ ಇವರು ಪ್ರಖ್ಯಾತರಾದ ಮೇಲೆ ಯಾರೋ ಒಬ್ಬ ಸ್ತ್ರೀ ಭಕ್ತಳು ಬಂದು ನಿಮ್ಮ ಹೆಸರನ್ನು ಬರೆದು ಕೊಡಿ; ಜ್ಞಾಪಕಾರ್ಥವಾಗಿ ಇಟ್ಟುಕೊಂಡಿರುತ್ತೇನೆಂದು ಕೇಳಿದಳು. ಬರೆಯಲು ಪ್ರಯತ್ನ ಪಟ್ಟು ಸಾಗದೆ ಏನೋ ಗೀಚಿ ಕೊಟ್ಟರು. ಅದು ಅವರ ಹೆಸರನ್ನು ಸೂಚಿಸುವ ಅಕ್ಷರಗಳಲ್ಲದಿದ್ದರೂ ಅವರ ಪವಿತ್ರಹಸ್ತದಿಂದ ಬಂದುದರಿಂದ ಅವರ ಜ್ಞಾಪಕವನ್ನು ಕೊಡುತ್ತದೆ ಎಂದು ಅದನ್ನೇ ಆಕೆಯು ತೆಗೆದುಕೊಂಡು ಹೋದಳಂತೆ!

ತಂದೆತಾಯಿಗಳು ಶಾರದಾದೇವಿಯವರನ್ನು ಪಾಠಶಾಲೆಗೆ ಕಳು ಹಿಸಲಿಲ್ಲ, ವಿದ್ಯಾವತಿಯಾಗಲು ಅವಕಾಶ ಕಲ್ಪಿಸಲಿಲ್ಲ ಎಂದು ಅವರನ್ನು ಹಳಿಯುವುದಕ್ಕೆ ಆಗುವುದಿಲ್ಲ. ಅವರು ಅಕ್ಷರಸ್ಥೆಯಾಗಲು ಅವಕಾಶ ಸಿಕ್ಕದೇ ಹೋಗಿರಬಹುದು, ಆದರೆ ವಿಷಯ ಸಂಗ್ರಹ ಮಾಡುವುದಕ್ಕೆ ಜೀವನದಲ್ಲಿ ತಮ್ಮ ಗುರಿ ಏನು ಎಂಬುದನ್ನು ತಿಳಿದುಕೊಳ್ಳುವುದಕ್ಕೆ,

ಉದಾತ್ತಶೀಲಗಳನ್ನು ಬೆಳೆಸುವುದಕ್ಕೆ, ತಂದೆತಾಯಿಗಳು ತಮ್ಮ ಕೈಲಾದ ಸಹಾಯವನ್ನೆಲ್ಲಾ ಮಾಡುತ್ತಿದ್ದರು. ರಾಮಾಯಣ, ಮಹಾಭಾರತ, ಚೈತನ್ಯ ಭಾಗವತಗಳನ್ನು ಮನೆಯಲ್ಲಿ ಓದುತ್ತಿದ್ದರು. ತಾಯಿ ಕೆಲವು ವೇಳೆ ಶಾರದೆಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸೀತೆ, ಸಾವಿತ್ರಿ, ಶಬರಿ ಮುಂತಾದವರ ವಿಚಾರವಾಗಿ ಹೇಳುತ್ತಿದ್ದರು. ನಂತರ ಆ ಮಗುವಿಗೆ ನೀನು ಅದರಂತೆ ಆಗಬೇಕು ಎನ್ನುತ್ತಿದ್ದರಂತೆ. ಎಳೆ ಹೃದಯದಲ್ಲಿ ಬಿತ್ತಿದ ಬುದ್ಧಿವಾದಗಳು, ನಾವು ನಂತರ ಪುಸ್ತಕಗಳಿಂದ ಮಾಡುವ ವಿಷಯಸಂಗ್ರಹಕ್ಕಿಂತ ಹೆಚ್ಚಿನದು. ನಮ್ಮ ಪುರಾಣಗಳು ಕೇವಲ ಬೇಸರವನ್ನು ಪರಿಹರಿಸುವ ಕಟ್ಟುಕಥೆಗಳಲ್ಲ ಎಲ್ಲರ ಮನಸ್ಸನ್ನು ತನ್ನೆಡೆಗೆ ಸೆಳೆಯುವ ಮನೋರಂಜಕವಾದ ಕಥಾಸಾಮಗ್ರಿಗಳೇನೋ ಇಲ್ಲಿವೆ. ಆದರೆ ಇದು ಅತ್ತಿತ್ತ ಚಲಿಸುತ್ತಿರುವ ಮನುಷ್ಯನ ಚಂಚಲ ಮನಸ್ಸನ್ನು ತನ್ನೆಡೆಗೆ ಒಲಿಸಿಕೊಳ್ಳುವುದಕ್ಕೆ ಮಾತ್ರ. ನಮ್ಮ ಪುರಾಣ ಕರ್ತೃಗಳಾದ ವ್ಯಾಸ, ವಾಲ್ಮೀಕಿಗಳು ಕೇವಲ ಕವಿಚಕ್ರವರ್ತಿಗಳು ಮಾತ್ರ ವಾಗಿರಲಿಲ್ಲ. ಋಷಿವರ್ಯರೂ ಆಗಿದ್ದರು. ಪರಮಸತ್ಯವನ್ನು ಸಾಕ್ಷಾತ್ಕಾರಮಾಡಿಕೊಂಡಿದ್ದರು. ಚಿತ್ತವನ್ನು ಸಾಹಿತ್ಯದ ಆನಂದವಲ್ಲಿ ಮುಳುಗಿಸುವುದು ಮಾತ್ರವಲ್ಲ ಅವರ ಗುರಿ. ಸಾಹಿತ್ಯವೂ ಸತ್ಯದೇಗುಲಕ್ಕೆ ಕರೆದೊಯ್ಯುವ ಒಂದು ರಾಜಮಾರ್ಗವಾಗಿತ್ತು. ಮಾನವನ ಎದೆಯಲ್ಲಿ ಜ್ಞಾನ, ಭಕ್ತಿ, ವೈರಾಗ್ಯಗಳ ಬೀಜವನ್ನು ಬಿತ್ತುತ್ತಿದ್ದರು. ಕರ್ಣಾರ್ಜುನರಂತಹ ಮಲ್ಲರನ್ನು ಅದು ಮಾಡಬಲ್ಲುದು. ಸೀತೆ ಸಾವಿತ್ರಿಯರಂತಹ ಪತಿವ್ರತೆಯರನ್ನು ಮಾಡಬಲ್ಲುದು. ಶುಕನಂತಹ ಜ್ಞಾನಿಯನ್ನು ಅದು ಪೋಷಿಸಬಲ್ಲುದು. ಇವುಗಳನ್ನು ಬಾಲ್ಯದಲ್ಲಿ ಕೇಳುವುದರಿಂದ ನಮ್ಮ ಜೀವನದ ಮೇಲೆ ಉಂಟಾಗುವ ಪರಿಣಾಮ ನಾವು ವಯಸ್ಸಾದ ಮೇಲೆ ಓದುವ ಗ್ರಂಥರಾಶಿಗಿಂತ ಹೆಚ್ಚಿನದು. ಮಧ್ಯೆ ಮಧ್ಯೆ ಆ ಊರಿಗೆ ಭಾಗವತರ ಗುಂಪು ಬರುತ್ತಿತ್ತು. ಪುರಾಣದಿಂದ ಆಯ್ದ ಸುಂದರವಾದ ಕಥೆಗಳನ್ನು ಭಾವಪೂರ್ಣವಾದ ಸಂಗೀತದೊಂದಿಗೆ ಹಾಡಿ ಹಳ್ಳಿಗರ ಮನಸ್ಸಿಗೆ ಒಂದು ದೊಡ್ಡ ರಸದೂಟವನ್ನು ಕೊಟ್ಟು ಹೋಗುತ್ತಿದ್ದರು. ಶ್ರೀಶಾರದಾದೇವಿಯವರ ಬಾಲ್ಯಜೀವನ ಶಾಂತವಾದ ಹಳ್ಳಿಯಲ್ಲಿ ಪುರಾಣ ಪುಣ್ಯಕಥೆಗಳ ಪಠಣ, ತಾಯಿತಂದೆಯರ ನಿರ್ಮಲ ಆದರ್ಶಜೀವನ ಇಂತಹ ವಾತಾವರಣದಲ್ಲಿ ಬೆಳೆಯತೊಡಗಿತು.



## ೩. ಲಗ್ನ

ಮದುವೆಯಾಗುವುದಕ್ಕೇ ಮಗಳು ಹುಟ್ಟುವುದು ಎಂಬ ನಾಣ್ಣುಡಿ ನಮ್ಮಲ್ಲೆಲ್ಲಾ ರೂಢಿಯಲ್ಲಿದೆ. ಎಷ್ಟು ಪ್ರೀತಿಯಿಂದ ತಾಯಿತಂದೆಯರು ಮಗಳನ್ನು ಸಾಕಿದರೇನು. ಅವಳನ್ನು ಅನೇಕ ವೇಳೆ ಹಿಂದೆ ಒಮ್ಮೆಯೂ ಕಾಣದ ಕೇಳದ ಗಂಡಿಗೆ ಧಾರೆಯೆರೆದು ಕೊಡಬೇಕಾಗುವುದು. ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗಳು ತಮ್ಮವಳಲ್ಲ. ಮುಂದೆ ಮದುವೆಯಾಗಲು ಬರುವ ವರನದು. ಮಗಳು ತಾಯಿಯ ಮನೆಯಲ್ಲಿರುವುದು, ಕೋಗಿಲೆ ಕಾಗೆಯ ಗೂಡಿನಲ್ಲಿ ತನ್ನ ಬಾಲ್ಯವನ್ನು ಕಳೆದಂತೆ. ಸ್ವಲ್ಪ ಬುದ್ಧಿ ಬಂದ ಮೇಲೆ ತನ್ನವರನ್ನು ಹುಡುಕಿಕೊಂಡು ಹಾರಿಹೋಗುವುದು. ಶಾರದಾ ದೇವಿಯರಿಗೆ ಸುಮಾರು ಐದು ವರ್ಷಗಳಾದಮೇಲೆ ಅವರಿಗೆ ಮದುವೆ ಮಾಡುವ ಚಿಂತೆ ತಂದೆತಾಯಿಯರಿಗೆ ಪ್ರಾರಂಭವಾಯಿತು. ಮಗಳಿಗೆ ಮದುವೆ ಆಗಿಬಿಟ್ಟರೆ ಎದೆಯಮೇಲೆ ಕುಳಿತ ಒಂದು ದೊಡ್ಡಭಾರ ಕಳೆದಂತೆ. ಪ್ರತಿಯೊಬ್ಬ ತಾಯಿತಂದೆಗೆ ಮಗಳನ್ನು ಹೆರುವುದು ಒಂದು ಸಾಲಮಾಡಿದಂತೆ. ಅದನ್ನು ಮದುವೆ ಮಾಡಿಯೆ ತೀರಿಸಬೇಕು. ಶ್ರೀ ಶಾರದಾದೇವಿಯವರನ್ನು ಮದುವೆಯಾಗಲು ಬರುವ ವರನಿಗೆ ಕಾಯುತ್ತ ಕುಳಿತಿದ್ದರು ಹೆತ್ತ ತಂದೆತಾಯಿಗಳು.

ಇದೇ ಸಮಯದಲ್ಲಿ ಮುಂದೆ ಇವರ ಜೀವನದ ಒಡೆಯರಾಗುವ ಶ್ರೀರಾಮಕೃಷ್ಣಪರಮಹಂಸರು ಪ್ರಚಂಡ ಸಾಧನೆಯಲ್ಲಿ ತೊಡಗಿದ್ದರು. ಇವರು ೧೮೩೬ನೇ ಇಸವಿಯಲ್ಲಿ ಕಮಾರಪುಕುರವೆಂಬ ಗ್ರಾಮದಲ್ಲಿ ಹುಟ್ಟಿದರು. ಬಾಲ್ಯದಿಂದಲೇ ತೀವ್ರ ವೈರಾಗ್ಯ ಮತ್ತು ದೈವಭಕ್ತಿ. ಉಳಿದ ಹುಡುಗರಂತೆ ಶಾಲೆಗೆ ಹೋಗಿ ಕಂಠಪಾಠಮಾಡಿ ಪಾಠವನ್ನು ಒಪ್ಪಿಸುವ ಹುಡುಗರ ಗುಂಪಿಗೆ ಸೇರಿದವರಲ್ಲ. ಉಪಾಧ್ಯಾಯರ ಪಾಠ ಕೇಳುವುದಕ್ಕಿಂತ ಅಲ್ಲಿ ನಡೆಯುತ್ತಿದ್ದ ಬಯಲಾಟ ಹರಿಕಥೆ ಇವುಗಳನ್ನು ಕೇಳುವುದರಲ್ಲಿ ಆಸೆ. ಬರೆದು ಓದುವುದಕ್ಕಿಂತ ಅನೇಕ ಸುಂದರ ದೇವದೇವಿಯರ ವಿಗ್ರಹಗಳನ್ನು ಮಾಡಿ ಪೂಜಿಸುವ ಆಸೆ. ಉಪಾಧ್ಯಾಯರು ಬರುವುದು ಸ್ವಲ್ಪ ತಡವಾದರೆ, ತಮ್ಮ ಶಾಲೆಯಲ್ಲಿದ್ದ ಉಳಿದ ಬಾಲಕರೊಂದಿಗೆ ಹತ್ತಿರದಲ್ಲಿದ್ದ ಮಾವಿನ ತೋಪಿಗೆ ಹೋಗಿ, ಬಯಲಾಟದಲ್ಲಿ ನೋಡಿದ ಅನೇಕ ಪಾತ್ರಗಳನ್ನು ಅನುಕರಿಸುವರು. ವಿದ್ಯೆ ಇಲ್ಲದೆ ಇದ್ದರೆ ಹೊಟ್ಟೆಗೆ ಹಿಟ್ಟು ಸಿಕ್ಕುವುದಿಲ್ಲ ಎಂದು ಒಮ್ಮೆ ಇವರ ಅಣ್ಣ ಬೆದರಿಸಿದನು. ಹೊಟ್ಟೆಗೆ ಅನ್ನ ಕೊಡುವ ವಿದ್ಯೆ ನನಗೆ ಬೇಡ, ಯಾವ ವಿದ್ಯೆಯನ್ನು ಕಲಿತರೆ ನಮ್ಮನು

ಜನನಮರಣಾತೀತರನ್ನಾಗಿ ಮಾಡುವುದೋ ಆ ವಿದ್ಯೆ ನನಗೆ ಬೇಕು, ಎಂದು ಅವರು ಉತ್ತರವಿತ್ತರು. ಕೊನೆಗೆ ರಾಣಿ ರಾಸಮಣಿ ಎಂಬಾಕೆ ಗಂಗಾನದಿಯ ತೀರದಲ್ಲಿ ಕಾಳಿಕಾ ದೇವಸ್ಥಾನವನ್ನು ಕಟ್ಟಿ ಪೂಜಾರಿಗಾಗಿ ಕಾಯುತ್ತಿದ್ದಳು. ಆಗ ಅವರಿಗೆ ದೇವೋನ್ಮತ್ತ, ಭಕ್ತ, ಶ್ರೀರಾಮಕೃಷ್ಣರು ಸಿಕ್ಕಿದರು. ಅಲ್ಲಿ ಕಾಳಿಕಾದೇವಿಯ ಪೂಜೆಗೆ ಆರಂಭಿಸಿದರು. ಅವರು ಅನೇಕ ಪೂಜಾರಿಗಳಂತೆ ಕಲ್ಲುದೇವರಿಗೆ, ನೀರೆರದು, ಬಟ್ಟೆಯುಡಿಸಿ, ನೈವೇದ್ಯವಿಟ್ಟು, ಅವನ ವರಗಳನ್ನು ಭಕ್ತರಿಗೆ ಬಿಕರಿ ಮಾಡುವ ಗುಂಪಿಗೆ ಸೇರಿದ್ದರೆ ಅವರ ಹೆಸರು ಇಂದು ಜಗದ್ವಂದ್ಯವಾಗುತ್ತಿರಲಿಲ್ಲ. ಅವರು ಪೂಜೆಮಾಡಲು ಹೊರಟದಿನದಿಂದಲೇ, "ಈ ಕಾಳಿ, ಏನು ಕಲ್ಲಿನ ಪ್ರತಿಮೆಯೋ, ಇದರಲ್ಲಿ ಏನಾದರೂ ದೇವಿಯ ಶಕ್ತಿಯಿದೆಯೊ" ಎಂಬುದನ್ನು ಪರೀಕ್ಷಿಸಲು ಮೊದಲು ಮಾಡಿದರು. ಯಾವಾಗಲೂ ತಾಯಿ ಎಂದು ಅಳುವರು. ನನಗೆ ನಿನ್ನ ದರ್ಶನವನ್ನು ಕೊಡು ಎಂದು ಕಂಬನಿದುಂಬಿ ಪ್ರಾರ್ಥಿಸುವರು. ಸಂಜೆ, ದಿನದ ಅವಸಾನದ ಸಮಯ. ರವಿ ಪಡುವಲಂಚಿನಲ್ಲಿ ಮುಳುಗುತ್ತಿರುವಾಗ ಗಂಗಾನದಿಯ ದಡಕ್ಕೆ ಬಂದು ಎದುರಿಗೆ ಮುಳುಗುತ್ತಿರುವ ರವಿಯನ್ನು ನೋಡುವರು. "ಆಗಲೇ ನನ್ನ ಆಯುಷ್ಯದಲ್ಲಿ ಒಂದು ದಿನ ಕಳೆದುಹೋಯಿತು. ಜಗನ್ಮಾತೆ ಇನ್ನೂ ಕರುಣೆದೋರಲಿಲ್ಲ. ಪ್ರಸನ್ನಳಾಗಲಿಲ್ಲ," ಎಂದು ನೆಲದಮೇಲೆ ಬಿದ್ದು ಹೊರಳಾಡಿ ಅಳುತ್ತಿದ್ದರು. ನದಿಗೆ ಬಂದ ಹೆಂಗಸರು ಇವರು ತಾಯಿಯ ಹೆಸರನ್ನು ಹೇಳಿ ಅಳುತ್ತಿರುವುದನ್ನು ನೋಡುತ್ತಿದ್ದರು. ಹೆತ್ತ ತಾಯಿಗೆ ಅಳುತ್ತಿರುವನೇನೋ ಎಂದು ಭಾವಿಸಿ, "ಅಯ್ಯೋ ಪಾಪ ತಾಯಿಗೆ ಎಷ್ಟು ಅಳುತ್ತಿರುವನು" ಎಂದು ಹೇಳಿ ಹೋಗುತ್ತಿದ್ದರು. ರಾತ್ರಿ ಪೂಜೆಯೆಲ್ಲ ಆದ ಮೇಲೆ ದೇವಸ್ಥಾನದ ಹಿಂದೆ ಇರುವ ಕಾಡಿಗೆ ಹೋಗಿ ಧ್ಯಾನದಲ್ಲಿ ಕಾಲ ಕಳೆಯುತ್ತಿದ್ದರು. ಕೊನೆಗೆ ಇವರಿಗೆ ದೇವಿ ಪ್ರತ್ಯಕ್ಷವಾದಮೇಲೆ ಇವರ ಪೂಜಾ ವಿಧಾನವೇ ಬೇರೆ ರೂಪುತಾಳಿತು. ಅನೇಕ ವೇಳೆ ದೇವಿಗೆ ಕೊಡುವ ನೈವೇದ್ಯವನ್ನು ತಾವು ರುಚಿ ನೋಡುವರು. ತಮಗೆ ತಾವೆ ಕೆಲವುವೇಳೆ ಪೂಜೆ ಮಾಡಿಕೊಳ್ಳುವರು. ಇಂತಹ ಅಲೌಕಿಕ ರೀತಿಯನ್ನು ನೋಡಿ ಹತ್ತಿರವಿದ್ದವರು ಇವರನ್ನು ಹುಚ್ಚರೆಂದು ಭಾವಿಸಲು ಮೊದಲು ಮಾಡಿದರು.

ಮಗನು ಹುಚ್ಚುಹುಚ್ಚಾಗಿ ದೇವರ ಹೆಸರಿನಲ್ಲಿ ಅಳುತ್ತಾನೆ, ದೇಹದ ಮೇಲೆ ಪ್ರಜ್ಞೆಯೆ ಇರುವುದಿಲ್ಲ ಎಂಬ ಸುದ್ದಿ ಕಮಾರಪುಕುರದಲ್ಲಿರುವ

ಇವರ ತಾಯಿ ಚಂದ್ರಮಣಿ ದೇವಿಗೆ ತಿಳಿಯಿತು. ಅವರು ಮಗನಿಗೆ ಶುಶ್ರೂಷೆ ಮಾಡುವುದಕ್ಕಾಗಿ ಅವನನ್ನು ಹಳ್ಳಿಗೆ ಕರೆದುಕೊಂಡುಬಂದರು. ಯಾರೋ ಒಬ್ಬರು ದೆವ್ವ ಹಿಡಿದಿದೆ ಎಂದರು. ಇದು ಮೂರ್ಛೆರೋಗ ವೆಂದರು ಕೆಲವರು. ಇದು ನರಗಳ ದುರ್ಬಲತೆ ಎಂದು ಮತ್ತೆ ಕೆಲವರು ಹೇಳಿದರು. ಅಂತೂ ದೆವ್ವ ಹಿಡಿದಿದ್ದರೆ ಬಿಟ್ಟುಹೋಗಲಿ ಎಂದು ಮಂತ್ರ ವಾದಿಯ ಕೈಯಿಂದ ಮಂತ್ರ ಹಾಕಿಸಿದರು. ವೈದ್ಯರಿಂದ ಔಷಧಿ ಕೊಡಿಸಿದರು. ಆದರೆ ದೇಹದ ಆರೋಗ್ಯ ಉತ್ತಮಗೊಂಡರೂ ದೇವರ ಮೇಲೆ ಹಿಡಿದಿದ್ದ ಹುಚ್ಚು ಬಿಟ್ಟುಹೋಗಲಿಲ್ಲ. ಯಾರೋ ಬುದ್ಧಿವಂತ ರೊಬ್ಬರು ಒಂದು ಉಪಾಯವನ್ನು ಹೇಳಿದರು. ಹುಡುಗನಿಗೆ ಆಗಲೇ ವಯಸ್ಸಾಗಿದೆ. ಇಂತಹ ದೇವರ ಹುಚ್ಚನ್ನು ಬಿಡಿಸಬೇಕಾದರೆ ಮದುವೆ ಮಾಡಿಬಿಡಿ; ಕ್ರಮೇಣ ಹುಚ್ಚೆಲ್ಲ ಬಿಟ್ಟು ಹೋಗುವುದು ಎಂದು ಹೇಳಿದರು. ಇದನ್ನು ಕೇಳಿದ ತಾಯಿಯ ಆನಂದಕ್ಕೆ ಪಾರವೇ ಇರಲಿಲ್ಲ. ಇಂತಹ ಉಪಾಯ ಇದುವರೆವಿಗೂ ಹೊಳೆಯಲೇ ಇಲ್ಲವಲ್ಲ, ದೇವರೆ ನಿಮ್ಮನ್ನು ಕಳುಹಿಸಿಕೊಟ್ಟಂತೆ ಆಯಿತು ಎಂದು ಮಾರನೆ ದಿನವೇ ಹೆಣ್ಣಿನ ಬೇಟೆಗೆ ಮೊದಲು ಮಾಡಿದರು. ಆಗಿನ ಕಾಲದಲ್ಲಿ ಅಲ್ಲಿ ಹೆಣ್ಣುಮಕ್ಕಳ ತಂದೆ ತಾಯಿಗಳು ಕನ್ಯಾಶುಲ್ಕವನ್ನು ಕೇಳುತ್ತಿದ್ದರು. ಬಡ ತಾಯಿಗೆ ಅಷ್ಟೊಂದು ದುಡ್ಡು ಕೊಟ್ಟು ಹೆಣ್ಣನ್ನು ಕೊಂಡು ತರುವುದು ಅಸಾಧ್ಯವಾದ ಮಾತಾಯಿತು. ಬಹಳ ಚಿಂತೆಯಿಂದ ಹರುಷಗುಂದಿದರು. ಒಂದು ದಿನ ಶ್ರೀರಾಮಕೃಷ್ಣರು ಅವರೆದುರಿಗೆ "ಅಲ್ಲಿ ಇಲ್ಲಿ ಹುಡುಕಿದರೆ ಪ್ರಯೋಜನ ವಿಲ್ಲ. ಜಯರಾಮವಟಿಯಲ್ಲಿರುವ ರಾಮಚಂದ್ರಮುಖರ್ಜಿಯವರ ಮನೆ ಯಲ್ಲಿ ನನಗಾಗಿ ಒಂದು ಹೆಣ್ಣು ಬೆಳೆಯುತ್ತಿದೆ. ಹೋಗಿ ವಿಚಾರಿಸಿ" ಎಂದರು. ಹುಡುಗನ ಮಾತಿನಲ್ಲಿ ತಾಯಿಗೆ ಅಷ್ಟು ನಂಬಿಕೆ ಇಲ್ಲದಿದ್ದರೂ, ವಿಚಾರಮಾಡಬಹುದಲ್ಲ ಎಂದು ಪ್ರಯತ್ನ ಪಟ್ಟಾಗ ಅಲ್ಲಿ ಒಂದು ಹುಡುಗಿ ಏನೋ ಇತ್ತು. ಆದರೆ ಆ ಹುಡುಗಿಗೆ ಐದು ವರ್ಷ ಮಾತ್ರ ಎಂದು ಗೊತ್ತಾಯಿತು. ಆಗ ಶ್ರೀರಾಮಕೃಷ್ಣರಿಗೆ ೨೩ ವಯಸ್ಸಾಗಿತ್ತು. ಬೇರೆ ಯಾವುದೂ ಹೆಣ್ಣು ಸಿಕ್ಕಲಿಲ್ಲ. ಹುಡುಗನ ಹುಚ್ಚು ಬಿಡಿಸುವುದಕ್ಕೆ ಇದೇ ಸಾಕು ಎಂದು ಯೋಚಿಸಿ ಲಗ್ನವನ್ನು ನಿಷ್ಕರ್ಷಿಸಿದರು. ಮದುವೆ ಹೆಣ್ಣಿನ ಮನೆಯಲ್ಲಿಯೇ ಆಯಿತು. ಇಬ್ಬರೂ ಬಡವರಾದುದರಿಂದ ಹೆಚ್ಚಿಗೆ ಆಡಂಬರವಿಲ್ಲದೆ ಮದುವೆ ಏನೋ ಆಯಿತು. ಶ್ರೀರಾಮಕೃಷ್ಣರ ಮನೆಯವರು ಹೆಣ್ಣಿನ ಮನೆಯವರಿಗೆ ಮುನ್ನೂರು ರೂಪಾಯಿ ಕನ್ಯಾ ಶುಲ್ಕವನ್ನೂ ಕೊಟ್ಟರಂತೆ.

ಮದುವೆಯಾದಮೇಲೆ ಶಾರದಾದೇವಿಯವರನ್ನು ಕಮಾರಪುಕುರಕ್ಕೆ ಕರೆದುಕೊಂಡು ಬಂದರು. ಚಂದ್ರಮಣಿದೇವಿ ಮದುವೆಯ ಸಮಯಕ್ಕೆ ಅವರ ಊರಿನ ಶ್ರೀಮಂತ ಲಾಹ ಎಂಬುವರ ಮನೆಯಿಂದ ಸೊಸೆಗೆ ಇಡುವುದಕ್ಕೆಂದು ಕೆಲವು ಚಿನ್ನದ ಒಡವೆಗಳನ್ನು ಎರವಲಾಗಿ ತಂದಿದ್ದರು. ಮದುವೆಯಾದಮೇಲೆ ಆ ಒಡವೆಯನ್ನು ಕೊಡುವ ಸಮಯ ಬಂದಿತು. ಶಾರದಾದೇವಿಯವರು ಒಡವೆಯನ್ನು ಕೊಡಲು ಒಪ್ಪಲಿಲ್ಲ. ಮಗುವನ್ನು ಅಳಸಿ ಮೇಲಿರುವ ಒಡವೆಯನ್ನು ತೆಗೆದುಕೊಡಲು ಮನಸ್ಸಾಗಲಿಲ್ಲ. ಆದರೆ ತಂದವರಮನೆಗೆ ಅವುಗಳನ್ನು ಹಿಂದಕ್ಕೆ ಕೊಡಬೇಕು. ಬೇರೆ ಉಪಾಯವಿಲ್ಲ. ಈ ಸ್ಥಿತಿಯಲ್ಲಿರುವಾಗ ಇವರ ಕಷ್ಟ ಶ್ರೀರಾಮಕೃಷ್ಣರಿಗೆ ಗೊತ್ತಾಯಿತು. ಅವರು ಇದಕ್ಕೆ ಏಕೆ ಇಷ್ಟು ಚಿಂತೆ ಎಂದು ರಾತ್ರಿ ಮಲಗಿದ್ದ ಶಾರದಾದೇವಿಯವರ ಹತ್ತಿರ ಹೋಗಿ ಅವರಿಗೆ ಸ್ವಲ್ಪವೂ ಎಚ್ಚರವಾಗದಂತೆ ಒಡವೆಗಳನ್ನೆಲ್ಲಾ ಕಳಚಿ ತಾಯಿಯ ಕೈಯಲ್ಲಿ ಕೊಟ್ಟರು. ಬೆಳಿಗ್ಗೆ ಎದ್ದು ಶ್ರೀ ಶಾರದಾದೇವಿಯವರು ನೆನ್ನೆ ತಮ್ಮ ಮೈಮೇಲಿದ್ದ ಒಡವೆಗಳು ಈಗ ಎಲ್ಲಿ ಎಂದು ಅಳಲು ಮೊದಲುಮಾಡಿದರು. ಅವರ ಅತ್ತೆ ಅವರನ್ನು ಎತ್ತಿಕೊಂಡು ಮುದ್ದಿಟ್ಟು, "ನೀನು ದೊಡ್ಡವಳಾದ ಮೇಲೆ ನನ್ನ ಗದಾಧರ ಈ ಒಡವೆಗಳೆಲ್ಲವನ್ನೂ ಮೀರಿಸುವ ಒಡವೆಗಳನ್ನು ತಂದುಕೊಡುವನು" ಎಂದು ಸಮಾಧಾನಪಡಿಸಿದರು. ಈ ಪ್ರಸಂಗ ಹುಡುಗಿಯ ಜತೆಗೆ ಬಂದಿದ್ದ ಅವರ ಸೋದರಮಾವನಿಗೆ ತಿಳಿಯಲು "ಎಂತಹ ಜನ! ಗಂಡನಮನೆಯವರು ಏನೂ ತಿಳಿಯದ ಹುಡುಗಿಗೆ ಮೋಸಮಾಡಿದರಲ್ಲ" ಎಂದು ದೊಡ್ಡ ಗದ್ದಲವನ್ನೆಬ್ಬಿಸಿ ಶಾರದಾದೇವಿಯರನ್ನು ಜಯರಾಮವಟಿಗೆ ಕರೆದುಕೊಂಡು ಹೊರಟುಹೋದನು. ಚಂದ್ರಮಣಿದೇವಿಗೆ ಮದುವೆ ಇಂತಹ ದೃಶ್ಯದಲ್ಲಿ ಕೊನೆಗೊಂಡಿತೇ ಎಂಬ ದುಃಖ. ಆದರೆ ಶ್ರೀರಾಮಕೃಷ್ಣರಿಗೆ ಇದು ಒಂದು ಹಾಸ್ಯಪ್ರಸಂಗವಾಗಿ ಕಂಡು ಬಂದಿತು. ಅವರು "ಈಗ ಎಷ್ಟು ಜಗಳ ಮಾಡಿದರೇನು, ಮದುವೆಯನ್ನು ರದ್ದುಮಾಡಲಾಗುವುದೆ!" ಎಂದು ನಕ್ಕರು. ಮದುವೆಯಾದ ಮೇಲೆ ಶ್ರೀರಾಮಕೃಷ್ಣರು ತಾಯಿಯ ಮನೆಯಲ್ಲಿ ಒಂದು ವರುಷ ಏಳು ತಿಂಗಳು ಇದ್ದರು. ದೇಹದ ಆರೋಗ್ಯವೇನೋ ಉತ್ತಮಗೊಂಡಿತು. ಎಲ್ಲರೊಂದಿಗೂ ಬಹಳ ವಿಶ್ವಾಸದಿಂದ ಮಾತನಾಡುತ್ತಿದ್ದರು. ಆದರೂ ಅಂತರಾಳದಲ್ಲಿ ದೇವರ ಹುಚ್ಚು ಗುಪ್ತಗಾಮಿನಿಯಾಗಿ ಹರಿಯುತ್ತಿತ್ತು.

ಒಮ್ಮೆ ಪದ್ಧತಿಯಮೇರೆ ಹೆಣ್ಣಿನ ಮನೆಗೆ ಹೋದರು. ಆಗ

ಶಾರದಾದೇವಿಯವರು ಅವರಿಗೆ ಕಾಲುಮುಟ್ಟಿ ನಮಸ್ಕಾರಮಾಡಿ ಅವರು ಕುಳಿತುಕೊಂಡಮೇಲೆ ಬೀಸಣಿಗೆಯಿಂದ ಬೀಸಿದರು. . ಇದನ್ನು ಮನೆಯವರೆಲ್ಲರೂ ನೋಡಿ ನಕ್ಕರು. ಎಳೆ ಹುಡುಗಿ, ಹೃದಯದಲ್ಲಿ ಆಗಲೇ ಇಷ್ಟು ಪತಿಪ್ರೇಮ ಹುಟ್ಟಿದೆಯಲ್ಲ ಎಂದು ಅವರಿಗೆ ಆಶ್ಚರ್ಯ. ಇದಾದ ಕೆಲವು ದಿನಗಳಮೇಲೆ ದಕ್ಷಿಣೇಶ್ವರಕ್ಕೆ ಹೊರಟರು. ಮದುವೆಯಾದ ಶಾರದಾದೇವಿಯವರ ಚಿತ್ರ ಅವರಿಗೆ ಮರೆಯಿತು. ದೇವರ ಹುಚ್ಚು ಮತ್ತೊಮ್ಮೆ ಪ್ರಳಯಕಾಲದ ಕಿಚ್ಚಿನಂತೆ ಉರಿಯತೊಡಗಿತು. ಶಾರದಾದೇವಿಯವರನ್ನು ಶ್ರೀರಾಮಕೃಷ್ಣರಿಗೆ ಕೊಟ್ಟು ಮದುವೆ ಮಾಡಿಸಿದ್ದು ಅವರ ದೇವರ ಹುಚ್ಚನ್ನು ಬಿಡಿಸುವುದಕ್ಕಾಗಿ. ಆ ಹುಚ್ಚನ್ನು ಇವರು ಬಿಡಿಸುತ್ತಾರೋ ಅಥವಾ ಇವರನ್ನೂ ಅದೇ ಹುಚ್ಚುಹೊಳೆ ಸೆಳೆದುಕೊಂಡುಹೋಗಿ ಸಚ್ಚಿದಾನಂದ ಸಾಗರವನ್ನು ಸೇರಿಸುತ್ತದೋ ಎಂಬುದನ್ನು ಮುಂದೆ ನೋಡುವೆವು.



## ೪. ಪತಿಯ ದರ್ಶನಕ್ಕೆ

ಶ್ರೀ ಶಾರದಾದೇವಿಯವರಿಗೆ ಹದಿನಾಲ್ಕು ವರ್ಷ ವಯಸ್ಸಾದಾಗ ಶ್ರೀರಾಮಕೃಷ್ಣರು ಬಂದು ಕೆಲವು ದಿನಗಳು ಕಮಾರಪುಕುರದಲ್ಲಿದ್ದರು. ಇವರೊಂದಿಗೆ ಭೈರವಿ ಬ್ರಾಹ್ಮಣಿ ಎಂಬ ಸನ್ಯಾಸಿನಿ ಬಂದಿದ್ದಳು. ಸಂಸ್ಕೃತ ದಲ್ಲಿ ಈಕೆಗೆ ಅದ್ವಿತೀಯ ಪಾಂಡಿತ್ಯವಿತ್ತು. ಅನೇಕ ಧರ್ಮ ಗ್ರಂಥಗಳನ್ನು ಓದಿದ್ದಳು. ಈಕೆ ಕೇವಲ ಪಾಂಡಿತ್ಯದ ಒಣಕಂತೆಯಲ್ಲದೇ ಸಾಧನೆಯ ಜೀವನದಲ್ಲಿಯೂ ಬಹಳ ಮುಂದುವರಿದು ಹೋಗಿದ್ದಳು. ಈಕೆಯೆ ಶ್ರೀರಾಮಕೃಷ್ಣಪರಮಹಂಸರಿಗೆ ವೈಷ್ಣವ ಮತ್ತು ತಾಂತ್ರಿಕ ಸಾಧನೆಯಲ್ಲಿ ಉಪದೇಶಮಾಡಿ ಮುಂದುವರಿಯುವಂತೆ ಪ್ರೇರೇಪಿಸಿದಳು. ದಕ್ಷಿಣೇಶ್ವರ ದಲ್ಲಿದ್ದ ಕೆಲವು ಪಂಡಿತರು ಶ್ರೀರಾಮಕೃಷ್ಣರನ್ನು ಹುಚ್ಚರೆಂದು ತಾತ್ಸಾರ ದಿಂದ ಕಾಣುತ್ತಿದ್ದರು. ಆಗ, "ಅವರದು ಹುಚ್ಚಲ್ಲ; ದಿವ್ಯಭಾವ; ಅದು ಮಹಾಪುರುಷರಿಗೆ ಮಾತ್ರ ಬರುವುದು, ಅದೆಲ್ಲ ಚೈತನ್ಯ ಭಾಗವತಲ್ಲಿದೆ," ಎಂದು ಹೇಳಿ ಪಂಡಿತರ ಮುಂದೆ ಶ್ರೀರಾಮಕೃಷ್ಣರು ಒಬ್ಬ ಅವತಾರವ್ಯಕ್ತಿ ಯೆಂದು ಘಂಟಾಘೋಷವಾಗಿ ಸಾರಿದವಳು ಈಕೆ. ಇವರನ್ನು ಶ್ರೀರಾಮ ಕೃಷ್ಣರು ತಾಯಿ ಎಂದು ಸಂಬೋಧನೆ ಮಾಡುತ್ತಿದ್ದರು. ಶ್ರೀ ಶಾರದಾ ದೇವಿಯವರು ಆಗ ಇವರ ಮನೆಗೆ ಬಂದು ಒಂದೂವರೆ ತಿಂಗಳನ್ನು ಕಳೆ ದರು. ಭೈರವಿ ಬ್ರಾಹ್ಮಣಿ ಪೂರ್ವ ಬಂಗಾಳದಿಂದ ಬಂದವಳು. ಮೆಣಸಿನ ಕಾಯಿ ಎಂದರೆ ಬಹಳ ಆಸೆ. ಕೆಲವುವೇಳೆ ತುಂಬಾ ಖಾರ ಹಾಕಿ ಪಲ್ಯ ಮಾಡಿದಾಗ ಅಕ್ಕರೆಯಿಂದ ಅವರು ಶಾರದಾದೇವಿಯರನ್ನು ಕರೆದು ಅವರಿಗೂ ಸ್ವಲ್ಪ ರುಚಿ ನೋಡುವುದಕ್ಕೆ ಕೊಡುತ್ತಿದ್ದರು. ತಿನ್ನುವಾಗ ಖಾರದಿಂದ ಕಣ್ಣಿನಲ್ಲಿ ನೀರು ಸೋರುತ್ತಿದ್ದರೂ, ಹೇಗಿದೆ ಎಂದು ಪ್ರಶ್ನೆ ಮಾಡಿದಾಗ, ಬಹಳ ಚೆನ್ನಾಗಿದೆ ಎಂದು ಹೇಳುತ್ತಿದ್ದರು. ಶಾರದಾ ದೇವಿಯವರು ಎಂದಿಗೂ ಮತ್ತೊಬ್ಬರನ್ನು ನೋಯಿಸಿದವರಲ್ಲ. ಶ್ರೀರಾಮ ಕೃಷ್ಣರು ಭೈರವಿಯನ್ನು ತಾಯಿಯೆಂದು ಕೂಗುತ್ತಿದ್ದಾಗ, ಇವರೂ ಅವರನ್ನು ಅತ್ತೆಯಂತೆ ಗೌರವದಿಂದ ಕಂಡರು. ಶ್ರೀರಾಮಕೃಷ್ಣರು ಶಾರದಾದೇವಿಯವರಿಗೆ, ದೇವರನ್ನು ಹೇಗೆ ಪ್ರೀತಿಸಬೇಕು; ಅವನನ್ನು ಹೇಗೆ ಧ್ಯಾನಮಾಡಬೇಕು ಎಂಬುದನ್ನು ಬೋಧಿಸುತ್ತಿದ್ದರು. "ಎಲ್ಲ ಮಕ್ಕಳೂ ಚಂದ್ರನನ್ನು ಮಾವ ಎಂದು ಕರೆಯುವ ಹಾಗೆ ದೇವರು ಎಲ್ಲ ರಿಗೂ ಹತ್ತಿರದ ನಂಟ. ಅವನನ್ನು ನಾವು ಆದರದಿಂದ ಬೇಡಿದರೆ ಇಲ್ಲವೆನ್ನುವುದಿಲ್ಲ." ಶ್ರೀ ಶಾರದಾದೇವಿಯವರಿಗೆ ಕಾಮರಹಿತವಾದ

ಪತಿಯ ಪ್ರೀತಿ ಪರಿಚಯವಾಯಿತು. ಪತಿಯ ಪ್ರೀತಿಯಲ್ಲಿ ಸ್ವಲ್ಪವಾದರೂ ಸ್ವಾರ್ಥತೆಯ ಛಾಯೆ ಇರಲಿಲ್ಲ. ನೋಡಲು ಸಾಧಾರಣ ಮನುಷ್ಯರಂತೆ ಇದ್ದರೂ, ಯಾವುದೋ ಅಲೌಕಿಕ ತೇಜಸ್ಸು ಅವರಲ್ಲಿ ಹೊಳೆಯುತ್ತಿತ್ತು. ನುಡಿದ ಪ್ರತಿಯೊಂದು ಮಾತಿನಲ್ಲಿಯೂ, ಮಾಡುವ ಪ್ರತಿಯೊಂದು ಕೆಲಸ ದಲ್ಲಿಯೂ, ದೇವತ್ವದ ಚಿಹ್ನೆಗಳು ಕಾಣುತ್ತಿದ್ದವು. "ಅವರ ಸಮೀಪ ದಲ್ಲಿರುವ ತನಕ ಮನಸ್ಸು ಯಾವುದೋ ಇಂದ್ರಿಯಾತೀತವಾದ ಆನಂದದಲ್ಲಿ ತಲ್ಲೀನವಾಗಿರುತ್ತಿತ್ತು" ಎಂದು ಅನಂತರ ಅವರೇ ಹೇಳುತ್ತಿದ್ದರು.

ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹೋದಮೇಲೆ ದೈವೋನ್ಮಾದ ತೀವ್ರವಾಯಿತು. ಆಧ್ಯಾತ್ಮಿಕಜೀವನದಲ್ಲಿ ಅನೇಕ ಸಾಧನೆಗಳನ್ನು ಮಾಡತೊಡಗಿದರು. ಒಂದು ದಿವ್ಯಭಾವವಾದಮೇಲೆ ಮತ್ತೊಂದು ದಿವ್ಯ ಭಾವ, ಒಂದು ಮತದ ಸಾಧನೆಯಾದಮೇಲೆ ಇನ್ನೊಂದು ಮತದ ಸಾಧನೆ, ಒಂದು ತತ್ತ್ವದೃಷ್ಟಿಯ ಮೂಲಕ ಸತ್ಯವನ್ನು ಸಂದರ್ಶಿಸಿದಮೇಲೆ ಮತ್ತೊಂದು ತತ್ತ್ವದೃಷ್ಟಿಯಿಂದ ನೋಡಬಯಸುತ್ತಿದ್ದರು. ದೇವರನ್ನು ಎಷ್ಟು ವಿಧದಲ್ಲಿ ನೋಡಿದರೂ ತೃಪ್ತಿ ಇರಲಿಲ್ಲ. ಪ್ರಚಂಡ ಸಾಧನೆಯ ಸುಳಿಗಾಳಿಯಲ್ಲಿ ಇವರ ಜೀವನ, ಸುಂಟರುಗಾಳಿಯ ಮಧ್ಯದಲ್ಲಿ ಸಿಕ್ಕಿದ ತರಗೆಲೆಯಂತೆ ತಿರುಗುತ್ತಿತ್ತು. ದೇಹದಮೇಲೆ ಪ್ರಜ್ಞೆಯೇ ಇರಲಿಲ್ಲ. ಆಹಾರ ನಿದ್ರೆಗಳ ಅರಿವೇ ಇರಲಿಲ್ಲ. ಇವರು ಧ್ಯಾನಕ್ಕೆ ಕುಳಿತರೆಂದರೆ ಸಂಪೂರ್ಣ ಬಾಹ್ಯಪ್ರಜ್ಞಾಶೂನ್ಯರಾಗಿ ಒಂದು ಶಿಲೆಯ ಪ್ರತಿಮೆಯಂತೆ ಆಗುತ್ತಿದ್ದರು. ಇವರ ತಲೆಯಮೇಲೆ ಹಕ್ಕಿಗಳು ಗೂಡು ಕಟ್ಟುತ್ತಿದ್ದು ವಂತೆ! ಇಂತಹ ಸ್ಥಿತಿಯಲ್ಲಿದ್ದವರಿಗೆ ತಾವು ಮದುವೆಯಾದ ಶಾರದಾ ದೇವಿಯವರ ಜ್ಞಾಪಕವಾದರೂ ಹೇಗೆ ಬರುವುದು?

ಇವರ ವಿಷಯದಲ್ಲಿ ಅಲ್ಲಿ ಜನರಿಗೆ ಮತ್ತೊಮ್ಮೆ ಸಂದೇಹ ತೋರಿತು. ಹುಚ್ಚು ಪೂಜಾರಿ ಎಂದು ಎಲ್ಲರೂ ನಿರ್ಧರಿಸಿದರು. ಆ ಸುದ್ದಿ ಅಲ್ಲಿ ಇಲ್ಲಿ ಹಾರಿ ಜಯರಾಮವಟಿಗೂ ಬಂದಿತು. ಅಲ್ಲಿಯ ಜನರ ಕಿವಿಗೂ ಬಿತ್ತು. ಶಾರದಾದೇವಿಯವರು ಬಟ್ಟೆಯನ್ನು ಒಗೆಯಲು ನದಿಗೆ ಹೋದಾಗ, ನೀರು ತರಲು ಭಾವಿಗೆ ಹೋದಾಗ, ಮನೆಯಲ್ಲಿ ಒಂದೆರಡು ಜನ ಸೇರಿ ದಾಗ, ಅವರಿಗೆ ಉಳಿದ ಹೆಂಗಸರೆಲ್ಲಾ ಇವರ ವಿಚಾರವಾಗಿ ಮಾತನಾಡು ವುದು ಕೇಳಿಸಿತು. ಇವರ ಕಷ್ಟಕ್ಕೆ ಎಲ್ಲರೂ ಪಶ್ಚಾತ್ತಾಪಪಡುವವರೇ ಆಗಿದ್ದರು. "ಅಯ್ಯೋ ಪಾಪ! ಶಾರದಾದೇವಿಯಂತಹ ಸುಂದರ ಹೆಣ್ಣನ್ನು ಅಂತಹ ಹುಚ್ಚು ಪೂಜಾರಿಗೆ ಕಟ್ಟಿದಿರಲ್ಲ," ಎಂದು ಎಲ್ಲರೂ

ಎದೆ ಕರಗುವವರೇ ಆದರು. ಇದನ್ನೇನೋ ಅವರು ಸಹಾನುಭೂತಿಯಿಂದ ಹೇಳುತ್ತಿದ್ದರು. ಆದರೂ ಶಾರದಾದೇವಿಯವರಿಗೆ ಇದರಿಂದ ದುಃಖ ಶಮನ ವಾಗಲಿಲ್ಲ. ನಿಜವಾಗಿಯೂ ಅವರು ಹುಚ್ಚರಾಗಿರುವರೇ? ಎರಡು ವರುಷ ಗಳ ಹಿಂದೆ ಬಂದಾಗ ಹೀಗಿರಲಿಲ್ಲವಲ್ಲ? ನನ್ನನ್ನು ಅಷ್ಟು ಪ್ರೀತಿಯಿಂದ ಕಾಣುತ್ತಿದ್ದರಲ್ಲ? ಅವರೇನು ನನ್ನನ್ನು ಈಗ ಮರೆತಿರುವರೇ? ಎಂದು ಸಂದೇಹಪಡುವರು. ಆದರೆ ಮರುಕ್ಷಣವೇ ಅವರು ನನ್ನನ್ನು ಹೀಗೆ ಮರೆಯು ವವರಲ್ಲ. ಶೀಘ್ರದಲ್ಲಿಯೇ ಬಂದು ನನ್ನನ್ನು ಕರೆದುಕೊಂಡುಹೋಗುವರು, ಎಂದು ತಾವೇ ಸಮಾಧಾನ ಹೇಳಿಕೊಳ್ಳುವರು. ಕೆಲವು ವೇಳೆ ಒಂಟಿಯಾಗಿ ಹೋಗಿ ಅಮೋದರಾ ನದಿಯ ದಡದಮೇಲೆ ಕುಳಿತುಕೊಳ್ಳುವರು. ಹಿಂದೆ ಶ್ರೀರಾಮಕೃಷ್ಣರೊಂದಿಗೆ ಇದ್ದಾಗ ಅವರು ಹೇಳುತ್ತಿದ್ದ ಬುದ್ಧಿವಾದ, ಅವರು ಆಚರಿಸುತ್ತಿದ್ದ ರೀತಿ ಎಲ್ಲವನ್ನೂ ನೆನೆಯುವರು ಅನಂತರ ಹೊರಡುವ ಸಮಯದಲ್ಲಿ ನಿಟ್ಟುಸಿರು ಬಿಡುತ್ತಾ ಅಲ್ಲಿಂದ ಮರಳುವರು. ಮನೆಗೆ ಹಿಂತಿರುಗುವಾಗ ದಾರಿಯಲ್ಲಿದ್ದ ಸಿಂಹವಾಹಿನಿ ದೇವಾಲಯಕ್ಕೆ ಹೋಗಿ "ಪತಿಗೆ ಆರೋಗ್ಯ ಕೊಡು, ಅವರ ಬುದ್ಧಿಯನ್ನು ಸ್ಥಿಮಿತಕ್ಕೆ ತೆಗೆದುಕೊಂಡು ಬಾ" ಎಂದು ದೇವಿಗೆ ಪ್ರಾರ್ಥಿಸಿ ಬರುತ್ತಿದ್ದರು. ಇದರಿಂದಲೇ ಅವರಿಗೆ ಸಮಾಧಾನವಾಗಲಿಲ್ಲ. ಪತಿ ಹಾಗೆ ಕಷ್ಟದಲ್ಲಿ ನರಳುತ್ತಿರುವುದು ನಿಜವಾದರೆ ಅವರ ಪಕ್ಕದಲ್ಲಿದ್ದು ಅವರ ಕಷ್ಟದಲ್ಲಿ ಭಾಗಿನಿಯಾಗುವುದು ತಮ್ಮ ಕರ್ತವ್ಯವೆಂದು ಭಾವಿಸಿ ಅಲ್ಲಿಗೆ ಹೋಗಲು ಸಮಯ ಕಾಯುತ್ತಿದ್ದರು.

೧೮೭೨ ನೇ ಇಸವಿ ಮಾರ್ಚಿ ತಿಂಗಳಲ್ಲಿ ಆ ಸುತ್ತಮುತ್ತಲಿನ ಹಳ್ಳಿ ಗಳಿಂದ ಶಾರದಾದೇವಿಯವರ ಕೆಲವು ನಂಟರು, ಚೈತನ್ಯದೇವನ ಜನ್ಮ ದಿನೋತ್ಸವಕ್ಕೆಂದು ಗಂಗಾನದಿಯ ಸ್ನಾನಕ್ಕೆ ಹೊರಡುವುದರಲ್ಲಿದ್ದರು. ಇವರೊಂದಿಗೆ ಹೋದರೆ ಅಲ್ಲಿಯೇ ಇರುವ ಶ್ರೀರಾಮಕೃಷ್ಣರ ಹತ್ತಿರ- ಹೋಗಬಹುದೆಂದು ಇವರು ಬಯಸಿದರು. ತಂದೆಗೆ ತಮ್ಮ ಅಭಿಲಾಷೆ ಯನ್ನು ತಿಳಿಸಿದಮೇಲೆ ಅವರೂ ಇದಕ್ಕೆ ಸಮ್ಮತಿಸಿ ಇವರೊಂದಿಗೆ ಬರು ವುದಕ್ಕೆ ಒಪ್ಪಿಕೊಂಡರು. ಆಗಿನ ಕಾಲದಲ್ಲಿ ಆ ಊರಿನಿಂದ ಕಲ್ಕತ್ತೆಗೆ ಬಸ್ಸು ಅಥವಾ ರೈಲು ಇರಲಿಲ್ಲವೆಂದು ಆಗಲೇ ಹೇಳಿರುವೆವು. ಅಲ್ಲಿಂದ ಗಾಡಿ ಸಂಚಾರಕ್ಕೂ ಸರಿಯಾದ ರಸ್ತೆಯಿರಲಿಲ್ಲ. ಶ್ರೀಮಂತರಾದರೆ ಪಲ್ಲಕ್ಕಿಯಲ್ಲಿ ಹೊರಡಬಹುದಾಗಿತ್ತು. ಆದರೆ ಅವರಿಗೆ ಅಷ್ಟೊಂದು ದುಡ್ಡು ಎಲ್ಲಿಂದ ಬರಬೇಕು. ಎಲ್ಲರೂ ಕಾಲು ನಡಿಗೆಯಲ್ಲೇ ಹೊರಡಲು

ನಿರ್ಧರಿಸಿದರು. ಬೆಳಿಗ್ಗೆ ಶಾರದಾದೇವಿಯವರು ಎದ್ದು ತಮ್ಮ ಒಡನಾಡಿಗಳಿಗೆ ಹೇಳಿ ಅವರಿಂದ ಆಶೀರ್ವಾದವನ್ನು ಪಡೆದು ಬಂದರು. ಎಷ್ಟು ದಿವಸ ಹುಟ್ಟಿದ ಮನೆಯಲ್ಲಿದ್ದರೂ ಹೆಣ್ಣು ಕೈ ಹಿಡಿದವನಿಗೇ ಸೇರಿದವಳೆಂದು ತಾಯಿ ಕಂಬನಿದುಂಬಿ ಆಶೀರ್ವದಿಸಿ ಬೀಳ್ಕೊಟ್ಟಳು. ಶಾರದಾದೇವಿ ಯವರು ತಾಯಿಗೆ ನಮಸ್ಕಾರಮಾಡಿ ಹೊರಟರು. ಮೂಡಲಂಚಿನಲ್ಲಿ ರವಿ ಉದಯಿಸುತ್ತಿದ್ದನು. ಬಣ್ಣ ಬಣ್ಣದ ಮುಗಿಲುಗಳು ರವಿಗೆ ಆರತಿ ಎತ್ತುತ್ತಿವೆ. ಪಕ್ಷಿಗಳು ತಮ್ಮ ಸುಮಧುರಸ್ವರದಿಂದ ಹಾಡುತ್ತಿವೆ. ಕೊನೆಯಸಲ ತಮ್ಮನ್ನು ಸಾಕಿಸಲಹಿದ ಮನೆಯನ್ನು ನೋಡಿದರು. ಅದರ ಹಿಂದೆ ಇದ್ದ ಗದ್ದೆಗೆ ಅನೇಕವೇಳೆ ಇವರು ಹುಡುಗಿಯಾಗಿದ್ದಾಗ ಹೋಗಿ ಬರುತ್ತಿದ್ದರು. ಬಾಲ್ಯಜೀವನದ ಸವಿನೆನಪುಗಳೆಲ್ಲ ಒಂದೊಂದಾಗಿ ಸ್ಮೃತಿ ಪಥಕ್ಕೆ ಬಂದವು. ಅನೇಕವೇಳೆ ಒಂಟಿಯಾಗಿ ಬಂದು ಕುಳಿತು ತಮ್ಮ ದುಃಖವನ್ನು ಕೋಡಿ ಹರಿಸಿದ ಆಮೋದರಾ ನದಿಯನ್ನು ದಾಟಿದರು. ಜತೆಯಲ್ಲಿ ಬರುತ್ತಿದ್ದ ತಮ್ಮಂದಿರು ಅಲ್ಲಿಂದ ಮನೆಗೆ ಹಿಂತಿರುಗಿದರು. ಸಿಂಹವಾಹಿನಿ ದೇವಸ್ಥಾನದ ಗೋಪುರ ಬರುಬರುತ್ತ ಕಣ್ಮರೆಯಾಯಿತು. ಕ್ರಮೇಣ ಹಿಂದಿನಕಾಲದ ನೆನಪುಗಳು ಹಿಮ್ಮೆಟ್ಟಿದುವು. ಮುಂದೆ ಬರಲಿರುವ ಆತಂಕಗಳು ಮೂಡಲು ಮೊದಲಾದವು. ಪತಿ ತಮ್ಮನ್ನು ಜ್ಞಾಪಕದಲ್ಲಿಟ್ಟುಕೊಂಡಿರುವರೋ ಇಲ್ಲವೋ, ತಮ್ಮನ್ನು ಬರಮಾಡಿ ಕೊಳ್ಳುವರೋ ಇಲ್ಲವೋ, ಎಂದು ಶಂಕಿಸಿದರು. ದೇವರ ಹುಚ್ಚು ಹಿಡಿದಿರುವರನೇಕರು ಕೈಹಿಡಿದ ಹೆಂಡತಿಯನ್ನು ಬಿಟ್ಟು ಕಲ್ಲೆದೆ ಮಾಡಿ ಕೊಂಡು ಹೊರಟುಹೋಗಿರುವ ನೆನಪು ಬಂದಿತು. ಅವರಂತೆಯೇ ಇವರೂ ಮಾಡಿಬಿಡುವರೋ ಎಂಬ ಅಂಜಿಕೆ ಬಾಧಿಸುತ್ತಿತ್ತು. ಹೀಗೆ ಶಂಕೆ ಆತಂಕಗಳು ಒಂದಾದಮೇಲೊಂದು ಅವರನ್ನು ಮುತ್ತುತ್ತಿದ್ದವು. ಕೊನೆಗೆ ನಿರ್ಧರಕ್ಕೆ ಬಂದರು. "ಅವರು ಕೈಹಿಡಿದ ಸತಿ ಎಂದು ಪ್ರೀತಿಸಲಿ, ಇಲ್ಲವೇ ಮುಕ್ತಿಗೆ ಅಡ್ಡ ಎಂದು ಧಿಕ್ಕರಿಸಲಿ ನಾನು ಮಾತ್ರ ಅವರಿರುವ ಸ್ಥಳದಿಂದ ಬಿಟ್ಟು ಕದಲುವುದಿಲ್ಲ," ಎಂದು ಶಪಥಮಾಡಿ ಧೈರ್ಯತಂದುಕೊಂಡು ಉಳಿದ ಗುಂಪಿನವರೊಂದಿಗೆ ಮಾತುಕತೆಯಲ್ಲಿ ಬೆರೆಯುತೊಡಗಿದರು.

ದಾರಿಯಲ್ಲಿ ಹೋಗುವಾಗ ಅಷ್ಟು ಬೇಸರವಾಗಲಿಲ್ಲ. ಎರಡು ಪಕ್ಕದಲ್ಲಿಯೂ ಇದ್ದ ಹಸುರು ಮರಗಳು ಮೇಲೆ ಬೀಳುವ ಬಿಸಿಲಿನ ತಾಪ ವನ್ನು ತಗ್ಗಿಸುತ್ತಿದ್ದವು. ದಾರಿಯ ಇಕ್ಕೆಲದಲ್ಲಿಯೂ ಭತ್ತದ ಗದ್ದೆಯ

ಹಸುರು ಪೈರು, ಅದರಲ್ಲಿ ಕೊಕ್ಕರೆಗಳು ಮೀನುಗಳನ್ನು ಹುಡುಕುತ್ತಾ ಹಾರಾಡುತ್ತಿದ್ದವು. ಮಧ್ಯೆ ಮಧ್ಯೆ ಕಮಲಗಳಿಂದ ಕೂಡಿದ ಅನೇಕ ಕೊಳಗಳಿದ್ದವು. ಅದರಲ್ಲಿ ಮೀನು ಹಿಡಿಯಲು ಕಾದು ಕುಳಿತಿರುವರು ಬೆಸ್ತರು. ಅವರ ಹಿಂದೆ ಮನೆಯ ಮಕ್ಕಳು ಆಡುತ್ತಿದ್ದವು. ಇವನ್ನು ನೋಡುತ್ತಾ ಮುಂದುವರಿದರು. ಒಂದು ದೊಡ್ಡ ಸ್ತ್ರೀಯರ ಪರಿವಾರವೇ ಇರುವಾಗ ಅಲ್ಲಿ ಬೇಜಾರೆನ್ನುವುದು ಬರುವುದುತಾನೆ ಹೇಗೆ? ಹೀಗೆ ಸಂತೋಷದಿಂದ ಎರಡು ದಿನ ನಡೆದು ದಾರಿ ಸವೆಸಿದರು. ಆದರೆ ಇದೇ ಸಂತೋಷ ಮೂರನೆ ದಿನವೂ ಇರಲಿಲ್ಲ. ಶಾರದಾದೇವಿಯವರಿಗೆ ನಡೆದು ಅಭ್ಯಾಸವಿರಲಿಲ್ಲ. ನಡೆದು ಸಾಕಾಗಿದ್ದುದರಿಂದ ಆಲಸ್ಯಕ್ಕೆ ಜ್ವರ ಬಂದು ದಾರಿಯ ಪಕ್ಕದಲ್ಲಿದ್ದ ಒಂದು ಮನೆಯಲ್ಲಿ ರಾತ್ರಿ ಕಳೆಯಬೇಕಾಯಿತು. ಆಗ ಅವರಿಗೆ ಒಂದು ಕನಸಾಯಿತು. ಕಪ್ಪಾದರೂ ಅತ್ಯಂತ ಸುಂದರ ವಾದ ಒಬ್ಬ ಸ್ತ್ರೀ ಇವರ ಪಕ್ಕದಲ್ಲಿ ಕುಳಿತು ತಲೆಯನ್ನು ಒತ್ತುತ್ತಿದ್ದರು. ಈಕೆಯ ಶೀತಲ ಕರಸ್ಪರ್ಶದಿಂದ ತಲೆನೋವು ಕಡಿಮೆಯಾಗಿ ಜ್ವರ ಸ್ವಲ ಇಳಿಯುತ್ತ ಬಂದಿತು. ಶಾರದಾದೇವಿಯವರು ಇವರನ್ನು ನೋಡುತ್ತ "ನೀನು ಎಲ್ಲಿಂದ ಬಂದೆ?" ಎಂದು ಪ್ರಶ್ನೆ ಮಾಡಿದರು. "ದಕ್ಷಿಣೇಶ್ವರದಿಂದ" ಎಂದು ಆಕೆ ಉತ್ತರ ಕೊಟ್ಟಳು. "ನಾನು ಅಲ್ಲಿಗೆ ಹೋಗಬೇಕೆಂದು ಹೊರಟೆ. ಅಲ್ಲಿ ನನ್ನವರು ಇರುವರು. ಆದರೆ ದಾರಿಯಲ್ಲಿ ಜ್ವರ ಬಂದುದರಿಂದ ಇಲ್ಲಿ ನಿಲ್ಲಬೇಕಾಯಿತು" ಎಂದು ಹೇಳಿದರು. ಆಕೆ "ಆಲೋಚಿಸಬೇಕಾಗಿಲ್ಲ ಬೆಳಗ್ಗೆಯ ಹೊತ್ತಿಗೆ ವಾಸಿಯಾಗುವುದು" ಎಂದರು. ಶಾರದಾದೇವಿಯವರು "ನೀನು ಯಾರಮ್ಮ? ನನಗೆ ಇಷ್ಟು ಪ್ರೀತಿಯನ್ನು ತೋರುತ್ತೀಯಲ್ಲ" ಎಂದರು. ಈಕೆ "ನಾನು ನಿನ್ನ ಅಕ್ಕ, ರಾಮಕೃಷ್ಣರನ್ನು ನಿನಗೋಸ್ಕರ ದಕ್ಷಿಣೇಶ್ವರದಲ್ಲಿಟ್ಟಿರುವೆನು" ಎಂದು ಹೇಳಿ ದೃಶ್ಯ ಮಾಯವಾಯಿತು ಅನಂತರ ದೀರ್ಘನಿದ್ರೆ ಬಂದಿತು. ಬೆಳಿಗ್ಗೆ ಏಳುವುದರಲ್ಲಿ ಗುಣಮುಖವಾಗಿತ್ತು. ನಡೆದು ದಕ್ಷಿಣೇಶ್ವರಕ್ಕೆ ಹೋಗಬಹುದು ಎಂಬ ಧೈರ್ಯ ಬಂದಿತು. ಅವರಿಗೆ ಆಗ ಮನಸ್ಸಿನಲ್ಲಿ ಒಂದು ಹರ್ಷ. ಶ್ರೀರಾಮಕೃಷ್ಣರು ತಮ್ಮನ್ನು ಸ್ವೀಕರಿಸುವರು ತ್ಯಜಿಸುವುದಿಲ್ಲ ಎಂಬ ಒಂದು ನಂಬಿಕೆಯನ್ನು ಅವರ ಕನಸು ಎದೆಯಲ್ಲಿ ಬಿತ್ತಿತ್ತು. ಈ ಸಂತೋಷವೇ ಅವರ ಸೋತ ಕಾಲಿಗೂ ಶಕ್ತಿಯಿತ್ತು ದಕ್ಷಿಣೇಶ್ವರಕ್ಕೆ ಕರೆದೊಯ್ಯುತ್ತಿತ್ತು.

ರಾತ್ರಿ ಹತ್ತು ಗಂಟೆಯಾಗಿದೆ. ದಕ್ಷಿಣೇಶ್ವರದಲ್ಲಿ ಎಲ್ಲ ನೀರವ.

ಕೆಲಸಮಾಡುತ್ತಿದ್ದ ಪರಿಚಾರಕರೆಲ್ಲ ಮಲಗಿರುವರು. ಹರಿಯುವ ಗಂಗಾ ನದಿಯ ಅಲೆಗಳು ದಡಕ್ಕೆ ಹೊಡೆಯುವ ಶಬ್ದ ಮಾತ್ರ ಮೌನವನ್ನು ಕೆಣಕುತ್ತಿವೆ. ಹತ್ತಿರದಲ್ಲಿರುವ ಶ್ರೀರಾಮಕೃಷ್ಣರ ಕೋಣೆಯಲ್ಲಿ ಒಂದು ದೀಪ ಉರಿಯುತ್ತಿತ್ತು. ಶ್ರೀಶಾರದಾದೇವಿಯವರು ನೆಟ್ಟಗೆ ತಮ್ಮ ಪತಿಯ ಕೋಣೆಗೆ ಹೋದರು. ಶ್ರೀರಾಮಕೃಷ್ಣರು ಇವರನ್ನು ನೋಡಿ ದೊಡನೆಯೇ ಇವರು ತಮ್ಮ ಸತಿ ಎಂದು ಗುರುತಿಸಿ, "ನೀನೋ ಬಂದಿರು ವುದು?" ಎಂದು ಹೇಳಿ ಹತ್ತಿರ ಇರುವವರೊಬ್ಬರನ್ನು ಕರೆದು ಒಂದು ಚಾಪೆಯನ್ನು ಹಾಸುವಂತೆ ಹೇಳಿ, ಅದರ ಮೇಲೆ ಶಾರದಾದೇವಿಯವ ರನ್ನು ಕುಳಿತುಕೊಳ್ಳುವಂತೆ ಹೇಳಿದರು. ಅವರು ಕುಳಿತ ಮೇಲೆ ಶ್ರೀರಾಮಕೃಷ್ಣರು "ಮಥುರನಾಥ ಅಥವಾ ಅವನ ಮಗ ಅಕ್ಷಯ ಇದ್ದಿ ದ್ದರೆ, ಅವರು ನಿನಗೆ ಇಳಿದುಕೊಳ್ಳುವುದಕ್ಕೆ ಒಂದು ಚೆನ್ನಾದ ಮನೆಯನ್ನೆ ಮಾಡಿಕೊಡುತ್ತಿದ್ದರು. ಈಗ ಇರುವುದೊಂದೆ, ದೇವಸ್ಥಾನದ ವಾದ್ಯ ಶಾಲೆಯ ಮೇಲೆ ಇರುವ ಕಿರಿಯ ಕೋಣೆ. ಅಲ್ಲಿಯೇ ನನ್ನ ತಾಯಿ ಮತ್ತು ನೀನು ವಾಸಮಾಡಬೇಕಾಗಿದೆ" ಎಂದು ಹೇಳಿದರು.

ಇಲ್ಲಿ ಮಥುರನಾಥರ ಪರಿಚಯ ಸ್ವಲ್ಪ ಅವಶ್ಯಕ—ಶ್ರೀರಾಮ ಕೃಷ್ಣರು ಇದ್ದ ದಕ್ಷಿಣೇಶ್ವರ ದೇವಾಲಯವನ್ನು ರಾಣಿರಾಸಮಣಿ ಎಂಬೊಬ್ಬ ಮಾನ್ಯ ಮಹಿಳೆ ಕಟ್ಟಿಸಿದ್ದಳು ಎಂದು ಹೇಳಿರುವೆವು. ಆಕೆಯ ಅಳಿಯ ಮಥುರನಾಥನೆಂಬುವರು ದೇವಸ್ಥಾನದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು. ಅವರು ಶ್ರೀರಾಮಕೃಷ್ಣರನ್ನು ಅತ್ಯಂತ ಪ್ರೀತಿ ಯಿಂದ ಕಾಣುತ್ತಿದ್ದರು. ಶ್ರೀರಾಮರಕೃಷ್ಣರ ಬಯಕೆಗಳನ್ನು ಪೂರ್ಣ ಮಾಡುವುದು ಅವರಿಗೆ ಅತ್ಯಂತ ಆನಂದವನ್ನು ಕೊಡುತ್ತಿತ್ತು. ಅವರಿಲ್ಲ ದಿರುವುದಕ್ಕೆ ಆಗ ಶ್ರೀರಾಮಕೃಷ್ಣರು ಪಶ್ಚಾತ್ತಾಪ ಪಟ್ಟರು. ಶ್ರೀಶಾರದಾ ದೇವಿಯವರು ಪತಿಯನ್ನು ನೋಡಿಯಾದಮೇಲೆ ಶ್ರೀರಾಮಕೃಷ್ಣರ ತಾಯಿ ಇದ್ದ ಕೋಣೆಗೆ ಹೋಗುವುದರಲ್ಲಿದ್ದರು. ಆಗ ಶ್ರೀರಾಮಕೃಷ್ಣರು, "ಇಲ್ಲಿಯೇ ಇರು, ನಿನಗೆ ಮೈಸ್ವಸ್ಥವಿಲ್ಲ. ವೈದ್ಯರು ಬಂದು ನೋಡು ತ್ತಾರೆ. ನೀನು ಅಲ್ಲಿಗೆ ಹೋದರೆ ಕಷ್ಟವಾಗುವುದು" ಎಂದು ಹೇಳಿದರು ರಾತ್ರಿ ಊಟವೆಲ್ಲ ಮುಗಿದು ಹೋಗಿತ್ತು. ಸ್ವಲ್ಪ ಅರಳನ್ನು ಶಾರದಾ ದೇವಿಯವರಿಗೆ ಫಲಹಾರಕ್ಕೆ ಕೊಟ್ಟರು. ರಾತ್ರಿ ಇವರೊಂದಿಗೆ ಮಲಗಿ ಕೊಳ್ಳುವುದಕ್ಕೆ ಒಬ್ಬ ಸ್ತ್ರೀಯನ್ನು ಬರಮಾಡಿದರು. ಮಾರನೆಯ ದಿನ ವೈದ್ಯನು ಬಂದು ಪರೀಕ್ಷಿಸಿ ಎರಡು ಮೂರು ದಿನ ಔಷಧೋಪಚಾರ ಆದ

ಮೇಲೆ ಅವರು ಗುಣಮುಖರಾದರು. ಅನಂತರ ಅವರ ಅತ್ತೆ ಇದ್ದ ಕೋಣೆಯಲ್ಲಿ ವಾಸಿಸತೊಡಗಿದರು.

ಶ್ರೀರಾಮಕೃಷ್ಣರನ್ನು ನೋಡಿದಾಗ ಏನೇನು ಅಂಜಿಕೆ ಅನುಮಾನಗಳು ಶಾರದಾದೇವಿಯವರನ್ನು ಕಾಡುತ್ತಿದ್ದವೋ ಅವೆಲ್ಲ ಚೆದುರಿ ಹೋದವು. ಎರಡು ವರ್ಷಗಳ ಹಿಂದೆ ಕಂಡಾಗ ಯಾವ ಪ್ರೇಮವನ್ನು ತೋರಿದ್ದರೋ, ಅದೇ ಪ್ರೇಮ, ಅದೇ ನಿಸ್ವಾರ್ಥತೆ, ಅದೇ ದೈವಭಕ್ತಿ ಈಗಲೂ ಇವರಲ್ಲಿತ್ತು. ಇದನ್ನು ನೋಡಿ ತಮ್ಮ ಜೀವನ ದುರಂತದಲ್ಲಿ ಕೊನೆಗಾಣಬೇಕಾಗಿಲ್ಲ; ಪತಿ ತಮ್ಮ ಕೈಹಿಡಿದು ಜೀವನದ ಗುರಿ ಎಡೆಗೆ ಕರೆದೊಯ್ಯುವರು ಎಂದು ತಿಳಿದು ನಿಶ್ಚಿಂತರಾದರು. ಶಾರದಾದೇವಿಯವರ ತಂದೆಯವರಿಗೂ ಕೂಡ ಇದನ್ನು ನೋಡಿ ಸಂದೇಹ ಪರಿಹಾರವಾಯಿತು. ಗಂಡನೊಂದಿಗೆ ಮಗಳು ಸುಖವಾಗಿ ಬದುಕುವಳು, ಎಂದು ತಿಳಿದು ಕೆಲವು ದಿನಗಳಾದ ಮೇಲೆ ಅಳಿಯನಿಗೂ ಮಗಳಿಗೂ ಆಶೀರ್ವಾದ ಮಾಡಿ, ದಕ್ಷಿಣೇಶ್ವರವನ್ನು ಬಿಟ್ಟರು.



# ೫. ಒರೆಗಲ್ಲು

ಕೇವಲ ಆಧ್ಯಾತ್ಮಿಕ ಜೀವನಕ್ಕೆ ತಮ್ಮ ಬಾಳನ್ನು ಧಾರೆಯೆರೆದ ಮಹಾತ್ಮರು, ಜಗದಲ್ಲಿ ಹಲವರು ಇರುವರು. ಇವರಲ್ಲಿ ಶ್ರೀರಾಮಕೃಷ್ಣ ಪರಮಹಂಸರು ಮತ್ತು ಶ್ರೀಶಾರದಾದೇವಿ ಇವರ ಜೀವನ ಅಸಾಧಾರಣ ಎನ್ನಬಹುದು. ನೈಷ್ಠಿಕ ಬ್ರಹ್ಮಚಾರಿಗಳಾದ ಮಹಾ ವ್ಯಕ್ತಿಗಳೆಷ್ಟೋ ಭರತಖಂಡದಲ್ಲಿ ಮತ್ತು ಬೇರೆಕಡೆ ಬಂದು ಹೋಗಿರುವರು. ಮೊದಲು ಮದುವೆಯಾಗಿ, ನಂತರ ಜಗದ ದುಃಖಕ್ಕೆ ಸಿಕ್ಕಿ ವೈರಾಗ್ಯ ತಾಳಿದವರೂ ಇರುವರು. ಇವರಲ್ಲಿ ಕೆಲವರು ಕೈಹಿಡಿದ ಸತಿಯನ್ನು ತೊರೆದುಹೋಗಿರುವವರೂ ಇರುವರು. ಆದರೆ ಶ್ರೀರಾಮಕೃಷ್ಣರ ಜೀವನದ ದಾರಿಯೆ ಬೇರೆ ಒಂದು ವಿಧವಾಗಿದೆ. ಮೊದಲು ಮದುವೆಯಾದರು. ವೈರಾಗ್ಯದ ಪ್ರಚಂಡ ಸುಳಿಗಾಳಿಗೆ ಅವರ ಜೀವನ ಮೊದಲೇ ಸಿಕ್ಕಿತ್ತು. ಆದರೂ ಕೈಹಿಡಿದ ಸತಿಯನ್ನು ಬಿಡಲಿಲ್ಲ. ಅವರನ್ನು ಮುಕ್ತಿಯ ಸೋಪಾನಕ್ಕೆ ಕರೆದೊಯ್ದರು. ಇಂತಹ ಮಹಾತ್ಮರು ಜಗದಲ್ಲಿ ಎಷ್ಟು ಮಂದಿಗಳಿರುವರು!

ನಾರಿಯೇ ಮಾರಿ. ಮುಕ್ತಿಗೆ ಅವಳೇ ಅಡ್ಡ. ಅವಳನ್ನು ಸೃಷ್ಟಿಸಿದವನು ಯಾರು? ಎಂದು ಹಲವರು ಹಳಿದಿರುವರು. ಆದರೆ ಶ್ರೀ ರಾಮಕೃಷ್ಣಪರಮಹಂಸರು ಎಂದಿಗೂ ನಾರಿಯರನ್ನು ದೂಷಿಸುತ್ತಿರಲಿಲ್ಲ. ಎಲ್ಲಿಯವರೆವಿಗೂ ಗಂಡಸಿನ ಮನಸ್ಸು ಇಂದ್ರಿಯ ಲೋಕದಲ್ಲಿರುವುದೋ ಅಲ್ಲಿಯವರೆವಿಗೂ ಅವನ ಕಣ್ಣಿಗೆ ಹೆಂಗಸು ಕಾಣುವಳು. ಎಲ್ಲಿ ಮಾನವನ ಮನಸ್ಸು ದೇಹಾತೀತವಾಗುವುದೋ ಅಲ್ಲಿ ಹೆಂಗಸಿನಲ್ಲಿಯೂ ದೇವಿಯ ಶಕ್ತಿಯನ್ನು ನೋಡಬಹುದು. ಸಾಧಕನು ಪುರುಷನಾದರೆ ಸ್ತ್ರೀಯಿಂದ ದೂರವಿರಬೇಕು. ಆಕೆ ಸ್ತ್ರೀಯಾದರೆ ಪುರುಷನಿಂದ ದೂರವಿರಬೇಕು. ಅದಕ್ಕೇ ಅಕ್ಕಮಹಾದೇವಿ, "ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನವಾಗಿ ಕಾಡಿತ್ತು ನೋಡಾ! ಸ್ತ್ರೀಯ ಮುಂದೆ ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ!" ಎಂದು ಹೇಳಿರುವಳು. ಪರಸ್ಪರ ಆಕರ್ಷಣೆಯಿಂದ ತಪ್ಪಿಸಿಕೊಳ್ಳಬೇಕಾದರೆ ಒಬ್ಬರು ಇನ್ನೊಬ್ಬರನ್ನು ದೂರಿದರೆ ಪ್ರಯೋಜನವಿಲ್ಲ. ದೇಹದ ಹಿಂದೆ ಇರುವ ದೈವೀಶಕ್ತಿಗೆ ಮಣಿಯಬೇಕು. ಶ್ರೀರಾಮಕೃಷ್ಣರು ಸಾಧಕರಿಗೆ ಸ್ತ್ರೀ ಅಥವಾ ಪುರುಷನನ್ನು ದೂಷಿಸು ಎಂದು ಹೇಳುತ್ತಿರಲಿಲ್ಲ. ಅವರ ಹಿಂದೆ ಇರುವ ದೇವತ್ವಕ್ಕೆ ವಂದಿಸು ಎಂದು ಹೇಳುತ್ತಿದ್ದರು.

ಅದ್ವೈತ ಸಾಧನೆಯಲ್ಲಿ ತಮಗೆ ಉಪದೇಶಮಾಡಿದ ತೋತಾಪುರಿಗೆ ಶ್ರೀರಾಮಕೃಷ್ಣ ಪರಮಹಂಸರು ತಾವು ಮದುವೆಯಾಗಿರುವುದಾಗಿ ಹೇಳಿದರು. ಅದಕ್ಕೆ ತೋತಾಪುರಿ, "ಅದಕ್ಕೇನು, ಬ್ರಹ್ಮಜ್ಞಾನಿಯಾದವನು ಹೆಂಗಸಿನಲ್ಲಿ ಆದರೂ, ಎಲ್ಲಾ ವ್ಯಕ್ತಿಯ ಹಿಂದೆ ಇರುವ ಬ್ರಹ್ಮದರ್ಶನ ಮಾಡಬೇಕು. ಅದನ್ನು ಮುಚ್ಚಿದಂತೆ ತೋರುವ ದೇಹಾಕರ್ಷಣೆಗೆ ಮೋಸಹೋಗಕೂಡದು" ಎಂದು ಹೇಳಿದರು. ಶ್ರೀರಾಮಕೃಷ್ಣರು ಕೂಡ ತಾವು ನಿಜವಾಗಿ ಬ್ರಹ್ಮಜ್ಞಾನವನ್ನು ಪಡೆದಿರುವೆವೋ ಇಲ್ಲವೋ ಎನ್ನುವುದನ್ನು ಪರೀಕ್ಷಿಸುವ ಒರೆಗಲ್ಲು ಶ್ರೀ ಶಾರದಾದೇವಿಯರು ಎಂದು ತಿಳಿದಿದ್ದರು. ಅವರು ಕೇವಲ ಮಾತಿನ ಮಲ್ಲರಾಗಲಿಲ್ಲ. ಪ್ರತಿಯೊಂದನ್ನೂ ತಮ್ಮ ಜೀವನದಲ್ಲಿ ಪ್ರಯೋಗಮಾಡಿ ನೋಡಿದವರು. ಮೊದಲು ದೇವದೇವಿಯರು ಪ್ರತ್ಯಕ್ಷವಾದಾಗ ಅದೇನು ತಮಗೆ ಚಿತ್ತವಿಕಾರದಿಂದ ಆದ ಮನಸ್ಸಿನ ದುರ್ಬಲತೆಯೋ ಅಥವಾ ಇವು ಸಹಜವಾದವುಗಳೋ ಎಂಬುದನ್ನು ಹೇಗೆ ವಿಮರ್ಶಿಸುತ್ತಿದ್ದರೊ, ಅದರಂತೆಯೇ ಜಗನ್ಮಾಯಿ ಸಕಲ ವಸ್ತುಗಳ ಹಿಂದೆಯೇ ಇರುವಳೆಂದು ಭಾವಿಸುವಂತೆ ಕಾಣುವುದು ಸಾಧ್ಯವೇ ಎಂಬುದನ್ನು ಪರೀಕ್ಷಿಸಿದರು. ಸಾಧನೆಯ ಒಂದು ಕಾಲದಲ್ಲಿ ಸ್ತ್ರೀಪುರುಷರು ಒಬ್ಬರಿಂದೊಬ್ಬರು ದೂರವಿರುವುದು ಒಳ್ಳೆಯದಾದರೂ ಸಿದ್ಧರಿಗೆ ಈ ನಿಯಮ ಅನ್ವಯಿಸುವುದಿಲ್ಲ. ಆದಕಾರಣವೇ, ಉಳಿದ ಸನ್ಯಾಸಿಗಳಂತೆ ಅವರು ಹೆಂಡತಿಯಿಂದ ದೂರವಿರದೆ ಶಾರದಾದೇವಿಯವರು ಒಂದೇ ಹಾಸಿಗೆಯ ಮೇಲಿರುವುದಕ್ಕೆ ಕೂಡ ಅಪ್ಪಣೆ ಇತ್ತರು.

ಸಾಧಾರಣ ಇನ್ನೂ ಯೌವನದಲ್ಲಿರುವ ಸಾಧಕರಿಗೆ ಅದು ಅಸಾಧ್ಯ ಕಾರ್ಯ. ಆದರೆ ಶ್ರೀರಾಮಕೃಷ್ಣರು ಇಂತಹ ಶ್ರೇಣಿಗೆ ಸೇರಿದವರಲ್ಲ. ಆಧ್ಯಾತ್ಮಿಕ ಜೀವನದ ಶಿಖರಕ್ಕೆ ಮುಟ್ಟಿದ್ದವರು. ಅವರ ಮನಸ್ಸು ಯಾವಾಗಲೂ ನಿತ್ಯ ಅನಿತ್ಯವಸ್ತುಗಳನ್ನು ವಿಮರ್ಶೆಮಾಡುತ್ತಿತ್ತು. ಒಮ್ಮೆಯಾದರೂ ಅವರು ಇಂದ್ರಿಯಚಾಪಲ್ಯಕ್ಕೆ ಮರುಳಾಗಲಿಲ್ಲ. ಶ್ರೀ ಶಾರದಾದೇವಿಯವರು ತಮ್ಮ ಹಾಸಿಗೆಯಮೇಲೆ ಮಲಗಿದ್ದಾಗ ತಮ್ಮ ಮನಸ್ಸನ್ನು ಕುರಿತು, "ಎಲೆ ಮನಸ್ಸೆ, ಇದು ಸ್ತ್ರೀಯೆಂಬ ವಸ್ತು. ಇದರ ಸುಖಕ್ಕೆ ಮಾನವ ಮರುಳಾಗಿ ಬೀಳುವನು. ಯಾರು ಈ ಸೌಖ್ಯದ ಬಲೆಗೆ ಒಮ್ಮೆ ಬೀಳುತ್ತಾರೆಯೋ ಅವರು ದೇಹಾಭಿಮಾನದಲ್ಲಿ ಬಂದಿಯಾಗುವರು. ಅವರು ಪರಮಾತ್ಮನನ್ನು ಹೊಂದಲಾರರು. ಸತ್ಯವಾಗಿ ಹೇಳು. ಒಳಗೆ ಒಂದು ಹೊರಗೆ ಒಂದು ಇಟ್ಟುಕೊಳ್ಳಬೇಡ. ನಿನಗೆ ಸ್ತ್ರೀಸಂಗ

ಸುಖ ಬೇಕಾದರೆ ಇಲ್ಲಿದೆ, ಇದನ್ನು ಹೊಂದಲು ಯಾವ ಆತಂಕವೂ ಇಲ್ಲ" ಎಂದು ಹೇಳಿದರು. ಆದರೆ ತಕ್ಷಣವೇ ಅವರ ಶುದ್ಧ ಮನಸ್ಸು ಸಮಾಧಿಗೆ ಹೋಯಿತು. ರಾತ್ರಿಯೆಲ್ಲ ಸಮಾಧಿಯಲ್ಲಿ ಕಳೆದರು. ಬೆಳಿಗ್ಗೆ ಅನೇಕ ವೇಳೆ ದೇವರ ಹೆಸರನ್ನು ಹೇಳಿ ಮನಸ್ಸನ್ನು ಕೆಳಗೆ ಇಳಿಸಬೇಕಾಯಿತು. ಶ್ರೀರಾಮಕೃಷ್ಣರು ಅನೇಕವೇಳೆ ಭಾವದಲ್ಲಿ ತಲ್ಲೀನರಾಗುತ್ತಿದ್ದರು. ಆಗ ಶ್ರೀ ಶಾರಾರದಾದೇವಿಯವರಿಗೆ ದಿಗಿಲಾಗಿ ಹೊರಗಿನಿಂದ ಯಾರನ್ನಾದರೂ ಕರೆದು ಅವರನ್ನು ಎಬ್ಬಿಸುತ್ತಿದ್ದರು. ಕಡೆಗೆ ಇವರು ಪಡುತ್ತಿದ್ದ ಕಷ್ಟವನ್ನು ತಿಳಿದು, ಇವರನ್ನು ತಮ್ಮ ತಾಯಿಯೊಂದಿಗೆ ಮಲಗಲು ಹೇಳಿ ಕಳುಹಿಸಿದರು. ಒಮ್ಮೆ ಶ್ರೀ ಶಾರದಾದೇವಿಯವರು ಶ್ರೀರಾಮಕೃಷ್ಣರ ಕಾಲನ್ನು ಒತ್ತುತ್ತಿದ್ದರು. ಆಗ ಶಾರದಾದೇವಿಯವರು, "ನನ್ನನ್ನು ಯಾವ ರೀತಿಯಲ್ಲಿ ನೋಡುತ್ತೀರಿ?" ಎಂದು ಕೇಳಿದರು. ಅದಕ್ಕೆ ಶ್ರೀರಾಮಕೃಷ್ಣರು "ಯಾರು ದೇವಿಯ ಗುಡಿಯಲ್ಲಿರುವಳೊ, ಯಾರು ಈ ದೇಹಕ್ಕೆ ಜನ್ಮಕೊಟ್ಟಿರುವಳೊ, ಅವಳೆ ಈಗ ನನ್ನ ಕಾಲನ್ನು ಒತ್ತುತ್ತಿರುವಳು" ಎಂದರು. ಇಂದ್ರಿಯಪಾಶದಲ್ಲಿ ಸಿಕ್ಕಿ ನರಳುತ್ತಿರುವ ಸಾಧಾರಣ ಮನುಷ್ಯನಿಗೆ ಇದು ಅರ್ಥ ಕೂಡ ಆಗದ ಮಾತಾಗಿರಬೇಕು. ಆದರೆ ಜಗನ್ಮಾಯಿಯನ್ನು ಸ್ತ್ರೀಯರಲ್ಲಿ, ಪುರುಷರಲ್ಲಿ, ವೃದ್ಧರಲ್ಲಿ, ಯುವಕರಲ್ಲಿ, ಪಾಪಿಗಳಲ್ಲಿ, ಪುಣ್ಯವಂತರಲ್ಲಿ ಸದಾ ನೋಡುತ್ತಿದ್ದ ಶ್ರೀರಾಮಕೃಷ್ಣರಿಗೆ ಇದು ಸಾಧಾರಣ ವಿಷಯ.

ಶ್ರೀರಾಮಕೃಷ್ಣರು ಶಾರದಾದೇವಿಯವರಿಗೆ ಪ್ರಾಪಂಚಿಕ ಸೌಖ್ಯವನ್ನು ಕೊಡಲಿಲ್ಲ. ಬಲವಂತದಿಂದ ಆಕೆಯನ್ನು ಬ್ರಹ್ಮಚಾರಿಣಿಯಾಗುವಂತೆ ಮಾಡಿದರು ಎಂದು ಕೆಲವರು ದೂಷಿಸುವರು. ಅವರಲ್ಲಿ ಶ್ರೀ ಶಾರದಾದೇವಿಯವರ ತಾಯಿಯೂ ಒಬ್ಬರು ಒಂದು ದಿನ ಆಕೆ ಪಶ್ಚಾತ್ತಾಪಪಡುತ್ತಾ, "ಅಯ್ಯೋ, ನನ್ನ ಶಾರದೆಯನ್ನು ಒಬ್ಬ ಗೊಡ್ಡು ಬ್ರಾಹ್ಮಣನಿಗೆ ಕೊಟ್ಟು ಮದುವೆ ಮಾಡಿದ್ದಾಯಿತು. ಅವನು ಅವಳಿಗೆ ಸ್ವಲ್ಪವೂ ಪ್ರಾಪಂಚಿಕ ಸುಖದ ಸವಿಯನ್ನು ಕೊಡಲಿಲ್ಲ; ಅವಳಿಗೆ ಮಕ್ಕಳೇ ಆಗಲಿಲ್ಲ, ಅವಳ ಅದೃಷ್ಟದಲ್ಲಿ ಮಕ್ಕಳಿಂದ 'ಅಮ್ಮ' ಎನ್ನಿಸಿಕೊಳ್ಳುವ ಯೋಗ ಬರೆದಿಲ್ಲ" ಎಂದರು. ಇದು ಶ್ರೀರಾಮಕೃಷ್ಣರಿಗೆ ಗೊತ್ತಾಗಿ ಅವರನ್ನು ಕುರಿತು, "ನೀವು ಆಕೆಯ ವಿಷಯವಾಗಿ ದುಃಖಿಸಬೇಡಿ, ಮುಂದೆ ಜಗದ ನಾನಾಕಡೆಗಳಿಂದ ಅತಿಶ್ರೇಷ್ಠ ಮಕ್ಕಳು ಬಂದು ಹಗಲು ರಾತ್ರಿ, 'ತಾಯಿ, ತಾಯಿ' ಎಂದು ಕರೆದು ಅವಳಿಗೆ ಉಪಚಾರಮಾಡುತ್ತಾರೆ" ಎಂದರು ಅವರ ಮುಂದಿನ ಜೀವನದಲ್ಲಿ ಇದು ಅಕ್ಷರಶಃ ನಿಜವಾಯಿತು.

ಅನೇಕ ಪಾಶ್ಚಾತ್ಯ ಮಹಿಳೆಯರೂ, ಹಿಂದೂ ಮಹಿಳೆಯರೂ, ಶ್ರೀರಾಮ ಕೃಷ್ಣ ಸಂಘಕ್ಕೆ ಸೇರಿದ ಭಕ್ತರೂ ಆಕೆಯನ್ನು ಮಹಾಮಾತೆ ಎಂದು ಕರೆಯುತ್ತಿದ್ದರು. ಅದೇ ರೀತಿ ಅವರೊಂದಿಗೆ ಆಚರಿಸುತ್ತಿದ್ದರು. ಯಾರ ಮನಸ್ಸು ಪರಮಾತ್ಮನಲ್ಲಿ ಐಕ್ಯವಾಗಿರುವುದೋ, ಅವರಿಗೆ ಎಲ್ಲರೂ ತಮ್ಮ ಮಕ್ಕಳೇ. ಶ್ರೀ ಶಾರದಾದೇವಿಯವರ ಆಶೀರ್ವಾದವನ್ನು ಹೊಂದಲು ಬಂದವರೆಲ್ಲ ಹಿಂದೂಗಳಾಗಿರಲಿಲ್ಲ. ಅನ್ಯಮತೀಯರೂ ಇದ್ದರು. ಉತ್ತಮ ಶೀಲದವರಾಗಲಿ ಪತಿತರಾಗಲಿ ಎಲ್ಲರನ್ನೂ ತಮ್ಮ ಮಕ್ಕಳೆಂದು ತಿಳಿದು, ಅವರ ಆಧ್ಯಾತ್ಮಿಕ ಕಲ್ಯಾಣಕ್ಕಾಗಿ ಹಗಲು ರಾತ್ರಿ ದುಡಿಯುತ್ತಿದ್ದರು.

ಶ್ರೀರಾಮಕೃಷ್ಣರು ಶ್ರೀ ಶಾರದಾದೇವಿಯವರನ್ನು "ನೀನು ಆಜನ್ಮ ಬ್ರಹ್ಮಚರ್ಯವ್ರತವನ್ನು ಧಾರಣೆಮಾಡು" ಎಂದು ಬಲಾತ್ಕರಿಸಲಿಲ್ಲ. ಅವರು ಬಂದಾಗ ಅವರೆದುರಿಗೆ "ನಿನಗೆ ವಿಷಯ ಸುಖದಲ್ಲಿ ಆಸೆ ಇದ್ದರೆ ನನ್ನನ್ನು ಇಳಿಸುವ ಅಧಿಕಾರ ನಿನಗೆ ಇದೆ" ಎಂದರು. ತಮ್ಮ ಅನೇಕ ವರ್ಷಗಳ ಕಠಿಣ ತಪಸ್ಸನ್ನು, ಆಜನ್ಮಬ್ರಹ್ಮಚರ್ಯವ್ರತವನ್ನು ಕೂಡ ಆಕೆ ಇಚ್ಛೆ ಪಟ್ಟಿದ್ದರೆ ತ್ಯಜಿಸಲು ಸಿದ್ಧರಾಗಿದ್ದರು. ಆದರೆ ಇವರಿಗೆ ತಕ್ಕ ತಪಸ್ವಿನಿ ಅವರು. "ನಾನು ನಿಮ್ಮ ಸತಿ, ನಿಮ್ಮ ಧರ್ಮ ಜೀವನಕ್ಕೆ ಅಡ್ಡಿ ಬರುವುದು ತರವಲ್ಲ. ನಿಮ್ಮ ಗುರಿಯೆ ನನ್ನ ಗುರಿ, ನಿಮ್ಮನ್ನು ಮಾಯೆಗೆ ಎಳೆಯಲು ಬಯಸುವುದಿಲ್ಲ. ನನಗೂ ನಿಮ್ಮ ಪಾದದೆಡೆಯಲ್ಲಿ ಸ್ಥಳಕೊಟ್ಟು ನಾನೂ ಮಾಯೆಯಿಂದ ದಾಟುವಂತೆ ವರವನ್ನು ಕರುಣಿಸಿ" ಎಂದರು. ಶ್ರೀರಾಮಕೃಷ್ಣರ ಜೀವನ ಅಷ್ಟು ಪವಿತ್ರತಮವಾಗಿರುವುದಕ್ಕೆ ಶ್ರೀಶಾರದಾದೇವಿಯವರು ಎಷ್ಟು ಕಾರಣ ಎಂಬುದನ್ನು ಜಗತ್ತು ಅರಿಯದು. ಶ್ರೀರಾಮಕೃಷ್ಣರ ತಪಸ್ಸಿನಿಂದ ಆಕೆ ಪೂಜ್ಯಳಾದಳು—ಎಂದು ಹೇಳಿ ಹಲವರು ಆಕೆಗೆ ಯಾವ ಪ್ರಾಶಸ್ತ್ಯವನ್ನೂ ಕೊಡದೇ ಇರಬಹುದು. ಆದರೆ ಅವರು ಶ್ರೀರಾಮಕೃಷ್ಣರ ಈ ನುಡಿಯನ್ನೇ ಆಲಿಸಲಿ: "ಅವಳು ಅಷ್ಟು ಪರಿಶುದ್ಧಾತ್ಮಳಲ್ಲದಿದ್ದರೆ ತನ್ನ ಬೆಡಗು, ವೈಯಾರವನ್ನು ಬೀರಿ ನನ್ನನ್ನು ಇಂದ್ರಿಯ ಸುಖದ ಕಡೆಗೆ ಎಳೆದಿದ್ದರೆ, ನಾನು ನಿಗ್ರಹಿಸುತ್ತಿದ್ದೆನೋ ಇಲ್ಲವೋ ಯಾರಿಗೆ ಗೊತ್ತು?"

ಶ್ರೀರಾಮಕೃಷ್ಣರ ದಿವ್ಯ ದೃಷ್ಟಿಗೆ ಶಾರದಾದೇವಿಯವರು ಮುಂದೆ ಯಾವ ಪಾತ್ರವನ್ನು ವಹಿಸಬೇಕೆಂಬುದು ಗೊತ್ತಿತ್ತು. ಅದಕ್ಕೆ ಅವರನ್ನು ಸಿದ್ಧರನ್ನಾಗಿ ಮಾಡುತ್ತಿದ್ದರು. ಗೃಹಕೃತ್ಯದ ವಿಷಯದಿಂದ ಹಿಡಿದು

ಜಪ ತಪ ಸಾಧನೆಯ ವಿಷಯಗಳವರೆವಿಗೂ ಅವರಿಗೆ ಎಲ್ಲವನ್ನೂ ಕಲಿಸಿದರು. ತಮ್ಮನಂತರ ಬರುವ ಶಿಷ್ಯರ ಉದ್ಧಾರಕ್ಕೆ ಶಾರದಾದೇವಿಯವರು ನಿಲ್ಲಬೇಕಾಯಿತು. ಶ್ರೀರಾಮಕೃಷ್ಣರ ತಪಶ್ಶಕ್ತಿ ಒಂದು ದೊಡ್ಡ ಸರೋವರದಂತೆ. ಅದರಿಂದ ನೀರನ್ನು ಹಾಯಿಸುವ ಅನೇಕ ಕಾಲುವೆಗಳೇ ಅವರ ಶಿಷ್ಯರು. ಇವರಲ್ಲಿ ಪ್ರಥಮ ಶಿಷ್ಯರಾದವರು ಇವರ ಸಹಧರ್ಮಿಣಿ ಶ್ರೀಶಾರದಾದೇವಿ. ಶ್ರೀರಾಮಕೃಷ್ಣರ ದಿವ್ಯಶಕ್ತಿ, ಉಪದೇಶ, ಇವರ ಮೂಲಕ ಅನೇಕ ಜನಗಳಿಗೆ ಮುಟ್ಟಿತು. ದುಃಖಿಗಳಿಗೆ ಸಂತೋಷವನ್ನು ಕೊಟ್ಟಿತು. ನಿರಾಶರಾದವರ ಎದೆಯಲ್ಲಿ ಆಶೆಯ ಹಣತೆಯನ್ನು ಹಚ್ಚಿತು. ಪಾಪಿ, ಪತಿತೆ, ಭ್ರಷ್ಟೆ–ಎಂದು ಯಾರಮೇಲೆ ಸಮಾಜ ತನ್ನ ಕ್ರೂರನಿಂದೆಯ ವಿಷಬಾಣವನ್ನು ಬಿಡುವುದೋ ಅವರೆಲ್ಲರ ಮೇಲೆ ಕರುಣೆ ತಾಳಿ, ಎತ್ತಿ, ಮುತ್ತಿದ ಪಾಪ ಕೆಸರನ್ನು ತೊಳೆದು ಅವರನ್ನೂ ದೇವರ ಪೂಜೆಗೆ ಯೋಗ್ಯವಾದ ಪುಷ್ಪವನ್ನಾಗಿ ಮಾಡಿದರು.



## ೬. ಷೋಡಶೀ ಪೂಜೆ

ಪರಾಶಕ್ತಿಯನ್ನು ಜಗನ್ಮಾತೆಯೆಂದು ಪೂಜಿಸುವುದು ವಂಗದೇಶದಲ್ಲಿ ರೂಢಿ. ಆಕೆಯನ್ನು ಹಲವಾರು ರೂಪಿನಲ್ಲಿ ನೋಡುತ್ತಾರೆ. ಹಲವಾರು ಹೆಸರಿನಿಂದ ಕರೆಯುತ್ತಾರೆ. ಛಿನ್ನಮಸ್ತ, ದುರ್ಗೆ–ಮುಂತಾದ ಹಲವಾರು ಹೆಸರಿನಿಂದ ವರುಷದಲ್ಲಿ ಬರುವ ಹಬ್ಬ ಹರಿದಿನಗಳಲ್ಲಿ ಆಕೆಯನ್ನು ಆರಾಧಿಸುತ್ತಾರೆ. ಒಂದು ಹೆಸರಿನಲ್ಲಿ ಆಕೆ ಸೃಷ್ಟಿಕರ್ತಳು, ಮತ್ತೊಂದು ಹೆಸರಿನಲ್ಲಿ ಸೃಷ್ಟಿಪಾಲಕಳು, ಇನ್ನೊಂದು ಹೆಸರಿನಲ್ಲಿ ಸೃಷ್ಟಿ ಸಂಹಾರಕಳು. ಗೂಢವಾದ ಸನಾತನ ತತ್ತ್ವ ದೇವಿಯ ನಾನಾ ರೂಪದ ಹಿಂದೆ ಅಡಗಿದೆ. ವ್ಯಕ್ತದ ಮೂಲಕ ಭಕ್ತ ಅವ್ಯಕ್ತವನ್ನು ಆರಾಧಿಸುತ್ತಾನೆ. ಪುನಃ ಅವ್ಯಕ್ತವೇ ವ್ಯಕ್ತದಂತೆ ತೋರುತ್ತಿದೆ ಎಂದು ತಿಳಿಯುತ್ತಾನೆ.

ಪರಮಹಂಸರಿಗೆ ಸರ್ವವ್ಯಾಪಿಯಾದ ಅವ್ಯಕ್ತ ಪರಬ್ರಹ್ಮ ದರ್ಶನ ಲಭಿಸಿತ್ತು. ಆದರೂ ಅವರು ದೇವ ದೇವಿಯರ ವಿಗ್ರಹಗಳನ್ನು ಕೀಳೆಣಿಕೆಯಿಂದ ಕಾಣುತ್ತಿರಲಿಲ್ಲ. ಸಾಕಾರ, ನಿರಾಕಾರ ಮುಕ್ತಿ ಸೋಪಾನಕ್ಕೆ ಇರುವ ಮೆಟ್ಟಿಲು ಎಂದು ಮೊದಲು ತೋರುವುದು. ನಿರಾಕಾರವನ್ನು ಸೇರಿದ ಮೇಲೆ ಸಾಕಾರವಾಗಿರುವುದು ಕೂಡಾ ನಿರಾಕಾರದಿಂದ ಎಂದು ಗೊತ್ತಾಗುವುದು. ನೀರ್ಗಲ್ಲು ಸಾಗರದ ನೀರಿನಿಂದ ಆಗಿ ಸಾಗರದ ಮೇಲೆ ತೇಲುತ್ತಿರುವುದು. ನೀರಿನ ದೃಷ್ಟಿಯಿಂದ ನೋಡಿದರೆ ಸಾಗರ ಮತ್ತು ನೀರ್ಗಲ್ಲು ಎರಡೂ ಒಂದೇ. ನಿರಾಕಾರ ಸಾಕಾರಗಳು ನಾಣ್ಯದ ಎರಡು ಭಾಗದಂತೆ. ಆದಕಾರಣವೇ ಪರಮಹಂಸರು ಜಗನ್ಮಯಿಯ ಸಗುಣ ಸಾಕಾರವನ್ನು ಆಕೆಯ ನಿರ್ಗುಣದಷ್ಟೆ ಪ್ರೀತಿಸುತ್ತಿದ್ದರು. ಜಗನ್ಮಾತೆಯ ಪವಿತ್ರ ನಾಮೋಚ್ಚಾರಣೆ ಮಾಡುತ್ತಾ ಕಂಬನಿ ದುಂಬಿ ಭಾವಪರವಶರಾಗಿ ಸ್ಥಬ್ಧರಾಗುತ್ತಿದ್ದರು.

ಕ್ರಿ. ಶ. ೧೮೭೨ನೇ ಇಸವಿ ಮೇ ತಿಂಗಳು–ಜ್ಯೇಷ್ಟ ಬಹುಳ ಅಮಾವಾಸ್ಯೆಯ ದಿನ. ಅಂದು ಫಲಹಾರಿಣೀ ಕಾಳಿಕಾದೇವಿಯ ಪೂಜೆ. ಜೀವಿಗಳ ಕರ್ಮನಾಶಮಾಡುವ ಮಹಾ ಮಾತೆ ಕಾಳಿ ಅವಳು. ದಕ್ಷಿಣೇಶ್ವರದ ದೇವಸ್ಥಾನದಲ್ಲಿ ಅಂದಿನ ರಾತ್ರಿ ಈ ಪೂಜೆಗೋಸುಗವಾಗಿ ಅಣಿಯಾಗುತ್ತಿತ್ತು. ಹಲವಾರು ಭಕ್ತಾದಿಗಳು ನೆರೆದಿದ್ದರು. ತಳಿರು ತೋರಣಗಳನ್ನು ಕಟ್ಟುತ್ತಿದ್ದರು. ಎಲ್ಲರೂ ಜಗನ್ಮಾತೆಯ ಪೂಜೆಯ ಒಂದಲ್ಲ ಒಂದು ಕೆಲಸದಲ್ಲಿ ನಿರತರಾಗಿದ್ದರು. ಸಂಜೆಯಾಯಿತು. ಪಡವಲಂಚಿ

ನಲ್ಲಿ ರವಿ ಮುಳುಗಿದನು. ಮುಗಿಲುಗಳು ಸಂಧ್ಯಾರಾಗದಲ್ಲಿ ತೇಲಿ ಕತ್ತಲೆಯ ಅವ್ಯಕ್ತದಲ್ಲಿ ಕರಗಿಹೋದವು. ಮೇಲೆ ತಾರೆಗಳು ಗಗನದಲ್ಲಿ ಮಿನುಗತೊಡಗಿದವು. ಕೆಳಗೆ ಹಣತೆಗಳು ದೇವಮಂದಿರದ ಮೂಲೆಮೂಲೆ ಯಲ್ಲಿ ಮಿನುಗತೊಡಗಿದವು. ದೇವಸ್ಥಾನದಲ್ಲಿ ಪೂಜೆಗೆ ಮೊದಲಾಯಿತು ಭಕ್ತವೃಂದವೆಲ್ಲವೂ ಅಲ್ಲಿ ನೆರೆಯಿತು.

ಶ್ರೀರಾಮಕೃಷ್ಣರು ಮಾತ್ರ ಅಂದು ಹೊರಗೆ ಬರಲಿಲ್ಲ. ತಾವು ಅಂದಿನ ರಾತ್ರಿ ಮಾಡಬೇಕೆಂದಿದ್ದ ಮತ್ತೊಂದು ಪೂಜೆಗೆ ಅಣಿಮಾಡು ತ್ತಿದ್ದರು. ಅದೇ ಶೋಡಶೀಪೂಜೆ· ಜಗನ್ಮಾತೆಯ ಅನೇಕ ರೂಪಿನಲ್ಲಿ ಇದೂ ಒಂದು. ಇಲ್ಲಿ ದೇವಿ ಪ್ರಳಯಕಾಲದ ರುದ್ರಕಾಳಿಯಂತೆ ನಗ್ನ ಳಾಗಿ, ಅತಿ ಭಯಂಕರಳಾಗಿಲ್ಲ. ಆಕೆ ಹದಿನಾರು ವರುಷದ ಪ್ರಾಯದ ಹೊಸ ಯೌವನದಲ್ಲಿ ಅದ್ವಿತೀಯ ಸೌಂದರ್ಯದ ಸೌಮ್ಯ ಭಾವವನ್ನು ಹೊಂದಿರುವಳು. ಈ ಮಹಾ ಶಕ್ತಿಯ ಈ ಅನುಪಮ ಸೌಂದರ್ಯವೇ, ಉಳಿದ ಎಲ್ಲ ಜೀವಿಗಳಿಗೂ ಶಕ್ತಿಸೌಂದರ್ಯವನ್ನು ದಾನಮಾಡುವುದು. ಈಕೆ ಶಕ್ತಿ, ಸೌಂದರ್ಯ ಜ್ಞಾನದ ಸಿಧಿ ಈ ಮಹಾ ಶಕ್ತಿ ಮನಸ್ಸು ಮಾಡಿ ತನ್ನ ಅನಂತ ಶಕ್ತಿಯಲ್ಲಿ ಒಂದು ಬಿಂದುವನ್ನು ದಾನ ಮಾಡಿದರೆ ಅದು ನಮ್ಮ ಜೀವನವನ್ನು ಭವ್ಯವನ್ನಾಗಿ ಮಾಡುವುದು. ಅಂದು ಈ ಮಹಾಶಕ್ತಿದಾಯಕಿಯನ್ನು ಶ್ರೀಶಾರದಾದೇವಿಯ ಮೂಲಕ ಪೂಜಿಸ ಬೇಕೆಂದು ಶ್ರೀರಾಮಕೃಷ್ಣರು ಮನಸ್ಸು ಮಾಡಿದರು.

ರಾತ್ರಿ ಒಂಬತ್ತು ಘಂಟೆಯಾಗಿತ್ತು. ಅಷ್ಟು ಹೊತ್ತಿಗೆ ಶ್ರೀರಾಮ ಕೃಷ್ಣರ ಕೋಣೆಯಲ್ಲಿ ಪೂಜೆಗೆ ಎಲ್ಲಾ ಅಣಿಮಾಡಿ ಹೃದಯನು ಹೊರಗೆ ಬಂದನು. ಆಗ ಶ್ರೀಶಾರದಾದೇವಿಯವರು ಒಳಗೆ ಬಂದರು. ಶ್ರೀರಾಮ ಕೃಷ್ಣರು ಮಂತ್ರೋಚ್ಚಾರಣೆಯಿಂದ ಪೀಠವನ್ನು ಶುದ್ಧಿ ಮಾಡಿ ಅದರ ಮೇಲೆ ಶ್ರೀಶಾರದಾದೇವಿಯವರನ್ನು ಕುಳ್ಳಿರಿಸಿದರು. ಆವಾಹನ ಮಂತ್ರ ದಿಂದ "ಜಗನ್ಮಯಿ! ಜ್ಞಾನಪ್ರದಾಯಿನಿ! ಸರ್ವ ಶಕ್ತಿ ಅಧಿಕಾರಿಣಿ! ಸರ್ವಸೌಂದರ್ಯಸಿಧಿ! ನನಗೆ ಮುಕ್ತಿಯ ಬಾಗಿಲನ್ನು ತೆಗೆ. ಈಕೆಯ ದೇಹ ಮನಸ್ಸನ್ನು ಶುದ್ಧಿಮಾಡಿ ಅಲ್ಲಿ ನೆಲಸಿ ನನಗೆ ಶುಭವಾದುದನ್ನು ಮಾಡು" ಎಂದು ಪ್ರಾರ್ಥಿಸಿದರು. ಶ್ರೀರಾಮಕೃಷ್ಣರು ಭವತಾರಿಣಿ ಯನ್ನು ಅರ್ಚಿಸುವಂತೆ ತಮ್ಮ ಸಹಧರ್ಮಿಣಿಯನ್ನು ಅರ್ಚಿಸಿದರು. ಅವರ ಕಾಲಿಗೆ ಅರಿಶಿನ ಬಳಿದರು. ಹಣೆಗೆ ಕುಂಕುಮ ಇಟ್ಟರು, ನೈವೇದ್ಯವನ್ನೂ ಉಣಿಸಿದರು. ಹೊಸ ಬಟ್ಟೆಯನ್ನು ಉಡಿಸಿದರು.

ನಂತರ ಧ್ಯಾನಾಸಕ್ತರಾದರು. ಆಗ ಶ್ರೀ ಶಾರದಾದೇವಿಯವರು ಅಂತ ರ್ಮುಖಿಯಾದರು. ಇಬ್ಬರ ಮನಸ್ಸೂ ಸಚ್ಚಿದಾನಂದಮಯಸ್ವರೂಪಳಾದ ಜಗನ್ಮಯಿಯ ಸರೋವರದಲ್ಲಿ ಐಕ್ಯವಾಯಿತು. ಅರ್ಧ ರಾತ್ರಿಯವರೆಗೂ ಅದೇ ಸ್ಥಿತಿಯಲ್ಲಿದ್ದು ಕ್ರಮೇಣ ಪ್ರಜ್ಞೆ ತಾಳಿ ಶ್ರೀರಾಮಕೃಷ್ಣರು ಶಾರದಾ ದೇವಿಯವರಿಗೆ ಪುಷ್ಪಾಂಜಲಿಯನ್ನರ್ಪಿಸಿದರು. ತಮ್ಮ ಜಪಮಾಲೆ ಯನ್ನು ಅವರ ಪದತಲದಲ್ಲಿಟ್ಟರು. ಅಂದಿನವರೆಗೆ ತಾವು ಮಾಡಿದ ಸಾಧನೆಯ ಫಲವನ್ನೆಲ್ಲಾ ಅವರಿಗೆ ಧಾರೆಯೆರೆದರು. ಸಾಧನೆಯಲ್ಲೆಲ್ಲಾ ಕಿರೀಟಪ್ರಾಯವಾದ ಈ ಸಾಧನೆಯಲ್ಲಿ ಅವರ ಆಧ್ಯಾತ್ಮಿಕ ಸಾಧನೆ ಕೊನೆಗೊಂಡಿತು. ನಂತರ ಅವರು ಮತ್ತಾವ ಸಾಧನೆಯನ್ನೂ ಮಾಡಲಿಲ್ಲ.

ಪೂಜೆಯಾಗುವ ಹೊತ್ತಿಗಾಗಲೇ ಅರುಣವೇಣಿ ಪೂರ್ವದಿಗಂತದಲ್ಲಿ ತನ್ನ ಹೊಂಗಲಶದಿಂದ ಜಲವನ್ನು ಚೆಲ್ಲಿ ರವಿಯ ಬರವಿಗೆ ಚಿತ್ರಚಿತ್ರದ ಹಸೆಯನ್ನು ಬರೆಯುತ್ತಿದ್ದಳು. ಪಕ್ಷಿಗಳು ಗೂಡಿನಿಂದ ಎದ್ದು ದಕ್ಷಿಣೇಶ್ವರದ ದೇವಿಗೆ ತಾವು ಪಯಣ ಹೊರಡುವುದಕ್ಕೆ ಮುಂಚೆ ಸ್ವರ ನೈವೇದ್ಯವನ್ನು ಅರ್ಪಿಸುತ್ತಿದ್ದವು. ತೆಂಬೆಲರು ತೀಡುತ್ತಿತ್ತು. ಶ್ರೀ ಶಾರದಾದೇವಿಯವರು ಪೀಠದಿಂದ ಎದ್ದು ಧ್ಯಾನಾಸಕ್ತರಾದ ಶ್ರೀರಾಮಕೃಷ್ಣರಿಗೆ ಮನಸ್ಸಿನಲ್ಲಿಯೇ ನಮಸ್ಕರಿಸಿ ತಮ್ಮ ಕೋಣೆಗೆ ಹೊರಟರು.

ಷೋಡಶೀಪೂಜೆ ಶ್ರೀರಾಮಕೃಷ್ಣಪರಮಹಂಸರ ಸಾಧನೆಯ ಪರಮಾವಧಿಯಾಯಿತು. ತನ್ನ ಸತಿಯಲ್ಲದ ಉಳಿದ ಹೆಂಗಸರನ್ನು ಪೂಜ್ಯಭಾವದಿಂದ ನೋಡುವುದು ಸುಲಭ. ಆದರೆ ತನ್ನ ಸತಿಯನ್ನು ಅದೇ ಪೂಜ್ಯದೃಷ್ಟಿಯಿಂದ ನೋಡಬೇಕಾದರೆ ಒಬ್ಬನ ಹೃದಯದಲ್ಲಿ ಕಾಮ ಗಂಧ ಸಂಪೂರ್ಣ ನಾಶವಾಗಿರಬೇಕು. ಕಾಮವೆಲ್ಲಿದೆಯೋ ಅಲ್ಲಿ ದೇವತ್ವಕ್ಕೆ ನೆಲೆಯಿಲ್ಲ. ಕತ್ತಲಿರುವೆಡೆಯಲ್ಲಿ ಬೆಳಕಿರುವುದಿಲ್ಲ. ಶ್ರೀರಾಮ ಕೃಷ್ಣರು ಇಂದ್ರಿಯವನ್ನು ಮೆಟ್ಟಿ ಇಂದ್ರಿಯಾತೀತವಾದ ಸಚ್ಚಿದಾನಂದ ಸುಖಕ್ಕೆ ಹಾರಿದ ಸಾಹಸವೇ ಅವರನ್ನು ಅವತಾರಪುರುಷರ ಶ್ರೇಣಿಗೆ ಸೇರಿಸುವುದು.

ಶ್ರೀ ಶಾರದಾದೇವಿಯವರ ಜೀವನದಮೇಲೂ ಷೋಡಶೀಪೂಜೆ ತನ್ನ ಪ್ರಭಾವವನ್ನು ಬೀರಿ ಶ್ರೀರಾಮಕೃಷ್ಣರ ಜೀವನ ನಾಟಕಕ್ಕೆ ಸಹಾಯಮಾಡಿದೆ. ಮೊದಲನೆಯದಾಗಿ, ಶ್ರೀರಾಮಕೃಷ್ಣರು ತಮ್ಮ ಸಾಧನೆಯ ಫಲವನ್ನೆಲ್ಲಾ ಇವರಿಗೆ ನಿವೇದಿಸಿದುದರ ಪರಿಣಾಮವಾಗಿ ಇವರೂ ಅದಕ್ಕೆಲ್ಲಾ ಹಕ್ಕುದಾರಿಣಿಯಾದರು. ನಾವು ನಮ್ಮ ಆಸ್ತಿ

ಯನ್ನು ಇನ್ನೊಬ್ಬರಿಗೆ ಕೊಡುವಂತೆ ತಪಸ್ಸಿನ ಪ್ರಭಾವವನ್ನೆಲ್ಲಾ ಇನ್ನೊಬ್ಬರಿಗೆ ಕೊಡಬಹುದೆ?—ಎಂದು ಕೆಲವರು ಅನುಮಾನಿಸ ಬಹುದು. ಅದು ಸಾಧ್ಯ; ಕೊಡಬಹುದು; ಆದರೆ ಸ್ವೀಕರಿಸುವವನು ಮಾತ್ರ ಸಿದ್ಧನಾಗಬೇಕು. ಆಗಮಾತ್ರ ಅದು ಸಾಧ್ಯ. ಆಸ್ತಿಯನ್ನು ದಾನಮಾಡುವುದಕ್ಕೂ ತಪಶ್ಶಕ್ತಿಯನ್ನು ದಾನಮಾಡುವುದಕ್ಕೂ ಸ್ವಲ್ಪ ವ್ಯತ್ಯಾಸವಿದೆ. ನಾವು ಬಾಹ್ಯ ಆಸ್ತಿಗಳನ್ನು ದಾನಮಾಡಿದರೆ ಅದು ಮೊದಲಿಗಿಂತ ಕಡಿಮೆಯಾಗುವುದು. ಆದರೆ ತಪಶ್ಶಕ್ತಿ ಹಾಗಲ್ಲ. ದಾನ ಮಾಡಿದರೆ ಅದು ಬತ್ತುವುದಿಲ್ಲ. ಉರಿಯುತ್ತಿರುವ ದೀಪ ತನ್ನ ಜ್ಯೋತಿ ಯನ್ನು ಇನ್ನೊಂದಕ್ಕೆ ದಾನಮಾಡಬಹುದು. ಆದರೆ ಅದರಿಂದ ಅದರ ಪ್ರಕಾಶ ಕಡಿಮೆಯಾಗುವುದಿಲ್ಲ. ಶ್ರೀ ಶಾರದಾದೇವಿಯವರು ಅದನ್ನು ಸ್ವೀಕರಿಸಲು ತಕ್ಕ ಶಕ್ತಿಯನ್ನು ಪಡೆದಿದ್ದರು. ದೈವಭಕ್ತರಾದ ಮಾತಾ ಪಿತೃಗಳ ಮನೆಯಲ್ಲಿ ಜನಿಸಿದ್ದರು. ಪೂರ್ವ ಜನ್ಮದ ಉತ್ತಮ ಸಂಸ್ಕಾರ ವಾಗಲೇ ಅವರಲ್ಲಿತ್ತು. ಶ್ರೀರಾಮಕೃಷ್ಣರ ಕೈಹಿಡಿದಮೇಲಂತೂ ಮನಸ್ಸು, ಅನವರತವೂ ಕಾಡುಗಿಚ್ಚಿನಂತೆ ಉರಿಯುತ್ತಿರುವ ತಪಶ್ಶಕ್ತಿಯು ಹತ್ತಿರ ವಿತ್ತು. ಶ್ರೀರಾಮಕೃಷ್ಣರ ಜೀವನದಲ್ಲಿ ತೋರಿಬರುವ ದಿವ್ಯಶೀಲಗಳ ನ್ನೆಲ್ಲಾ ಇವರು ತಮ್ಮ ಜೀವನಕ್ಕೆ ಸೆಳೆದುಕೊಂಡರು. ಕೆಲವರು, ಶ್ರೀರಾಮ ಕೃಷ್ಣರಂತೆ ಇವರು ಅನೇಕ ಸಾಧನೆಗಳನ್ನು ಕೈಗೊಳ್ಳಲಿಲ್ಲ; ಆದುದರಿಂದ ಅವರಷ್ಟು ಆಧ್ಯಾತ್ಮಿಕ ಅನುಭವವನ್ನು ಪಡೆಯದೆ ಇರಬಹುದು ಎಂದು ಹೇಳಬಹುದು. ಆದರೆ ನಾವು ಒಂದು ವಿಷಯವನ್ನು ನೆನಪಿನಲ್ಲಿಡಬೇಕು. ಒಬ್ಬೊಬ್ಬರು ಒಂದೊಂದು ಕಾರ್ಯವನ್ನು ಮಾಡುವುದಕ್ಕೆ ತಮ್ಮ ಜೀವನ ವನ್ನು ಮೀಸಲಾಗಿಟ್ಟು ಬರುವರು. ಒಬ್ಬರು ಮಾಡುವುದನ್ನು ಇನ್ನೊಬ್ಬರು ಏತಕ್ಕೆ ಮಾಡಬೇಕು? ಪ್ರಯೋಗಶಾಲೆಯಲ್ಲಿ ಒಬ್ಬ ಭೌತಶಾಸ್ತ್ರಜ್ಞನು ಅನೇಕ ವರ್ಷಗಳು ಪ್ರಯತ್ನಪಟ್ಟು ಕೆಲವು ವಿಷಯಗಳನ್ನು ಕಂಡು ಹಿಡಿಯುವನು. ಅದನ್ನೇ ಮತ್ತೊಬ್ಬನು ಕಂಡುಹಿಡಿಯಬೇಕಾಗಿಲ್ಲ. ಹಿಂದಿನ ವೈಜ್ಞಾನಿಕ ಪ್ರಯೋಗ ಫಲಿತಾಂಶಗಳನ್ನು ತೆಗೆದುಕೊಂಡು ಅದರ ತಳಹದಿಯಮೇಲೆ ತನ್ನ ಅನುಭವದ ಕಟ್ಟಡವನ್ನು ಕಟ್ಟಬೇಕು. ಅದ ಲ್ಲದೆ ಪ್ರತಿಯೊಬ್ಬರೂ ತಾವೇ ಸ್ವಂತ ಪ್ರಯತ್ನಮಾಡಿ ಎಲ್ಲವನ್ನೂ ಕಂಡು ಹಿಡಿಯುತ್ತೇವೆಂದು ಪ್ರಯತ್ನಿಸಿದರೆ ಅದು ವೃಥಾ ಕಾಲಹರಣ. ಮಾನ ವನ ಆಯುಸ್ಸು ಅಲ್ಪ. ಒಂದೆರಡು ವಿಷಯಗಳನ್ನು ಪ್ರಕೃತಿಯ ಭಂಡಾರ ದಿಂದ ಸೆಳೆಯುವ ಹೊತ್ತಿಗೆ ಸಾವಿನ ಕರೆ ಬರುವುದು. ಅದರಂತೆಯೇ

ಶ್ರೀರಾಮಕೃಷ್ಣರು ಸರ್ವ ಧರ್ಮ ಸಮನ್ವಯ ತತ್ತ್ವವನ್ನು ಅನುಷ್ಠಾನದಲ್ಲಿ ತೋರಿಸಿದರು. ಶ್ರೀ ಶಾರದಾದೇವಿಯವರು ಅವರ ಉಪದೇಶಗಳನ್ನು ತಮ್ಮ ಜೀವನದಲ್ಲಿ ಹದಗೊಳಿಸಿ ಬಂದವರಿಗೆಲ್ಲ ಅದನ್ನು ದಾನಮಾಡಿದರು. ಒಬ್ಬರು ಸಂಗ್ರಹಕಾರರು ಮತ್ತೊಬ್ಬರು ಸಂಗ್ರಹಿಸಿಟ್ಟುದನ್ನು ಉಳಿದವರಿಗೆ ದಾನಮಾಡುವವರು.

ಎರಡನೆಯದಾಗಿ, ಶ್ರೀರಾಮಕೃಷ್ಣರ ವ್ಯಕ್ತಿತ್ವ ಜಗನ್ಮಾತೆಯ ವ್ಯಕ್ತಿತ್ವದಲ್ಲಿ ಹೇಗೆ ಒಂದಾಯಿತೋ ಹಾಗೆಯೇ ಶ್ರೀ ಶಾರದಾದೇವಿಯವರ ಜೀವನ ನದಿಯೂ ಕೂಡ ಜಗನ್ಮಾತೆಯ ಕಡಲಿಗೆ ಸೇರಿ ಒಂದಾಯಿತು. ಇಬ್ಬರಲ್ಲಿಯೂ ಒಂದೇ ಜಗನ್ಮಯಿಯ ಶಕ್ತಿ ಸಂಚರಿಸುತ್ತಿತ್ತು. ಇಬ್ಬರೂ ಒಂದೇ ಗುರಿಯ ಸಾಧನೆಗೆ ದುಡಿಯುತ್ತಿದ್ದರು. ದೇಹಗಳು ಬೇರೆಯಾದರೂ ಅವರಿಬ್ಬರನ್ನೂ ಒಂದೇ ಜಗನ್ಮಯೀ ಶಕ್ತಿ ಒಂದೇ ಗುರಿಯೆಡೆಗೆ ಪ್ರೇರೇಪಿಸುತ್ತಿತ್ತು. ಆದ್ದರಿಂದಲೇ ಶ್ರೀ ರಾಮಕೃಷ್ಣರು ಕಾಲವಾದಮೇಲೆ ಅವರು ಯಾವ ಕಾರ್ಯವನ್ನು ಮಾಡುತ್ತಿದ್ದರೋ, ಅದನ್ನೆ ಶ್ರೀ ಶಾರದಾದೇವಿಯವರು ಮುಂದುವರಿಸಿದರು. ಜಗದ ಬವಣೆಯಲ್ಲಿ ಸಿಕ್ಕಿ ನೊಂದು ಬಂದವರ ದುಃಖದ ಕಥೆಗಳನ್ನು ಸಮಾಧಾನದಿಂದ ಕೇಳುತ್ತಿದ್ದರು, ಅವರ ಬೆಂದ ಚಿತ್ತಕ್ಕೆ ತಮ್ಮ ಉಪದೇಶದ ಅಮೃತವನ್ನು ಬೀರುತ್ತಿದ್ದರು. ಅಧ್ಯಾತ್ಮಿಕ ಸಾಧನೆಯಲ್ಲಿ ಎಡವುತ್ತಿದ್ದವರನ್ನು ವಿಚಾರಿಸಿ ಕಾರಣವನ್ನು ತಿಳಿದು ಅವರನ್ನು ಸರಿಯಾದ ಮಾರ್ಗಕ್ಕೆ ತಂದುಬಿಡುತ್ತಿದ್ದರು. ಶ್ರೀ ರಾಮಕೃಷ್ಣರ ಜೀವನಕಾಲದಲ್ಲಿ ಮುಂದೆ ಜನಿಸಿದ ಶ್ರೀ ರಾಮಕೃಷ್ಣ ಸಂಘವೆಂಬುದು ಒಂದು ಅಸ್ಪಷ್ಟ ಬೀಜವಾಗಿತ್ತು. ಅದು ವಿವೇಕಾನಂದರ ಪ್ರಯತ್ನದಿಂದ ಮೊಳೆತು ಚಿಗುರುಗೂಡಿತು. ಶ್ರೀ ಶಾರದಾದೇವಿಯವರ ಮಾತೃಸಹಜವಾದ ಪ್ರೇಮ ಮತ್ತು ಆಶೀರ್ವಾದ ಬಲದಿಂದ ಬಹುಜನರ ಹಿತಕ್ಕೆ ಬಹುಜನರ ಸುಖಕ್ಕೆ ದುಡಿಯುವ ಜಗದ್ವಂದ್ಯ ಸಂಸ್ಥೆಯಾಯಿತು.



## ೭. ಸಾಧನೆ

ಮುಕ್ತಿ ಅಮೃತವನ್ನು ಪಾನಮಾಡುವುದಕ್ಕೆ ನಾವು ಸತತವೂ ಪ್ರಯತ್ನಪಡಬೇಕು. ಇಂದ್ರಿಯ ಪಂಜರದಲ್ಲಿ ಅನವರತವೂ ಇದ್ದು ಅದರ ಮೂಲಕ ಬರುವ ಸುಖದುಃಖಗಳನ್ನು ಮೆದ್ದು ಮಾನವನು ಜನನ ಮರಣದ ಅಧೀನನಾಗಿರುವನು. ಇಂದ್ರಿಯಾತೀತ ಸಚ್ಚಿದಾನಂದ ವಸ್ತು ವನ್ನು ಹೊಂದಬೇಕಾದರೆ ನಾವು ಈಗ ಇರುವ ಇಂದ್ರಿಯದ ಸೆರೆಯನ್ನು ಸೀಳಿ ಹೋಗಬೇಕು. ಅದಕ್ಕೆ ಆಧ್ಯಾತ್ಮಿಕ ಜೀವನದಲ್ಲಿ ಸಾಧನೆ ಎನ್ನು ವರು. ಅದನ್ನೇ ನಾವು ಸ್ವಪ್ರಯತ್ನ ಎನ್ನುವುದು. ಯಾವ ಗುರುವಿನ ಅನುಗ್ರಹ ಒಂದೇ ನಮ್ಮನ್ನು ಬೆಳಕಿಗೆ ತರಲಾರದು. ನಾವು ಸುಮ್ಮನಿರು ವುದು, ಅವರು ನಮಗೆ ಕಷ್ಟಪಟ್ಟು ಆರ್ಜಿಸಿದ ವಸ್ತುವನ್ನು ಹಂಚುವರು ಎಂದು ತಿಳಿಯುವುದು ತಿಳಿಗೇಡಿತನ. ಗುರುವಿನ ಅನುಗ್ರಹದಲ್ಲಿ ಒಂದು ಶಕ್ತಿ ಇದೆ. ಆದರೆ ಅದು ನಮ್ಮ ಜೀವನದಲ್ಲಿ ಫಲಕಾರಿಯಾಗಬೇಕಾದರೆ ಅವರ ಉಪದೇಶದ ಬೀಜಕ್ಕೆ ನಮ್ಮ ಸ್ವಪ್ರಯತ್ನದ ನೀರನ್ನು ಎರೆಯ ಬೇಕು. "ನಾನೇ, ಎಲ್ಲರೂ ಮಾಡಬೇಕಾದ ಸಾಧನೆಯನ್ನು ಪೂರೈಸಿರು ವೆನು; ನೀವು ಏನೂ ಮಾಡಬೇಕಾಗಿಲ್ಲ; ಬಂದು ಶರಣಾಗತರಾದರೆ ಸಾಕು ಮುಕ್ತಿ ನಿಮಗೆ ಕರಗತವಾಗುವುದು" ಎಂದು ಶ್ರೀರಾಮಕೃಷ್ಣರು ಹೇಳುತ್ತಿರಲಿಲ್ಲ. ಗುರುಕೊಟ್ಟ ಜೋಳಿಗೆ ಎಂದು ಗೂಟಕ್ಕೆ ನೇತುಹಾಕಿದರೆ ಅದರಿಂದ ಹೊಟ್ಟೆತುಂಬುವುದಿಲ್ಲ. ಅದನ್ನು ತೆಗೆದುಕೊಂಡು ಕಷ್ಟಪಟ್ಟು ಭಿಕ್ಷೆಗೆ ಹೋದರೆ ಅದರಿಂದ ಪ್ರಯೋಜನ ಉಂಟು. ಆದರ್ಶ ಗುರು ಗಳಾದ ಶ್ರೀರಾಮಕೃಷ್ಣರು ಯಾವಾಗಲೂ ತಮ್ಮ ಶಿಷ್ಯರನ್ನು ಅವರವರ ಸ್ವಪ್ರಯತ್ನದಮೇಲೆ ನಿಲ್ಲುವಂತೆ ಮಾಡುತ್ತಿದ್ದರು.

ಶ್ರೀರಾಮಕೃಷ್ಣರಲ್ಲಿಗೆ ಅನೇಕವೇಳೆ ಸಂದೇಹದಲ್ಲಿ, ದುಃಖದಲ್ಲಿ, ನರಳುತ್ತಿದ್ದವರು ಬರುತ್ತಿದ್ದರು. ಅವರಿಗೆ ದೇವರಿರುವನು ಎಂಬ ಅಂಶ ವನ್ನು ದೃಢಪಡಿಸಲು ಕೆಲವುವೇಳೆ ಆಧ್ಯಾತ್ಮಿಕ ಅನುಭವವನ್ನು ಕೊಡು ತ್ತಿದ್ದರು. ಇದರಿಂದ ಅವರಿಗೆ ಕ್ಷಣಕಾಲ ತೃಪ್ತಿಯೇನೋ ಸಿಕ್ಕುತ್ತಿತ್ತು. ಆ ಕ್ಷಣಕಾಲದ ಅನುಭವವೇ ನಮ್ಮ ಜೀವನದಲ್ಲಿ ಅನುಗಾಲದ ಅನುಭವ ವಾಗಬೇಕಾದರೆ ಅವರು ಅದಕ್ಕೆ ಕಷ್ಟಪಡಬೇಕು. ಒಂದು ಮಿಠಾಯಿ ಅಂಗಡಿಗೆ ಹೋಗಿ ಅಲ್ಲಿರುವ ಸಾಮಾನಿನ ಬೆಲೆಯನ್ನು ಕೇಳಿದಾಗ, ಮಾಲೀಕನು ಸರಕಿನ ಒಂದು ಚೂರನ್ನು ರುಚಿ ನೋಡಲು ಕೊಡುವಂತೆ, ಶ್ರೀರಾಮಕೃಷ್ಣರು ಬಂದ ಶಿಷ್ಯರಿಗೆಲ್ಲಾ ಮುಂದೆ ಸಿಕ್ಕಬಹುದಾದ ಪರ

ಮಾತ್ಮನ ಆನಂದ ಸವಿಯ ಅನುಭವವನ್ನು ಸ್ವಲ್ಪ ರುಚಿ ತೋರಿಸುತ್ತಿದ್ದರು. ಇದರಿಂದಲೇ ಸಾಧಕರು ತೃಪ್ತರಾಗಿ ನಿಲ್ಲುತ್ತಿರಲಿಲ್ಲ. ನಿಲ್ಲುವಂತೆ ಮಾಡುವುದು ಕೂಡ ಶ್ರೀರಾಮಕೃಷ್ಣರ ಉದ್ದೇಶವಲ್ಲ. ಜನಗಳು ಇಂದ್ರಿಯ ಜನ್ಯವಾದ ಸುಖವನ್ನು ಮತ್ತು ಇಂದ್ರಿಯಾತೀತವಾದ ವಿಷಯವನ್ನೂ ಹೋಲಿಸಿ ನೋಡಲಿ; ಆಗ ಬಾಹ್ಯಸುಖಕ್ಕೆ ಜುಗುಪ್ಸೆ ಹುಟ್ಟಿ ಆಂತರಿಕಸುಖವನ್ನು ಹೊಂದಲು ಆಕಾಂಕ್ಷೆ ಹೆಚ್ಚುವುದು. ಜಗದ ಸುಖಗಳಲ್ಲಿ ಅತೃಪ್ತಿಯನ್ನು ಬಿತ್ತುವುದು ಶ್ರೀರಾಮಕೃಷ್ಣರ ಗುರಿ. ಜಗತ್ ಪ್ರಖ್ಯಾತರಾದ ಸ್ವಾಮಿ ವಿವೇಕಾನಂದರಂತಹ ಶಿಷ್ಯರಿಂದ ಹಿಡಿದು, ಅವರನ್ನು ಒಮ್ಮೆ ಬಂದು ನೋಡಿದ ಅನಾಮಧೇಯನು ಕೂಡಾ ಕೇವಲ ಅವರ ಕೃಪಾಕಟಾಕ್ಷದಿಂದಲೇ ಆ ಸ್ಥಿತಿಗೆ ಬರಲಿಲ್ಲ. ಕಠೋರ ಸಾಧನೆಯಲ್ಲಿ ನಿರತರಾದರು. ಶ್ರೀರಾಮಕೃಷ್ಣರಿಂದ ಸ್ವೀಕರಿಸಿದ ಕ್ಷಣಕಾಲದ ಅನುಭವವನ್ನು ತಮ್ಮ ಜೀವನದ ಅನುಗಾಲದ ಅನುಭವವನ್ನಾಗಿ ಮಾಡಿಕೊಂಡ ಸಾಹಸಿಗಳು ಇವರು. ಅದರಂತೆಯೇ ಶ್ರೀ ಶಾರದಾದೇವಿಯವರೂ ಕೂಡಾ ಸಾಧನೆಯಲ್ಲಿ ಕಾಲವನ್ನು ಕಳೆಯಬೇಕಾಯಿತು.

ಸಾಧನೆಯ ಕಾಲ ಅತ್ಯಂತ ಅಮೂಲ್ಯವಾದ ಕಾಲ. ತಪಶ್ಶಕ್ತಿಯನ್ನು ಶೇಖರಿಸುವ ಕಾಲ. ಹೊರಗಿನಿಂದ ನೋಡಿದರೆ ಇದು ಮೌನವಾಗಿ ಕಾಣುವುದು. ಆದರೆ ಪ್ರತಿಕ್ಷಣವೂ ತನ್ನ ಪೂರ್ವಸಂಸ್ಕಾರಗಳೊಡನೆ ಯುದ್ಧ ನಡೆಯುತ್ತಿರುತ್ತದೆ.

ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಸಾಧನೆಯ ದಾರಿಯನ್ನು ಅನುಸರಿಸುವರು. ಶ್ರೀ ಶಾರದಾದೇವಿಯವರು ಶ್ರೀರಾಮಕೃಷ್ಣರಂತೆ ಕಠೋರ ಸಾಧನೆಯಲ್ಲಿ ಕಾಲವನ್ನು ಕಳೆಯ ಬೇಕಾಗಿರಲಿಲ್ಲ. ಸ್ವಾಮಿ ವಿವೇಕಾನಂದರಂತೆ ಸಂಶಯದ ತುಮುಲದಲ್ಲಿ ಬಿದ್ದು, ಬಡತನ ಕಷ್ಟಗಳಿಂದ ಪೆಟ್ಟುತಿಂದು, ಪರಿಪಕ್ವವಾಗಿರಬೇಕಾಗಿರಲಿಲ್ಲ. ಶ್ರೀರಾಮಕೃಷ್ಣರಂತಹ ಅವತಾರ ಪುರುಷರನ್ನು ಇವರು ಮದುವೆಯಾಗಿದ್ದುದರಿಂದ ಇವರ ಸಾಧನೆಯ ರೀತಿಯೇ ಬೇರೆಯಾಯಿತು. ಇವರ ಸಾಧನೆಯಲ್ಲಿ ಪತಿಗೆ ಮಾಡುತ್ತಿದ್ದ ಸೇವೆಯೇ ಮುಖ್ಯವಾದ ಅಂಗವಾಗಿತ್ತು. ಸಚ್ಚಿದಾನಂದ ಸ್ವರೂಪಿಯಾದ ಪರಮಾತ್ಮನೇ ಶ್ರೀರಾಮಕೃಷ್ಣರ ರೂಪಿನಲ್ಲಿ ಇದ್ದರೆಂದು ಅವರು ಭಾವಿಸಿದ್ದರು. ಹಿಂದೂಧರ್ಮದಲ್ಲಿ ಹುಟ್ಟಿ ಬೆಳೆದ ಎಲ್ಲ ಸ್ತ್ರೀಯರಿಗೂ ಪಾತಿವ್ರತ್ಯ ಅತ್ಯಂತ ಪವಿತ್ರವಾದ ಧರ್ಮವೆಂಬುದು ಗೊತ್ತು. ಸತಿಗೆ ಪತಿಸೇವೆಯಿಂದ ಗಳಿಸದ ಪರಮಪದವಿಲ್ಲ. ಮಹಾಭಾರತದಲ್ಲಿ

ಪತಿ ಸೇವೆಯಲ್ಲೇ ನಿರತಳಾದ ಒಬ್ಬ ಸ್ತ್ರೀ ಬ್ರಹ್ಮಜ್ಞಾನಿಯಾಗಿದ್ದಳೆಂದು ಹೇಳಿದೆ.

ಗೊಣಗುಟ್ಟುತ್ತ ಮಾಡುವ ಸೇವೆ ಸೇವೆಯೆನಿಸುವುದಿಲ್ಲ; ಅದು ಕೇವಲ ಚಾಕರಿ ಮಾತ್ರ. ಸೇವೆ ಮಾಡಬೇಕಾದರೆ ಪ್ರೀತಿಯಿರಬೇಕು. ಎಂದು ನಾವು ಒಬ್ಬ ಮಹಾಪುರುಷನನ್ನು ಸ್ವಾರ್ಥಾಭಿಲಾಷೆಯಿಲ್ಲದೆ ಶುದ್ಧ ಹೃದಯದಿಂದ ಪ್ರೀತಿಸುತ್ತೇವೆಯೋ ಆಗ ಆ ಮಹಾಪುರುಷರು ತಪಸ್ಸಿನಿಂದ ಗಳಿಸಿದ ಸಿದ್ಧಿಗೆಲ್ಲಾ ಪಾಲುದಾರರಾಗುವೆವು. ಅನವರತವೂ ತಪಶ್ಶಕ್ತಿಯಿಂದ ಜಾಜ್ವಲ್ಯಮಾನವಾಗಿ ಉರಿಯುತ್ತಿದ್ದ ಶ್ರೀರಾಮಕೃಷ್ಣರ ಜೀವನಜ್ಯೋತಿಯ ಹತ್ತಿರ ಶ್ರೀಶಾರದಾದೇವಿಯವರು ಇದ್ದರು. ಇದರಿಂದಲೇ ಅವರ ಮನಸ್ಸಿನ ಉಚ್ಚ ಸ್ಥಿತಿ ಇವರಿಗೂ ಬಂದಿತು. ಅವರಿಗೆ ಯಾವ ಯಾವ ದಿವ್ಯಭಾವಗಳು ಬರುತ್ತಿದ್ದವೋ, ಅದೇ ದಿವ್ಯಭಾವಗಳು ಇವರಲ್ಲಿಯೂ ಎದ್ದು ಇವರ ಮನಸ್ಸನ್ನು ಅವರ ಮನಸ್ಸಿನ ಮಟ್ಟಕ್ಕೆ ಏರಿಸಿತು. ಒಂದು ಇದ್ದಿಲನ್ನು ಬೆಂಕಿಯ ಮಧ್ಯೆ ಹಾಕಿದರೆ ಅದು ಕ್ರಮೇಣ ಹೇಗೆ ಬೆಂಕಿಯಾಗುವುದೋ ಹಾಗೆಯೇ ಇವರ ಜೀವನವೂ ಶ್ರೀರಾಮಕೃಷ್ಣರ ಜೀವನದಂತೆ ಉರಿಯ ತೊಡಗಿತು. ನಮ್ಮ ಸೇವೆ, ಭಾವಹೀನವಾದ ಯಂತ್ರಮಾಡುವ ಕೆಲಸದಂತೆ ಆಗದೆ ಭಕ್ತಿ ವಿಶ್ವಾಸಗಳಿಂದ ಕೂಡಿದ ಪೂಜೆಯಾಗಬೇಕಾದರೆ ಅದಕ್ಕೆ ಭಕ್ತಿ ಮತ್ತು ಧ್ಯಾನ ಅತ್ಯಾವಶ್ಯಕ. ಶ್ರೀರಾಮಕೃಷ್ಣರು ಶ್ರೀ ಶಾರದಾದೇವಿಯವರ ಜೀವನದಲ್ಲಿ ಇವೆರಡನ್ನೂ ಹೇಗೆ ಅಭಿವೃದ್ಧಿ ಪಡಿಸಿದರು ಎಂಬುದನ್ನು ನೋಡಬಹುದು.

ಶ್ರೀ ಶಾರದಾದೇವಿಯವರನ್ನು ಶ್ರೀರಾಮಕೃಷ್ಣರು ಮದುವೆ ಮಾಡಿಕೊಂಡ ದಿನದಿಂದಲೇ ಅವರನ್ನು ಆಧ್ಯಾತ್ಮಿಕ ಜೀವನದಲ್ಲಿ ತರಬೇತು ಮಾಡುವ ಭಾರವನ್ನು ವಹಿಸಿದರು. ಶ್ರೀ ಶಾರದಾದೇವಿಯವರ ಮನಸ್ಸಿನಲ್ಲಿ ಕಾಮದಾಸೆಯನ್ನು ಸಂಪೂರ್ಣ ನಾಶಮಾಡೆಂದು ಜಗನ್ಮಾಯಿಯನ್ನು ಪ್ರಾರ್ಥಿಸಿದರು. ಜಪತಪಗಳನ್ನು ಮಾಡುವುದರ ವಿಚಾರವಾಗಿ ಸಲಹೆ ಕೊಡುತ್ತಿದ್ದರು. ಒಂದು ದಿನ ರಾತ್ರಿ ಶ್ರೀ ಶಾರದಾದೇವಿಯವರು ಶ್ರೀರಾಮಕೃಷ್ಣರಿಗೆ ಆಹಾರವನ್ನು ತೆಗೆದುಕೊಂಡು ಹೋಗಿದ್ದರು. ಊಟವಾದಮೇಲೆ ಭಕ್ತಿಯ ವಿಚಾರವಾಗಿ ಮಾತನಾಡುತ್ತಾ ಇದ್ದಾಗ ಕಾಲವೆಷ್ಟಾಗಿದೆ ಎಂಬುದು ತಿಳಿಯಲೇ ಇಲ್ಲವಂತೆ. ಶ್ರೀ ಶಾರದಾದೇವಿಯವರು ಹಾಗೆಯೇ ಇವರ ಮಾತನ್ನು ಕೇಳುತ್ತಾ ನಿಂತಿದ್ದರು. ಹಾಗೇ ಸುಮಾರು ಬೆಳಗಿನ ಜಾವದವರೆಗೆ ಮಾತನಾಡುತ್ತಿದ್ದರಂತೆ!

ಶ್ರೀ ಶಾರದಾದೇವಿಯವರು ದಿನವೂ ರಾತ್ರಿ ಸುಮಾರು ಮೂರು ಘಂಟೆಗೆ ಏಳುತ್ತಿದ್ದರು. ನಂತರ ಗಂಗಾ ನದಿಯಲ್ಲಿ ಮಿಂದು ಧ್ಯಾನಾಸಕ್ತ ರಾಗಿ ಕುಳಿತುಕೊಳ್ಳುತ್ತಿದ್ದರು. ಕೆಲವು ದಿನ ಆಲಸ್ಯದಿಂದ ಹಾಗೆಯೇ ಮಲಗಿ ನಿದ್ರಿಸುತ್ತಿದ್ದರೆ, ಶ್ರೀರಾಮಕೃಷ್ಣರು ತಮ್ಮ ಕಮಂಡಲದಿಂದ ತಣ್ಣೀರನ್ನು ಚೆಲ್ಲಿ ಹೋಗುತ್ತಿದ್ದರು. ಶೀತ ಮೈಗೆ ತಾಗಿ ನಂತರ ಏಳು ತ್ತಿದ್ದರು. ಬೆಳಿಗ್ಗೆ ಸುಮಾರು ಏಳು ಘಂಟೆಯ ಮೇಲೆ ಶ್ರೀರಾಮಕೃಷ್ಣರಿಗೆ ಸಂಬಂಧಪಟ್ಟ ಕೆಲಸಗಳು ಇರುತ್ತಿದ್ದುವು.

ಸಂಜೆ, ಶಾಂತಿ ತಾಂಡವಾಡುವ ಕಾಲ. ಆಗ ತಮ್ಮ ಕೋಣೆಯಲ್ಲಿ ಗಂಗೆಯ ಕಡೆ ತಿರುಗಿ ಧ್ಯಾನಕ್ಕೆ ಕುಳಿತುಕೊಳ್ಳುವರು. ಕೆಲವು ವೇಳೆ ಚಂದ್ರ ಆಕಾಶದಲ್ಲಿ ತೇಲುತ್ತಾ ತನ್ನ ಕಾಂತಿಯಿಂದ ಜಗತ್ತನ್ನೆಲ್ಲಾ ಮುಳು ಗಿಸಿರುವಾಗ ಅವನ ಕಡೆ ನೋಡುವರು. "ದೂರದಾಕಾಶದಲ್ಲಿ ಬೆಳಗುವ ಚಂದ್ರನಂತೆ ಶುದ್ಧವಾಗಲಿ ನನ್ನ ಜೀವನ" ಎನ್ನುವರು. "ಚಂದ್ರನಲ್ಲಿ ಸ್ವಲ್ಪವಾದರೂ ಕಳಂಕವಿದೆ. ಅದು ಕೂಡಾ ನನ್ನ ಜೀವನದಲ್ಲಿ ಇಲ್ಲದೆ ನಿನ್ನ ಪೂಜೆಗೆ ಯೋಗ್ಯವಾದ ಅಲರನ್ನಾಗಿ ಮಾಡು" ಎಂದು ಪ್ರಾರ್ಥಿ ಸುವರು.

ಇವರ ಮನಸ್ಸು ಪರಮಾತ್ಮನಲ್ಲಿ ಒಂದಾಗಿ ಸೇರಿತ್ತು ಎನ್ನುವುದಕ್ಕೆ ಬೇಕಾದಷ್ಟು ನಿದರ್ಶನಗಳಿವೆ. ಶ್ರೀ ಶಾರದಾದೇವಿಯವರು ಒಮ್ಮೆ ಶ್ರೀರಾಮಕೃಷ್ಣರಿಗೆ ಆಹಾರವನ್ನು ತೆಗೆದುಕೊಂಡು ಹೋಗುತ್ತಿದ್ದ ಒಬ್ಬ ಭಕ್ತಳನ್ನು ಕುರಿತು "ಅವರೊಂದಿಗೆ ನನಗೆ ಮಾತನಾಡಲು ಅವಕಾಶವೇ ಇಲ್ಲ. ಯಾವಾಗಲೂ ಗಂಡಸರು ನೆರೆದಿರುವರು. ನನಗೆ ಅವರ ಅನುಗ್ರಹ ದಿಂದ ಸಮಾಧಿ ಸಿಕ್ಕಬೇಕೆಂದು ಕೇಳಿಕೊಂಡೆ ಎಂದು ಹೇಳು" ಎಂದು ಅವರು ಹೇಳಿ ಕಳುಹಿಸಿದರು. ಭಕ್ತಳು ಮಾರನೇ ದಿನ ಪರಮಹಂಸರ ಹತ್ತಿರ ಹೋದಾಗ ಶ್ರೀಶಾರದಾದೇವಿಯವರ ಕೋರಿಕೆಯನ್ನು ತಿಳುಸಿ ದಳು. ಶ್ರೀಶಾರದಾದೇವಿಯವರ ಕೋಣೆಗೆ ಬಂದು ನೋಡಿದಾಗ ಅವರು ಪೂಜೆಮಾಡುತ್ತಿದ್ದರು. ಅದರಲ್ಲಿಯೇ ತಲ್ಲೀನರಾಗಿಹೋಗಿದ್ದರು; ಕಣ್ಣಿನಿಂದ ಆನಂದಭಾಷ್ಪಗಳು ಸುರಿಯುತ್ತಿತ್ತು. ಶಿಲಾಮೂರ್ತಿಯಂತೆ ಹಲವು ಘಂಟೆ ಧ್ಯಾನಾಸಕ್ತರಾಗಿದ್ದರಂತೆ.

ಮತ್ತೊಮ್ಮೆ ಶ್ರೀರಾಮಕೃಷ್ಣರ ಶಿಷ್ಯರೊಬ್ಬರು ಶ್ರೀಶಾರದಾದೇವಿ ಯವರು ಧ್ಯಾನಾಸಕ್ತರಾಗಿದ್ದುದನ್ನು ನೋಡಿದರು. ಮುಖದ ಮೇಲಿನ ಮುಸುಕನ್ನು ಪರಪುರುಷರ ಮುಂದೆ ತೆಗೆದವರಲ್ಲ. ಅಂದು ಮುಸುಕೆಲ್ಲ

ಚಾರಿತ್ತು. ಗಾಳಿ ಬೀಸುತ್ತಿತ್ತು. ತಲೆಯ ಕೂದಲು ಗಾಳಿಯ ಬಿರುಸಿಗೆ ಸಿಕ್ಕಿ ನಾಲ್ಕಾರು ದಿಕ್ಕಿನಲ್ಲಿ ಹರಿದಾಡುತ್ತಿತ್ತು. ಕಣ್ಣುಗಳು ಮುಚ್ಚಿದ್ದವು. ಅವರನ್ನು ನೋಡಿದರೆ ಧ್ಯಾನಾಸಕ್ತನಾದ ಬುದ್ಧನ ವಿಗ್ರಹದ ನೆನಪು ಬರುತ್ತಿತ್ತು, ಎಂದು ಒಬ್ಬ ಭಕ್ತನು ಹೇಳುತ್ತಿದ್ದನು. ಶ್ರೀಶಾರದಾದೇವಿಯವರೇ, "ನಾವು ಸಾಧನೆಯಲ್ಲಿ ಮುಂದುವರಿಯುತ್ತಾ ಹೋದಹಾಗೆಲ್ಲಾ ಯಾರು ನಮ್ಮ ಅಂತರಾಳದಲ್ಲಿ ಇರುವರೋ ಅವನೇ ಧನಿಕರಲ್ಲಿ, ದುಃಖಿಗಳಲ್ಲಿ, ಅಸ್ಪೃಶ್ಯರಲ್ಲಿ, ಸಮಾಜ ಬಾಹಿರರಲ್ಲಿ ಇರುವನು ಎಂದು ಗೊತ್ತಾಗುವುದು. ಆ ಅನುಭವ ಬಂದಾಗ ಮಾನವ ನಿರಹಂಕಾರಿಯಾಗುವನು" ಎಂದು ಹೇಳಿದರು.

ಕೆಲವರಿಗೆ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯುತ್ತ ಹೋದ ಹಾಗೆಲ್ಲಾ ಅನೇಕ ದಿವ್ಯಭಾವಗಳು ದೇವದೇವಿಯರ ದರ್ಶನಗಳಾಗಬಹುದು. ಆದರೆ ಎಲ್ಲರಿಗೂ ಆಗುತ್ತದೆಂದು ಹೇಳಲು ಆಗುವುದಿಲ್ಲ. ಅದು ಆಗದಿದ್ದರೆ ಅವನು ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯುತ್ತಿಲ್ಲ ಎಂದು ಹೇಳಲಾಗುವುದಿಲ್ಲ. ಅನೇಕರು ಭಕ್ತಿಯ ಕಥೆಗಳನ್ನು ಕೇಳಿದಾಗ ಕಣ್ಣೀರನ್ನು ಸುರಿಸಬಹುದು. ಇದೊಂದೇ ಭಕ್ತಿಯ ಕುರುಹಲ್ಲ. ಅವನು ಹಾಗೆಯೆ ಇಂದ್ರಿಯ ಚಾಪಲ್ಯದ ವಿಷಯಗಳನ್ನು ಕೇಳಿದಾಗ ಅದರ ವಶಕ್ಕೂ ಸಿಕ್ಕಬಹುದು. ಒಬ್ಬನು ಪರಮಾತ್ಮನೆಡೆಗೆ ಹೋಗುತ್ತಿರುವನು ಎನುವುದಕ್ಕೆ ಸುರಿಸುವ ಕಣ್ಣೀರಾಗಲೀ, ಕಣ್ಣಿಗೆ ಬೀಳುವ ದೃಶ್ಯಗಳಾಗಲೀ ಬಾಹ್ಯಪ್ರಜ್ಞೆ ಇಲ್ಲದೇ ಇರುವುದಾಗಲೀ ಮುಖ್ಯವಲ್ಲ. "ಒಬ್ಬನು ದೇವರನ್ನು ನೋಡಿರುವನು ಎಂದರೆ ಅವನ ತಲೆಗೆ ಎರಡು ಕೊಂಬು ಬರುವುದಿಲ್ಲ. ಅವನು ಸಾಧಾರಣ ಮನುಷ್ಯನಂತೆಯೇ ಇರುತ್ತಾನೆ. ಆದರೆ ಅವನ ದೃಷ್ಟಿಕೋಣ ಬದಲಾವಣೆ ಹೊಂದಿದೆ" ಎಂದು ಶ್ರೀ ಶಾರದಾ ದೇವಿಯವರು ಹೇಳುತ್ತಿದ್ದರು. ಪ್ರಪಂಚ, ಬದ್ಧನಿಗೆ ಸುಖದುಃಖಗಳ ತುಮುಲವಾಗಿ ಕಾಣುವುದು. ಒಳ್ಳೆಯದು ಕೆಟ್ಟದರ ಮಿಶ್ರದಂತೆ ಇರುವುದು. ಜೀವಿಗಳನ್ನು ಶಿಕ್ಷಿಸುವ ಒಂದು ಸೆರೆಮನೆಯಂತೆ ಕಾಣುವುದು. ಅದೇ ಪ್ರಪಂಚ, ಮುಕ್ತನಿಗೆ ಪರಮಾತ್ಮನ ಆಟದ ಭೂಮಿಯಂತೆ ಕಾಣುವುದು. ಸರ್ವ ಜೀವಿಗಳು ನಾನಾರೂಪು ಧರಿಸಿದ ಶಿವನಂತೆ ತೋರುವರು. ಸರ್ವ ಮಾನವನ ದೇಹವೂ ಅದು ಪಾಪಿಯದಾಗಲೀ, ಯತಿಯದಾಗಲೀ, ಕುರೂಪದ ಬೀಡಾಗಲೀ, ಸೌಂದರ್ಯದ ನೆಲವೀಡಾಗಲೀ, ಎಲ್ಲವೂ ಪರಮಾತ್ಮನು ವಾಸಿಸುವ ಮತ್ತು ಚಲಿಸುತ್ತಿರುವ ಗುಡಿಗಳಂತೆ ಕಾಣು

ವುವು. ಇಂತಹ ಅನುಭವದ ಶಿಖರಕ್ಕೆ ಶ್ರೀ ಶಾರದಾದೇವಿಯವರು ಶ್ರೀರಾಮಕೃಷ್ಣರ ಹರಕೆಯ ಬಲದಿಂದಲೂ, ತಮ್ಮ ಸ್ವಪ್ರಯತ್ನದ ಶ್ರಮ ದಿಂದಲೂ ಏರಿದ್ದರು. ಮುಂದಿನ ಜೀವನದಲ್ಲಿ ಅವರು ಜಗದ ಸುಖ ದುಃಖಗಳನ್ನು ಹೇಗೆ ಎದುರಿಸುತ್ತಿದ್ದರು. ಪತಿತರನ್ನು ಕಂಡಾಗ ಎಷ್ಟು ಸಹಾನುಭೂತಿ ಪ್ರೀತಿ ಅವರ ಎದೆಯ ಚಿಲುಮೆಯಲ್ಲಿ ಜಿನುಗುತ್ತಿತ್ತು ಎನ್ನುವುದಕ್ಕೆ ಸಾಕಾದಷ್ಟು ನಿದರ್ಶನಗಳು ಬರುವುವು.

ಶ್ರೀರಾಮಕೃಷ್ಣರು ಭಾವಪರವಶತೆಯ ಹೆಸರಿನಲ್ಲಿ ಸೋಮಾರಿತನ, ಅಸಡ್ಡೆ, ಮರವು ಇವನ್ನು ನಮ್ಮ ವ್ಯವಹಾರದಲ್ಲಿ ಕಂಡರೆ ಖಂಡಿಸದೇ ಬಿಡುತ್ತಿರಲಿಲ್ಲ. ಶ್ರೀ ಶಾರದಾದೇವಿಯವರಿಗೆ ಜಪತಪಧ್ಯಾನಗಳ ವಿಷಯ ವಾಗಿ ಹೇಗೆ ಬುದ್ಧಿವಾದಗಳನ್ನು ಹೇಳುತ್ತಿದ್ದರೋ ಹಾಗೆಯೇ ಮನೆ ಕೆಲಸದಲ್ಲಿ ಹೇಗೆ ಇರಬೇಕೆಂಬುದನ್ನೂ ಹೇಳುತ್ತಿದ್ದರು. ನಾವು ಕಣ್ಣು ಮುಚ್ಚಿ ಕೊಂಡು ದೇವರ ಕೋಣೆಯಲ್ಲಿ ಧ್ಯಾನಮಾಡುತ್ತಿದ್ದಾಗ ಮಾತ್ರ ಆತನ ಹತ್ತಿರ ಇರುವೆವು. ಬೇರೆ ಕೆಲಸಗಳನ್ನು ಮಾಡುತ್ತಿರುವಾಗ ಹೇಗೆ ಬೇಕಾದರೂ ಇರಬಹುದು ಎಂದು ಹೇಳಲಾಗುವುದಿಲ್ಲ. ಕರ್ಮಯೋಗಿಗೆ ದೇವರ ಅರ್ಚನೆ ಎಷ್ಟು ಉತ್ತಮವೋ, ಪರಕೆಯಿಂದ ಕಸಗುಡಿಸುವುದೂ ಅಷ್ಟೇ ಉತ್ತಮ. ಯಾವ ಸಾಧಾರಣ ಕೆಲಸವನ್ನಾದರೂ ಕೂಡ ನಾವು ಮನಸ್ಸಿಟ್ಟು ಏಕಾಗ್ರತೆಯಿಂದ ಸ್ವಾರ್ಥವಿಲ್ಲದೆ ಮಾಡಿದರೆ ಅದೇ ನಮ್ಮ ಚಿತ್ತವನ್ನು ಶುದ್ಧಿಮಾಡುವುದು. ಅದಕ್ಕಾಗಿ ಶ್ರೀ ಶಾರದಾದೇವಿಯವರಿಗೆ ನಾನಾ ಸಲಹೆಗಳನ್ನು ಕೊಡುತ್ತಿದ್ದರು. ಮನೆ ಪಾತ್ರೆಗಳನ್ನು ಜೋಡಿಸು ವಾಗ ಯಾವ ಯಾವ ಪಾತ್ರೆಗಳನ್ನು ಎಲ್ಲಿ ಇಡಬೇಕು ಎನ್ನುವುದನ್ನು ಮೊದಲೇ ಯೋಚಿಸಬೇಕು; ಯಾವುದು ಹೆಚ್ಚು ಬಳಕೆಯಲ್ಲಿ ಇರುತ್ತ ದೆಯೋ ಅದು ಹತ್ತಿರಸಿಕ್ಕುವಂತೆ ಇರಬೇಕು; ಯಾವುದಾದರೂ ಸಾಮಾ ನನ್ನು ಅದರ ಸ್ಥಳದಿಂದ ತೆಗೆದರೆ ಪುನಃ ಅದೇ ಸ್ಥಳದಲ್ಲಿ ಇಡಬೇಕು; ನಾವು ಕತ್ತಲಲ್ಲಿ ಹೋಗಿ ಕೈಯಿಟ್ಟರೂ ಅದು ನಮಗೆ ಸಿಕ್ಕುವಂತೆ ಇರ ಬೇಕು. ದೇವರ ಮಂಗಳಾರತಿಗೆ ಹೂವಿನ ಬತ್ತಿಯನ್ನು ಹೇಗೆ ಮಾಡ ಬೇಕು, ಅಡಿಗೆಗೆ ತರಕಾರಿಯನ್ನು ಹೇಗೆ ಹೆಚ್ಚಬೇಕು, ವಿಳ್ಳೇದೆಲೆಯನ್ನು ಹೇಗೆ ಮಡಿಸಬೇಕು, ಯಾವ ಯಾವ ಅಡಿಗೆಯನ್ನು ಹೇಗೆ ಹೇಗೆ ಮಾಡ ಬೇಕು ಎಂಬುದನ್ನೂ ಹೇಳುತ್ತಿದ್ದರು. ಅವರು ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಪಟ್ಟ ವಿಷಯಗಳಿಗೆ ಯಾವ ಆಸಕ್ತಿಯನ್ನು ವಹಿಸುತ್ತಿದ್ದರೋ ಅದೇ ಪ್ರಾಮುಖ್ಯತೆಯನ್ನೇ ಮನೆಕೆಲಸಗಳಿಗೆ ಕೊಟ್ಟು ಕಲಿಸುತ್ತಿದ್ದರು.

ದೋಣಿಯನ್ನು ಹತ್ತುವಾಗ ಮನೆಯ ಯಜಮಾನಿ ಮೊದಲು ಹತ್ತಬೇಕು ಇಳಿಯುವಾಗ ಕೊನೆಗೆ ಇಳಿಯಬೇಕು. ಆಗ ಮಾತ್ರ ಎಲ್ಲ ಸಾಮಾನು ಬಂದಿವೆಯೆ ಮತ್ತು ಎಲ್ಲ ಸಾಮಾನನ್ನೂ ಇಳಿಸಿವೆಯೆ ಎಂದು ಗೊತ್ತಾಗು ವುದು. ಸಮಾಜದಲ್ಲಿ ನಾವು ಶಾಂತಿಯಿಂದ ಇರಬೇಕಾದರೆ ಕಾಲ, ದೇಶ, ಸನ್ನಿವೇಶಗಳನ್ನು ನೋಡಿ ಯಾರ ಯಾರ ಮುಂದೆ ಹೇಗೆ ಹೇಗೆ ವ್ಯವಹರಿಸ ಬೇಕೆಂಬುದನ್ನು ತಿಳಿದು ಹಾಗೆ ನಡೆದುಕೊಳ್ಳಬೇಕು. ಎಲ್ಲರ ದೇಹ ದಲ್ಲಿಯೂ ಒಂದೇ ಮೂಳೆ ಮಾಂಸ ರಕ್ತಗಳಿದ್ದರೂ ಅದರ ಹಿಂದೆಲ್ಲ ಹಲವು ಬಗೆ ಮನಸ್ಸಿವೆ. ಅದಕ್ಕೋಸ್ಕರವಾಗಿಯೇ ನಾವು ನಮ್ಮ ಗೆಳೆಯ ರನ್ನು ಆರಿಸಿಕೊಳ್ಳುವಾಗ ಬಹಳ ಜಾಗರೂಕರಾಗಿರಬೇಕು. ಕೆಲವ ರೊಂದಿಗೆ ಸದರದಿಂದ ಬೆರೆತು ಮಾತನಾಡಬಹುದು. ಕೆಲವರೊಡನೆ ಉಂಟು ಇಲ್ಲ ಎಂಬ ಎರಡು ಮಾತನ್ನು ಆಡಿದರೆ ಸಾಕು. ಮತ್ತೆ ಕೆಲವ ರೊಂದಿಗೆ ಮಾತನಾಡದೆ ಇರುವುದೇ ಒಳ್ಳೆಯದೆಂದು ಹೇಳುತ್ತಿದ್ದರು.

ಈ ಮಹಾಪುರುಷರ ಸಮೀಪದಲ್ಲಿದ್ದು ಅವರ ಮನಸ್ಸಿನ ದಿವ್ಯಭಾವ ಗಳಲ್ಲಿ ಭಾಗವಹಿಸಲು ಯತ್ನಿಸುವುದಕ್ಕಿಂತ ದೊಡ್ಡ ತಪಸ್ಸಿದೆಯೆ? ಇಂತಹ ಒಂದು ಮಹಾ ಸೌಭಾಗ್ಯ ಶ್ರೀ ಶಾರದಾದೇವಿಯವರ ಪಾಲಿಗೆ ಒದಗಿತು. ಶ್ರೀರಾಮಕೃಷ್ಣರ ಜೀವನದಲ್ಲಿ ಯಾವ ಉದಾತ್ತ ಗುಣಗಳು ಬೆಳಗುತ್ತಿದ್ದವೋ ಅದೆಲ್ಲವನ್ನೂ ಶ್ರೀ ಶಾರದಾದೇವಿಯವರು ತಮ್ಮ ಜೀವನದಲ್ಲಿಯೂ ಪೋಷಿಸಿದರು. ಸುಗುಣಗಳ ಮೊಗ್ಗನ್ನು ಅರಳಿಸಿದರು. ಅದರ ಪರಿಮಳವನ್ನು ಭವಸಂಕಟದಲ್ಲಿ ಸಿಕ್ಕಿ ನೊಂದು ಇವರ ಸಮೀಪಕ್ಕೆ ಬಂದ ಜೀವರಿಗೆಲ್ಲ ಬೀರಿದರು.



## ೮. ಪತಿ ಸೇವೆ

"ಯೋಗಃ ಕರ್ಮಸು ಕೌಶಲಂ" ಕರ್ಮದಲ್ಲಿ ತೋರುವ ಕೌಶಲ್ಯವೇ ಯೋಗವೆಂದು ಶ್ರೀಕೃಷ್ಣ ಗೀತೆಯಲ್ಲಿ ಸಾರುತ್ತಾರೆ. ಜಗದಲ್ಲಿ ಎಲ್ಲರೂ ಕರ್ಮವನ್ನೇನೋ ಮಾಡುತ್ತಲೇ ಇರುತ್ತಾರೆ. ಆದರೆ ಎಷ್ಟು ಜನ ಬಂಧನದಿಂದ ತಪ್ಪಿಸಿಕೊಳ್ಳಲು ಕರ್ಮ ಮಾಡುತ್ತಾರೆ? ಒಂದು ಕೆಲಸ ವನ್ನು ಮಾಡಿಯೂ ಅದರ ಪರಿಣಾಮಕ್ಕೆ ಬೀಳದೇ ಇರುವುದೇ ಕರ್ಮ ಯೋಗ. ನಾವು ಎಲ್ಲಿಯವರೆವಿಗೂ ಕೆಲಸವನ್ನು ಸ್ವಾರ್ಥ ದೃಷ್ಟಿಯಿಂದ ಮಾಡುತ್ತೇವೆಯೋ ಅಲ್ಲಿಯವರೆಗೆ ಬಂಧನದಿಂದ ಬಿಡುಗಡೆ ಹೊಂದುವು ದಿಲ್ಲ. ನಾವು ಎಂದು ಅದೇ ಕೆಲಸವನ್ನು ಸ್ವಾರ್ಥಹೀನ ದೃಷ್ಟಿ ಯಿಂದ ಮಾಡುತ್ತೇವೆಯೋ ಆಗ ಅದೇ ನಮ್ಮನ್ನು ಬಂಧವಿಮುಕ್ತರನ್ನಾಗಿ ಮಾಡುವುದು. ರೇಷ್ಮೆಯಹುಳು ತನ್ನ ತಂತುವಿನಿಂದ ಗೂಡನ್ನು ನೆಯ್ದು ಅದರಲ್ಲಿ ಬಂಧಿಯಾಗುವುದು. ಪುನಃ ಚಿಟ್ಟೆಯಾಗಿ ಆ ಗೂಡನ್ನು ಸೀಳಿ ಬರುವುದು. ಇದರಂತೆಯೇ ನಾವು ಸ್ವಾರ್ಥಕರ್ಮ ತಂತುವಿನಿಂದ ಗೂಡನ್ನು ನೆಯ್ದು ಅದರಲ್ಲಿ ಬದ್ಧರಾಗುವೆವು. ಪುನಃ ನಿಸ್ವಾರ್ಥತೆಯಿಂದ ಕರ್ಮಮಾಡಿ ಸ್ವಾರ್ಥದ ಸೆರೆಮನೆಯಿಂದ ಪಾರಾಗಬೇಕು. ಎರಡಕ್ಕೂ ಕರ್ಮ ಆವಶ್ಯಕ. ಒಂದು ನಮ್ಮನ್ನು ಬಂಧಿಸುವುದು. ಮತ್ತೊಂದು ನಮ್ಮ ಬಂಧನವನ್ನು ಖಂಡಿಸುವುದು. ಯಾರು ಹೀಗೆ ಕರ್ಮಮಾಡು ವುದನ್ನು ಕಲಿತಿರುವರೋ ಅವರು, ಜ್ಞಾನಿ ಕೊನೆಗೆ ಯಾವ ಗುರಿಯನ್ನು ಸೇರುವನೋ ಅದೇ ಗುರಿಯೆಡೆಗೆ ಹೋಗುವರು. ಒಬ್ಬನು ನಿರಕ್ಷರಕುಕ್ಷಿ ಯಾಗಿರಬಹುದು. ಆದರೇನು, ಸ್ವಾರ್ಥಹೀನವಾದ ಸೇವೆಮಾಡಿದರೆ ಘನಪಂಡಿತರ ಕಣ್ಣಿಗೂ ಕಾಣದ ಸತ್ಯ ಇವನಿಗೆ ಕಾಣುತ್ತದೆ. ಶ್ರೀ ಶಾರದಾ ದೇವಿಗೆ ಶ್ರೀರಾಮಕೃಷ್ಣರು ಪತಿಗಳಾಗಿದ್ದರು, ಗುರುಗಳಾಗಿದ್ದರು, ಇವರ ಆರಾಧನೆಯ ಇಷ್ಟದೈವವಾಗಿದ್ದರು. ಅವರು ವೇದ ಉಪನಿಷತ್ತುಗಳನ್ನು ಓದಿ ತಿಳಿದುಕೊಳ್ಳಬೇಕಾದ ಮಹಾತತ್ತ್ವಗಳನ್ನು ತಮ್ಮ ಪತಿಯನ್ನು ನಿಸ್ವಾರ್ಥಪ್ರೇಮದಿಂದ, ಭಕ್ತಿಯಿಂದ ಸೇವೆಮಾಡಿ ತಿಳಿದಿದ್ದರು. ಪತಿ ಗೋಸುಗ ಮಾಡುವ ಪ್ರತಿಯೊಂದು ಸಣ್ಣ ಕೆಲಸವೂ ಕೂಡ ಅವರಿಗೆ ಪೂಜೆಯಂತೆ ಇತ್ತು, ಯೋಗವಾಗಿತ್ತು. ಇದರಿಂದಲೇ ಅವರು ಪರಮ ಪದಕ್ಕೆ ಏರಿದ್ದರು.

ಶ್ರೀ ಶಾರದಾದೇವಿಯವರು ಸುಮಾರು ೧೩ ವರುಷ ಶ್ರೀರಾಮಕೃಷ್ಣ ರೊಂದಿಗೆ ಕಳೆದರು. ಮಧ್ಯೆ ಮಧ್ಯೆ ಅವರು ಕೆಲವು ವೇಳೆ ತಮ್ಮ ತೌರು

ಮನೆಗೆ ಹೋಗಿಬರುತ್ತಿದ್ದರು. ಅದಲ್ಲದೆ ಬೇರೆ ಎಲ್ಲಿಗೂ ಹೋಗುತ್ತಿರಲಿಲ್ಲ. ಪತಿಯಿರುವ ತನಕ ಅವರ ಸೇವೆಯೇ ದೊಡ್ಡ ಪೂಜೆಯಾಗಿತ್ತು. ಅವರ ಸಾನ್ನಿಧ್ಯವೇ ದೊಡ್ಡ ಪುಣ್ಯಸ್ಥಳವಾಗಿತ್ತು. ಅವರು ಮೀಯುವ ನದಿಯೇ ಪರಮ ಪವಿತ್ರ ತೀರ್ಥವಾಗಿತ್ತು.

ಶ್ರೀ ರಾಮಕೃಷ್ಣರ ಕೋಣೆಯಿಂದ ಸುಮಾರು ೫೦ ಗಜಗಳ ದೂರದಲ್ಲಿ ಗಂಗಾ ನದಿಯ ಪಕ್ಕದಲ್ಲಿ ಎರಡು ಅಂತಸ್ತಿನ ಎರಡು ಕೋಣೆಗಳುಳ್ಳ ನಹಬತ್‌ಖಾನೆ ಎಂಬ ವಾದ್ಯದ ಮನೆಯಿದೆ. ಅದರ ಕೆಳಗಿನ ಕೋಣೆಯಲ್ಲಿಯೇ ಶ್ರೀ ಶಾರದಾದೇವಿಯವರು ತಮ್ಮ ವಿಶೇಷ ಕಾಲವನ್ನು ಕಳೆದರು. ಮೇಲಿದ್ದ ಕೋಣೆಯಲ್ಲಿ ಶ್ರೀ ರಾಮಕೃಷ್ಣರ ತಾಯಿ ತಮ್ಮ ಜೀವನದ ಕೊನೆಯ ದಿನಗಳನ್ನು ಕಳೆದರು. ಅವರು ತಮ್ಮ ಪತಿಗೂ ವಯಸ್ಸಾದ ಅತ್ತೆಗೂ ಅಡಿಗೆ ಮಾಡುತ್ತಿದ್ದುದರಿಂದ ಆ ಕಿರಿಯ ಕೋಣೆಯೇ ಅಡಿಗೆಮನೆ, ಉಗ್ರಾಣ, ಮಲಗುವ ಮನೆಯಾಗಿತ್ತು. ಅಕ್ಕಿ ಚೀಲ, ತರಕಾರಿ, ಪಾತ್ರೆಗಳು ಇವುಗಳ ಮಧ್ಯೆ ಮಲಗಬೇಕಾಗಿತ್ತು. ಹೊರಗಡೆಯ ಅಂಗಳದ ಸುತ್ತಲೂ ಬಂಬಿನ ತಟ್ಟಿಯನ್ನು ಕಟ್ಟಿದ್ದರು. ಬಂದವರೆಲ್ಲಾ ಹೆಂಗಸರನ್ನು ನೋಡದೆ ಇರಲಿ ಎಂಬುದೇ ಇದರ ಮುಖ್ಯ ಉದ್ದೇಶ. ಬೇರೆ ಕೋಣೆಗೆ ಹೋಗುವಾಗ ಅನೇಕ ವೇಳೆ ಹಣೆಗೆ ಡಿಕ್ಕಿ ಹೊಡೆಯುತ್ತಿತ್ತು. ಒಂದು ದಿನ ಹೊಸದರಲ್ಲಿ ವೇಗದಿಂದ ಬರುವಾಗ ಬಾಗಿಲು ಹಣೆಗೆ ತಗುಲಿ ರಕ್ತ ಬಂತಂತೆ! ಅಂದಿನಿಂದ ಬಾಗಿಲಿನ ಹತ್ತಿರ ಬಂದರೆ ತಲೆ ತನ್ನಷ್ಟಕ್ಕೇ ತಾನೇ ತಗ್ಗುತ್ತಿತ್ತಂತೆ! ಕೆಲವು ವೇಳೆ ಶ್ರೀ ರಾಮಕೃಷ್ಣರನ್ನು ನೋಡಲು ಬಂದ ಗೃಹಿಣೀ ಭಕ್ತರು ಶ್ರೀ ಶಾರದಾಯವರ ದರ್ಶನಕ್ಕೆ ಬಂದಾಗ, ಇವರು ಇರುವ ಕೋಣೆಯನ್ನು ನೋಡಿ ಪಶ್ಚಾತ್ತಾಪದಿಂದ " ಅಯ್ಯೋ! ನಮ್ಮ ಶಾರದೆ ಸೀತೆ ರಾವಣನ ಹತ್ತಿರ ಸೆರೆಯಲ್ಲಿದ್ದಂತೆ ಇರುವಳಲ್ಲಾ!" ಎನ್ನುತ್ತಿದ್ದರಂತೆ.

ಶ್ರೀರಾಮಕೃಷ್ಣರಿಗೆ ತಮ್ಮ ಸತಿಗೆ ಇಷ್ಟು ಅನಾನುಕೂಲಗಳು ಇವೆ ಎಂಬುದು ತಿಳಿದಿದ್ದರೂ ಅದನ್ನು ಉತ್ತಮಗೊಳಿಸಲು ಸಾಧ್ಯವಾಗಲಿಲ್ಲ. ಆಗ ತಮ್ಮ ಸ್ನೇಹಿತ ಮಥುರನಾಥನು ಕಾಲವಾಗಿದ್ದನು. ಗುಡಿಯಲ್ಲಿ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದವನು, ಅವರಿಗೆ ಅಷ್ಟು ಪರಿಚಯವಿರಲಿಲ್ಲ. ಗುಡಿಯೇನೋ ವಿಶಾಲವಾಗಿ ಅನೇಕ ಕೊಠಡಿಗಳಿಂದ ಕೂಡಿದ್ದರೂ ಶ್ರೀ ಶಾರದಾದೇವಿಯವರು ಇಳಿದುಕೊಳ್ಳಲು ಯೋಗ್ಯವಾದ ಕೋಣೆಯಾವುದೂ ಇರಲಿಲ್ಲ. ಶ್ರೀಶಾರದಾದೇವಿಯವರು ಸ್ವಭಾವತಃ

ಲಜ್ಜಾ ಪ್ರಕೃತಿಯವರು. ಶ್ರೀರಾಮಕೃಷ್ಣರ ಮುಂದೆ ಕೂಡಾ ಬಂದ ಹೊಸದರಲ್ಲಿ ಮುಸುಗು ಹಾಕಿಕೊಂಡೇ ಹೋಗುತ್ತಿದ್ದರು. ಕತ್ತಲಲ್ಲಿ ಸುಮಾರು ಮೂರು ಘಂಟೆಗೆ ಎದ್ದು ಸ್ನಾನಾದಿಗಳನ್ನು ತೀರಿಸಿ ತಮ್ಮ ಕೋಣೆಗೆ ಹೋದರೆ, ಮಧ್ಯಾಹ್ನ ಸುಮಾರು ಒಂದು ಘಂಟೆಯವರೆವಿಗೂ ಅಂಗಳದ ಹತ್ತಿರ ಕೂಡಾ ಬರುತ್ತಿರಲಿಲ್ಲ. ಒಂದು ಘಂಟೆಯಾದಮೇಲೆ ಜನರು ಕಡಮೆಯಾದಾಗ ತಮ್ಮ ಒದ್ದೆಯ ಕೂದಲನ್ನು ಬಿಸಲಿಗೆ ಕಾಯಿಸಿ ಒಣಗಿಸುವುದಕ್ಕೋಸ್ಕರ ತಮ್ಮ ಕೋಣೆಯ ಮುಂದಿನ ಮೆಟ್ಟಿಲಮೇಲೆ ಕುಳಿತುಕೊಳ್ಳುತ್ತಿದ್ದರು. ಆಕೆ ಅಲ್ಲಿರುವರು ಎಂಬ ಸಮಾಚಾರ ಇವರ ಕೋಣೆಗೆ ಬಂದು ನೋಡಿದಾಗ ಗೊತ್ತಾಗುತ್ತಿತ್ತೇ ಹೊರತು, ಇಲ್ಲದಿದ್ದರೆ ಯಾರಿಗೂ ಗೊತ್ತಾಗುತ್ತಿರಲಿಲ್ಲ. ಒಂದು ದಿನ ಗುಡಿಯ ಅಧಿಕಾರಿಯೊಬ್ಬರು ಮತ್ತೊಬ್ಬರೊಂದಿಗೆ ಮಾತನಾಡುತ್ತಿದ್ದಾಗ "ಶ್ರೀ ಶಾರದಾದೇವಿಯವರು ಇಲ್ಲಿ ಇರುವರು ಎಂಬುದನ್ನು ಕೇಳಿರುವೆನೆ ಹೊರತು ಕಣ್ಣಾರ ಒಂದು ದಿನವೂ ನೋಡಿಲ್ಲ" ಎಂದು ಹೇಳಿದನು. ಶ್ರೀ ಶಾರದಾದೇವಿಯವರ ದಕ್ಷಿಣೇಶ್ವರದ ಜೀವನ, ಎಲೆಯ ಮರೆಯಲ್ಲಿ ಬೆಳೆದ ಮಲ್ಲಿಗೆಯ ಹೂವಿನಂತೆ ಇತ್ತು. ಮೊದಲು ಶ್ರೀರಾಮಕೃಷ್ಣರಿಗೆ ಶ್ರೀ ಶಾರದಾದೇವಿಯವರ ವಿಚಾರದಲ್ಲಿ ಸ್ವಲ್ಪ ಅಂಜಿಕೆ ಆಗುತ್ತಿತ್ತು. ಹಳ್ಳಿಯಿಂದ ಬಂದವರು ಪಟ್ಟಣವಾಸದ ಜನಗಳೊಂದಿಗೆ ಹೇಗೆ ನಡೆದುಕೊಳ್ಳಬೇಕೆಂಬುದು ತಿಳಿಯದು. ಎಲ್ಲರೆದುರಿಗೂ ಅವರು ಬಂದರೆ ಜನರು ಅವರನ್ನು ನೋಡಿ ಏನಾದರೂ ಅನ್ನುವರೋ ಏನೋ, ಆಗ ಇವರ ಮನಸ್ಸಿಗೆ ವ್ಯಥೆಯಾಗಬಹುದು ಎಂದು ಅಂಜಿದ್ದರು. ಆದರೆ ಶ್ರೀ ಶಾರದಾದೇವಿಯವರು ಇಷ್ಟು ಜೋಪಾನವಾಗಿ ಯಾರ ದೃಷ್ಟಿಗೂ ಬೀಳದೆ ಇರುವುದನ್ನು ನೋಡಿ ಸಂತೋಷವಾಯಿತು. ಶ್ರೀ ಶಾರದಾದೇವಿಯರು ಕೂಡ "ಅನೇಕ ಗಂಡಸರು ಸುತ್ತಮುತ್ತ ಇರುವವರು, ಇರುವವಳು ನಾನೊಬ್ಬ ಹೆಂಗಸು, ಮಾನವನ್ನು ಹೇಗಾದರೂ ಕಾಪಾಡು ದೇವರೇ!"—ಎಂದು ಪ್ರಾರ್ಥಿಸುತ್ತಿದ್ದರು.

ತಮ್ಮ ಕೆಲಸವಾದ ಮೇಲೆ ಹಗಲನ್ನು ಅನೇಕವೇಳೆ ಒಂಟಿಯಾಗಿ ಕಳೆಯಲು ಬೇಜಾರಾಗುತ್ತಿತ್ತು. ಶ್ರೀರಾಮಕೃಷ್ಣರ ಕೋಣೆಯ ಹತ್ತಿರ ಅನೇಕ ಭಕ್ತರು ಬಂದು ಕೀರ್ತನೆ, ನಾಟ್ಯ ಇವುಗಳಲ್ಲಿ ನಿರತರಾಗುತ್ತಿದ್ದರು. ಶ್ರೀ ಶಾರದಾದೇವಿಯವರು ಅಂಗಳದ ತಡಿಕೆಯ ಹತ್ತಿರ ನಿಂತು ಅದರಲ್ಲಿ ಸಣ್ಣ ಕಿಂಡಿಯನ್ನು ಮಾಡಿ ಇದನ್ನೆಲ್ಲಾ ನಿಂತುನೋಡುತ್ತಿದ್ದರು.

ಹೀಗೆಯೇ ಅನೇಕ ದಿನಗಳು ಬಹಳಕಾಲ ನಿಂತು ಅವರಿಗೆ ಕಾಲಿನಲ್ಲಿ ಸ್ವಲ್ಪ ನೋವು ಬಂದಿತಂತೆ. ಶ್ರೀರಾಮಕೃಷ್ಣರಿಗೆ ಇವರ ಕಷ್ಟ ಗೊತ್ತಾಗಿತ್ತು. ಅವರು ಇವರ ಸ್ಥಿತಿಗೆ ಮರುಗಿದರು. ಹಳ್ಳಿಯಲ್ಲಿ ಕಾಡಿನ ಹಕ್ಕಿಯಂತೆ ಕಾಲಕಳೆದವರು ; ಇಲ್ಲಿ ಒಂದು ಕೋಣೆಯಲ್ಲಿ ಸೆರೆಯಲ್ಲಿ ಕಾಲ ಕಳೆಯುವಂತೆ ಕಳೆಯಬೇಕಾಯಿತು. ಅವರೇ ಮಧ್ಯಾಹ್ನ ಊಟವಾದ ಮೇಲೆ ಒಂದು ಘಂಟೆ ಹೊತ್ತಿಗೆ ಹೊರಗೆ ಬಂದು ಜಾಸ್ತಿ ಜನಗಳಿಲ್ಲದಿದ್ದರೆ "ಎಲ್ಲಿಯಾದರೂ ನೆರೆಮನೆಗೆ ಹೋಗಿಬಾ, ಒಂದೇ ಕಡೇ ಕುಳಿತರೆ ಆರೋಗ್ಯ ಕೆಡುವುದು," ಎಂದು ಹೇಳಿ ಕಳುಹಿಸುತ್ತಿದ್ದರು. ಶ್ರೀ ಶಾರದಾದೇವಿಯವರು ನೆರೆಮನೆ ಹೆಂಗಸರೊಂದಿಗೆ ಮಾತನಾಡಿ ಸಂಜೆ ಮಂಗಳಾರತಿ ಆಗುವ ಸಮಯದಲ್ಲಿ ಹೊರಗೆ ಯಾರೂ ಇರದವೇಳೆ ಬರುತ್ತಿದ್ದರು.

ಇವರ ಕಷ್ಟವನ್ನು ನೋಡಿ ಶ್ರೀರಾಮಕೃಷ್ಣರ ಶಿಷ್ಯರೊಬ್ಬರು ಇವರಿಗೆ ಇಳಿದುಕೊಳ್ಳಲು ಒಂದು ಮನೆಯನ್ನು ಹೊರಗೆ ಕಟ್ಟಿಸಿಕೊಟ್ಟರು. ಶ್ರೀರಾಮಕೃಷ್ಣರು ಪ್ರತಿದಿನವೂ ಅಲ್ಲಿಗೆ ಹೋಗಿ ಎಲ್ಲಾ ಸರಿಯಾಗಿದೆಯೆ ಎಂದು ವಿಚಾರಿಸಿ ಬರುತ್ತಿದ್ದರು. ಆದರೆ ಒಂದು ದಿನ ಸಂಜೆ ಹೋದಾಗ ಮಾತ್ರ ದೊಡ್ಡ ಮಳೆ ಬಂದು ಹಿಂತಿರುಗಿ ಬರಲಾಗಲಿಲ್ಲ. ಅಂದಿನ ರಾತ್ರಿಯನ್ನು ಅಲ್ಲಿಯೇ ಕಳೆಯಬೇಕಾಯಿತು. ಆಗ ಶ್ರೀರಾಮಕೃಷ್ಣರು ನಗುತ್ತಾ, "ಗುಡಿಯ ಪೂಜಾರಿಗಳು ಪ್ರತಿದಿನವೂ ರಾತ್ರಿ ಮನೆಗೆ ಹೋಗುವಂತೆ ನಾನು ಇಂದು ಮಾಡಿದೆ" ಎಂದು ಹೇಳಿದರು. ಒಂದು ವರ್ಷವಾದಮೇಲೆ ಶ್ರೀರಾಮಕೃಷ್ಣರಿಗೆ ವಿಪರೀತ ಆಮಶಂಕೆಯ ರೋಗ ಪ್ರಾಪ್ತವಾದಾಗ ಅವರ ಹತ್ತಿರ ಶುಶ್ರೂಷೆಗೆ ಇರಬೇಕಾಗುವುದೆಂದು ತಿಳಿದು ಹಳೆಯಮನೆಗೆ ಬಂದವರು ಪುನಃ ಹೋಗಲಿಲ್ಲ.

ಶ್ರೀ ಶಾರದಾದೇವಿಯವರು ದಕ್ಷಿಣೇಶ್ವರದಲ್ಲಿ ಮಾಡುತ್ತಿದ್ದ ಬಹು ಮುಖ್ಯವಾದ ಕೆಲಸವೆಂದರೆ ಅಡಿಗೆ. ಶ್ರೀರಾಮಕೃಷ್ಣರ ಜೀರ್ಣ ಶಕ್ತಿ ಬಹಳ ಸೂಕ್ಷ್ಮವಾಗಿತ್ತು. ಅದಕ್ಕೋಸ್ಕರವೇ ಅವರಿಗೆ ಅಡಿಗೆ ಮಾಡುವಾಗ ಬಹಳ ಜೋಪಾನವಾಗಿ ಇರಬೇಕಾಗಿತ್ತು. ಶ್ರೀ ಶಾರದಾದೇವಿಯವರಿಂದಲ್ಲದೆ ಉಳಿದವರ ಕೈಯಲ್ಲಿ ಇದು ಆಗುತ್ತಿರಲಿಲ್ಲ. ಕೆಲವು ವೇಳೆ ಶ್ರೀ ಶಾರದಾದೇವಿಯವರು ತೌರುಮನೆಗೆ ಹೋದಾಗ ಉಳಿದವರು ಮಾಡಿದ ಅಡಿಗೆಯನ್ನು ಊಟಮಾಡಿ ಶ್ರೀರಾಮಕೃಷ್ಣರಿಗೆ ಖಾಯಿಲೆ ಬರುತ್ತಿತ್ತು. ಆಗ ಪುನಃ ಶ್ರೀ ಶಾರದಾದೇವಿಯವರನ್ನು ಕರೆಕಳುಹಿಸುತ್ತಿದ್ದರು. "ನನ್ನ ಹಾಗೆ ಇರುವವನಿಗೆ ಹೆಂಡತಿ ಎಂದರೆ ಏನು ಅರ್ಥ

ಮಾಡಿಕೊಂಡಿರಿ. ಒಬ್ಬ ಅಡಿಗೆ ಮಾಡುವಳಲ್ಲದೆ ಮತ್ತೇನು ?" ಎಂದು ನಕ್ಕರು. "ಆಕೆ ಇಲ್ಲದಿದ್ದರೆ ನನ್ನ ಆರೋಗ್ಯಕ್ಕೆ ತಕ್ಕ ಆಹಾರವನ್ನು ಯಾರು ಕೊಡುತ್ತಿದ್ದರು ?" ಎಂದರು.

ಬಂದ ಹೊಸವರಲ್ಲಿ ಶ್ರೀ ಶಾರದಾದೇವಿಯವರು, ಶ್ರೀರಾಮಕೃಷ್ಣರು ಮತ್ತು ಅವರ ತಾಯಿ ಇವರಿಗೆ ಮಾತ್ರ ಅಡಿಗೆಮಾಡಬೇಕಾಗಿತ್ತು. ಇವರ ಅತ್ತೆಯವರು ತಾವು ಇದ್ದ ಕೋಣೆಯ ಮೇಲಿನ ಕೋಣೆಯಲ್ಲಿದ್ದರು. ಅವರು ತಮ್ಮ ಕೊನೆಯ ದಿನಗಳನ್ನು ಹತ್ತಿರವಲ್ಲೇ ಹರಿಯುವ ಗಂಗಾ ನದಿಯನ್ನು ನೋಡಿ ಪ್ರಾಣಬಿಡಬೇಕೆಂದು ಆಶಿಸುತ್ತಿದ್ದರಂತೆ. ಶ್ರೀ ಶಾರದಾದೇವಿಯವರಿಗೆ ತುಂಬಾ ಕೆಲಸಗಳಿದ್ದರೂ, ಅತ್ತೆಯವರು ಇವರ ಹೆಸರಿನ ಮೊದಲನೆಯ ಅಕ್ಷರವನ್ನು ಉಚ್ಚರಿಸುವುದೇ ತಡ, ಆಗಲೇ ಕೆಳಗಿನಿಂದ ಮೇಲೆ ಓಡಿಬರುತ್ತಿದ್ದರು. ಇದನ್ನು ನೋಡಿ ಪರಮಹಂಸರ ಗೃಹಿಣೀ ಶಿಷ್ಯಳೊಬ್ಬಳು, "ಇಷ್ಟು ಅವಸರದಿಂದ ಏಕೆ ಓಡಿಬರುತ್ತೀರಿ ? ದಾರಿಯಲ್ಲಿ ನೀವು ಮೆಟ್ಟಲನ್ನು ಎಡವಿಬೀಳುತ್ತೀರಿ!" ಎಂದಳು. ಅದಕ್ಕೆ ಶ್ರೀ ಶಾರದಾದೇವಿಯವರು "ಆಕೆ ನನ್ನ ಗುರು, ನನ್ನ ತಾಯಿ, ಆಗಲೇ ಅವರಿಗೆ ಅಷ್ಟು ವಯಸ್ಸಾಗಿದೆ. ಅವರು ನನ್ನನ್ನು ಕರೆದ ತಕ್ಷಣವೇ ಹೋಗದಿದ್ದರೆ ತೊಂದರೆಗೆ ಒಳಗಾಗಬಹುದು. ಅವರ ಸಹಾಯಕ್ಕೋಸುಗ ಹೋಗುವಾಗ ಒಂದುವೇಳೆ ಎಡವಿಬಿದ್ದರೇನಂತೆ ?" ಎಂದರು. ಅವರು ಶ್ರೀರಾಮಕೃಷ್ಣರ ತಾಯಿಯನ್ನು ಅತ್ತೆಯಂತೆ ಕಾಣುತ್ತಿರಲಿಲ್ಲ, ಅವರ ಪಾಲಿಗೆ ಅವರು ಗುರುಗಳಾಗಿದ್ದರು. ಪೂಜ್ಯತಮ ತಾಯಿಯಾಗಿದ್ದರು. ಗಂಡನಿಗೆ ಚಾಡಿ ಹೇಳುವರು ಎಂಬ ಅಂಜಿಕೆಯಿಂದ ಅವರಿಗೆ ಶುಶ್ರೂಷೆ ಮಾಡುತ್ತಿರಲಿಲ್ಲ. ಪ್ರೀತಿಯ ಶಿಷ್ಯಳಂತೆ, ಹೊಟ್ಟೆಯಲ್ಲಿ ಹುಟ್ಟಿದ ಮಗಳಂತೆ ವರ್ತಿಸುತ್ತಿದ್ದರು.

ಕೆಲವು ದಿನಗಳಾದಮೇಲೆ ಶ್ರೀರಾಮಕೃಷ್ಣರ ಕೀರ್ತಿ ಕಲ್ಕತ್ತಾ ನಗರದಲ್ಲೆಲ್ಲಾ ಹಬ್ಬತೊಡಗಿತು. ಅನೇಕ ಭಕ್ತಾದಿಗಳು ಇವರನ್ನು ನೋಡಲು ಬರುತ್ತಿದ್ದರು. ಅವರಿಗೆಲ್ಲಾ ಅಡಿಗೆ ಮಾಡುವ ಭಾರ ಇವರ ಮೇಲೆ ಬೀಳುತ್ತಿತ್ತು. ಕೆಲವು ವೇಳೆ ಮೂರು ವೀಸೆಯ ಗೋಧಿಹಿಟ್ಟಿನ ರೊಟ್ಟಿಯನ್ನು ಮಾಡಬೇಕಾಗಿತ್ತು. ಲೆಕ್ಕವಿಲ್ಲದಷ್ಟು ಪಾನುಗಳನ್ನು ಮಾಡಿ ಇಡಬೇಕಾಗಿತ್ತು. ಇದಲ್ಲದೆ ಶ್ರೀ ರಾಮಕೃಷ್ಣರು ಕುಡಿಯುವ ಹಾಲನ್ನು ಚೆನ್ನಾಗಿ ಕಾಯಿಸಿ ಇಂಗಿಸುವುದೇ ಬಹಳ ಕಾಲ ಹಿಡಿಯುತ್ತಿತ್ತು. ಲಟು ಎಂಬ ಶ್ರೀ ರಾಮಕೃಷ್ಣರ ಶಿಷ್ಯನೊಬ್ಬನು ಇವರ

ಸಹಾಯಕ್ಕೆ ಆಗ ಇರುತ್ತಿದ್ದನು. ಆಗತಾನೇ ನರೇಂದ್ರನಾಥರು (ಸ್ವಾಮಿ ವಿವೇಕಾನಂದರು) ಬಂದು ಹೋಗುತ್ತಿದ್ದರು. ಒಂದು ದಿನ ಶ್ರೀ ರಾಮ ಕೃಷ್ಣರು ಶ್ರೀ ಶಾರದಾದೇವಿಯವರಿಗೆ ನರೇಂದ್ರನು ಊಟಕ್ಕೆ ಇರುತ್ತಾನೆ ಎಂದು ಹೇಳಿಕಳುಹಿಸಿದರು. ಶ್ರೀ ಶಾರದಾದೇವಿಯವರು ಶ್ರೀ ರಾಮ ಕೃಷ್ಣರಿಗೆ ಮಾಡುವಂತೆ ತೆಳ್ಳಗಿರುವ ರೊಟ್ಟಿ, ಸಪ್ಪೆಯ ಬೇಳೆಯ ತೊವ್ವೆ, ಇವನ್ನು ಮಾಡಿ ಬಡಿಸಿದರು. ಊಟವಾದಮೇಲೆ ಶ್ರೀ ರಾಮಕೃಷ್ಣರು ನರೇಂದ್ರನನ್ನು "ಅಡಿಗೆ ಹೇಗಿತ್ತು?" ಎಂದು ಕೇಳಿದರು. "ಅಡಿಗೆ ಯೇನೋ ಚೆನ್ನಾಗಿತ್ತು, ಆದರೆ ರೋಗಿಗಳ ಪಥ್ಯದ ಊಟದಂತೆ ಇತ್ತು" ಎಂದರು. ಶ್ರೀ ರಾಮಕೃಷ್ಣರು ನಕ್ಕು ಶ್ರೀ ಶಾರದಾದೇವಿಯವರಲ್ಲಿಗೆ ಹೋಗಿ "ನರೇಂದ್ರನಿಗೆ ನನಗೆ ಮಾಡುವಂತೆ ಅಡಿಗೆಮಾಡಿದರೆ ರುಚಿಸು ವುದಿಲ್ಲ. ದಪ್ಪ ರೊಟ್ಟಿ, ಘಟ್ಟಿಯಾದ ತೊವ್ವೆ, ಖಾರವಾದ ಪಲ್ಯವನ್ನು ಮಾಡಬೇಕು. ಅವನು ನನ್ನಂತೆ ಅತಿ ಸೂಕ್ಷ್ಮ ಜೀರ್ಣಶಕ್ತಿಯವನಲ್ಲ" ಎಂದು ಹೇಳಿದರು. ಮತ್ತೊಂದು ದಿನ ಅಡಿಗೆ ಮಾಡಿಸಿ ನರೇಂದ್ರನಿಗೆ ಬಡಿಸಿ ಶ್ರೀ ಶಾರದಾದೇವಿಯವರು ಚೆನ್ನಾಗಿ ಅಡಿಗೆ ಮಾಡುತ್ತಾರೆ ಎನ್ನಿಸಿಕೊಂಡರಂತೆ!

ಒಂದು ದಿನ ಕಲ್ಕತ್ತೆಯಿಂದ ಶ್ರೀ ರಾಮಕೃಷ್ಣರನ್ನು ನೋಡು ವುದಕ್ಕೆ ಪ್ರಖ್ಯಾತನಾದ ಒಬ್ಬ ಅತಿಥಿ ಬಂದಿದ್ದನು. ಅಷ್ಟುಹೊತ್ತಿಗೆ ಊಟ ಮುಗಿದುಹೋಗಿತ್ತು. ತರಕಾರಿ ಇರಲಿಲ್ಲ. ಏನು ಮಾಡ ಬೇಕೆಂದು ಆಲೋಚಿಸುತ್ತಿದ್ದರು. ಗೋಪಾಲಮಾ ಎಂಬಾಕೆ "ಏನಿದೆಯೋ ಅದನ್ನು ಹಾಕಿ ಅಡಿಗೆಮಾಡಿ. ಅದು ನಿಮ್ಮ ಕೈಗುಣದಿಂದ ಚೆನ್ನಾಗಿ ಆಗುವುದು" ಎಂದಳು. ಶ್ರೀ ಶಾರದಾದೇವಿಯವರು "ಅದು ಕೆಡಲಿ ಚೆನ್ನಾ ಗಿರಲಿ ಅದರಿಂದ ಬರುವ ನಿಂದೆ ಒಳ್ಳೆಯ ಹೆಸರೆಲ್ಲ ನಿನಗೆ ಸೇರಿದ್ದು" ಎಂದು ಹೇಳಿ, ಇದ್ದ ಒಂದೆರಡು ಕೋಸುಗಡ್ಡೆಯ ಹೊರ ಸಿಪ್ಪೆಯನ್ನು ಹಾಕಿ ಪಲ್ಯವನ್ನು ಮಾಡಿ ಕಳುಹಿಸಿದರು. ಅಂದು ಮಾಡಿದ ಪಲ್ಯ ಬಹಳ ರುಚಿಯಾಗಿತ್ತು ಎಂದು ಹೇಳಿದಾಗ, "ಅದೆಲ್ಲಾ ಗೋಪಾಲಮಾಗೆ ಸೇರಿದ್ದು. ಅವಳ ಭಕ್ತಿಯಿಂದ ಅದು ಅಷ್ಟು ರುಚಿಯಾಯಿತು" ಎಂದು ಹೇಳಿದರಂತೆ.

ಅವರ ಪ್ರತಿದಿನದ ಜೀವನ ಧ್ಯಾನ ಮತ್ತು ಸೇವಾಮಯವಾಗಿತ್ತು: ಬೆಳಿಗ್ಗೆ ಮೂರು ಘಂಟೆಗೆ ಎದ್ದು ಗಂಗಾನದಿಯಲ್ಲಿ ಮಿಂದು ಮಡಿ ಬಟ್ಟೆ ಉಟ್ಟು ಧ್ಯಾನಮಾಡುತ್ತಿದ್ದರು. ಅನಂತರ ಏಳು ಘಂಟೆಯಾದ ನಂತರ

ಶ್ರೀರಾಮಕೃಷ್ಣರ ಹತ್ತಿರ ಯಾರೂ ಭಕ್ತರಿಲ್ಲದೇ ಇದ್ದರೆ ಅವರಿಗೆ ಎಣ್ಣೆ ಹಚ್ಚಿ ಮೈಕೈಕಾಲುಗಳನ್ನು ಒತ್ತುತ್ತಿದ್ದರು. ಅವರು ಸ್ನಾನಕ್ಕೆ ಹೋದ ಮೇಲೆ ಬರುವವರೆಗೂ ವೀಳೆಯದೆಲೆಯನ್ನು ಮಡಿಸಿ ಇಡುತ್ತಿದ್ದರು. ನಂತರ ಅವರಿಗೆ ಊಟಕ್ಕೆ ಬಡಿಸುವುದು, ಅವರೊಂದಿಗೆ ಊಟಮಾಡುತ್ತಿದ್ದಾಗ ಏನಾದರು ಮಾತನಾಡಿ ಅವರ ಮನಸ್ಸನ್ನು ಸ್ವಲ್ಪ ವ್ಯವಹಾರಿಕ ಪ್ರಪಂಚದಮೇಲೆ ಬರುವಂತೆ ಮಾಡುತ್ತಿದ್ದರು. ಅವರಿಗೆ ಬಡಿಸುವಾಗ ಶ್ರೀ ಶಾರದಾದೇವಿಯವರು ತಮ್ಮ ಬುದ್ಧಿವಂತಿಕೆಯನ್ನೆಲ್ಲ ಖರ್ಚುಮಾಡುತ್ತಿದ್ದರು. ಶ್ರೀರಾಮಕೃಷ್ಣರು ಸಾಧಾರಣವಾಗಿ ಬಹಳ ಸ್ವಲ್ಪ ಊಟ ಮಾಡುತ್ತಿದ್ದರು. ತಟ್ಟೆಯಲ್ಲಿ ಸ್ವಲ್ಪ ಅನ್ನ ಹೆಚ್ಚುಕಂಡರೆ "ನಾನು ಅಷ್ಟೊಂದನ್ನು ತಿಂದು ಅರಗಿಸಿಕೊಳ್ಳಬಲ್ಲೆನೆ" ಎಂದು ಹೇಳುತ್ತಿದ್ದರು. ಅವರು ಕುಡಿಯುವ ಹಾಲನ್ನು ಕೂಡ ಚೆನ್ನಾಗಿ ಕಾಯಿಸಿ ಇಂಗಿಸಿ ಕೊಡುತ್ತಿದ್ದರು. ಇವರ ಪ್ರೀತಿಯ ಶುಶ್ರೂಷೆಯಿಂದ ಶ್ರೀರಾಮಕೃಷ್ಣರ ಆರೋಗ್ಯ ಉತ್ತಮಗೊಂಡಿತು. ಶ್ರೀರಾಮಕೃಷ್ಣರೇ ಒಂದುದಿನ ತಮ್ಮ ಶರೀರವನ್ನು ನೋಡಿ ಸ್ವಲ್ಪ ದೇಹ ತುಂಬಿಕೊಂಡಿರುವುದನ್ನು ಕಂಡು, "ನೋಡು, ನೀನು ಪ್ರೀತಿಯಿಂದ ಮಾಡಿದ ಅಡಿಗೆಯನ್ನು ಉಂಡು ನಾನು ದೃಢಕಾಯನಾಗುತ್ತಾ ಬರುತ್ತಿರುವೆನು" ಎಂದರು. ಇದನ್ನು ಕೇಳಿ ಶ್ರೀ ಶಾರದಾದೇವಿಯವರು ನಸುನಗುತ್ತಾ ತಮ್ಮ ಕೋಣೆಗೆ ಬಂದರಂತೆ.

ಶ್ರೀರಾಮಕೃಷ್ಣರಿಗೆ ಊಟ ಬಡಿಸಿದಮೇಲೆ ಶಾರದಾದೇವಿಯವರು ಸ್ವಲ್ಪ ಫಲಹಾರವನ್ನು ಮಾಡಿದ ನಂತರ ಬಂದ ಭಕ್ತರಿಗೆ ಕೊಡುವುದಕ್ಕೆ ವೀಳೆದೆಲೆಯಿಂದ ಪಾನುಗಳನ್ನು ಮಾಡಿಡುತ್ತಿದ್ದರು. ಅಗಲೇ ಯಾರಿಗೂ ಕೇಳದಂತೆ ತಮಗೆ ಬರುವ ಹಾಡುಗಳನ್ನು ಹೇಳಿಕೊಳ್ಳುತ್ತಿದ್ದರಂತೆ. ಮಧ್ಯಾಹ್ನ ಒಂದು ಘಂಟೆಗೆ ಊಟಮಾಡುತ್ತಿದ್ದರು. ನಂತರ ಸ್ವಲ್ಪ ಹೊತ್ತು ವಿಶ್ರಮಿಸಿ ಮುಂದಿನ ಮೆಟ್ಟಿಲಮೇಲೆ ಕುಳಿತು ಮೂರು ಘಂಟೆವರೆವಿಗೂ ತಮ್ಮ ಕೂದಲನ್ನು ಒಣಗಿಸುತ್ತಿದ್ದರು. ನಂತರ ದೀಪಗಳಿಗೆಲ್ಲಾ ಎಣ್ಣೆ ಹಾಕಿ ತಾವು ಜಡೆ ಹೆಣೆದುಕೊಂಡು ಮುಖವನ್ನು ತೊಳೆದು ಸಂಜೆ ಊಟಕ್ಕೆ ತರಕಾರಿ ಹೆಚ್ಚುತ್ತಿದ್ದರು. ಸಂಜೆಯ ಸಮಯದಲ್ಲಿ ದೇವಸ್ಥಾನದಲ್ಲಿ ಮಂಗಳಾರತಿ ಆಗುವ ಹೊತ್ತಿಗೆ ಇವರು ತಮ್ಮ ಕೋಣೆಯಲ್ಲಿದ್ದ ವಿಗ್ರಹದ ಎದುರು ದೀಪಗಳನ್ನು ಹಚ್ಚಿ ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದರು. ಹೀಗೆ ಕೆಲವುಕಾಲ ಕಳೆದಮೇಲೆ ರಾತ್ರಿ ಅಡಿಗೆಗೆ ಆರಂಭ. ನಂತರ

ಶ್ರೀರಾಮಕೃಷ್ಣರಿಗೆ ಆಹಾರವನ್ನು ಅವರ ಕೋಣೆಗೆ ತೆಗೆದುಕೊಂಡು ಹೋಗುವುದು. ಅನಂತರ ಇವರು ಊಟಮಾಡಿ ಸುಮಾರು ಹತ್ತು ಘಂಟೆಯ ಹೊತ್ತಿಗೆ ದೇವರ ಹೆಸರನ್ನು ಸ್ಮರಿಸುತ್ತ ಮಲಗುತ್ತಿದ್ದರು.

ಇದಲ್ಲದೆ ಶ್ರೀರಾಮಕೃಷ್ಣರನ್ನು ನೋಡುವ ಭಕ್ತರೆಲ್ಲಾ ಇವರ ಬಳಿಗೆ ಬಂದು ನಮಸ್ಕರಿಸಿ ಇವರ ಆಶೀರ್ವಾದಗಳನ್ನು ಪಡೆದು ಹೋಗುತ್ತಿದ್ದರು. ಅವರ ಕಷ್ಟಸುಖದ ಕಥೆಗಳನ್ನು ಕೇಳುವುದು, ಕೆಲವುವೇಳೆ ಒಳ್ಳೆಯ ಸಲಹೆಗಳನ್ನು ಹೇಳುವುದು, ಅವರೊಂದಿಗೆ ಪಶ್ಚಾತ್ತಾಪ ತೋರುವುದು, ಇವುಗಳೆಲ್ಲಾ ಅವರ ಅನುದಿನದ ಕೆಲಸದಲ್ಲಿ ಸೇರಿದ್ದುವು. ಕೆಲವು ಗೃಹಿಣೀಭಕ್ತರು ಬಂದರೆ ಒಂದೆರಡು ದಿನಗಳನ್ನು ಅಲ್ಲಿ ಕಳೆಯಲು ಮನಸ್ಸು ಮಾಡಿದಾಗ, ಅವರ ಸಣ್ಣ ಕೋಣೆಯಲ್ಲಿ ಅವರಿಗೂ ಸ್ಥಳವನ್ನು ಒದಗಿಸಿ ಕೊಡುತ್ತಿದ್ದರು.

ಹೀಗೆ ಅವರ ದಿನವೆಲ್ಲಾ ಕೆಲಸದಿಂದ ತುಂಬಿದ್ದರೂ ಸ್ವಲ್ಪವೂ ಗೊಣಗಾಡದೆ ಶ್ರೀರಾಮಕೃಷ್ಣರಿಗೆ ಸೇವೆಮಾಡುವುದೇ ತಮಗೆ ಒಂದು ಆನಂದವೆಂದು ತಿಳಿದಿದ್ದರು. ಅವರ ಬಳಿಗೆ ಅನೇಕವೇಳೆ ಹೋಗಿ ಶುಶ್ರೂಷೆಮಾಡಲು ಅಷ್ಟು ಅವಕಾಶ ಸಿಕ್ಕುತ್ತಿರಲಿಲ್ಲ ಎಂಬುದೇ ಅವರ ಕೊರತೆ. ಅವರು ಇಡೀ ದಿನದಲ್ಲಿ ಇವರೊಂದಿಗೆ ಮಾತನಾಡುತ್ತಿದ್ದುದು ಅವರಿಗೆ ಆಹಾರವನ್ನು ತೆಗೆದುಕೊಂಡು ಹೋದಾಗ ಮಾತ್ರ. ಒಂದು ಸಲ ಕೆಲವು ತಿಂಗಳವರೆವಿಗೂ ಈ ಅನುಕೂಲ ಇಲ್ಲದೇ ಹೋಯಿತು. ಒಂದು ದಿನ ಅನೇಕ ಜನ ಗಂಡಸರು ನೆರೆದಿದ್ದಾಗ ಗುಲಾಬ್‌ಮಾ ಎಂಬಾಕೆಗೆ ಆಹಾರವನ್ನು ತೆಗೆದುಕೊಂಡು ಬಾ ಎಂದು ಹೇಳಿದರಂತೆ. ಅಂದಿನಿಂದ ಅವರೇ ಆಹಾರವನ್ನು ತೆಗೆದುಕೊಂಡು ಹೋಗುತ್ತಿದ್ದರು. ಶ್ರೀ ಶಾರದಾದೇವಿಯವರ ಆರಾಧನೆಯ ಮೂರ್ತಿ ಶ್ರೀರಾಮಕೃಷ್ಣರು. ಅವರ ಸೇವೆಗೆ ಸಿಕ್ಕಿದ ಅವಕಾಶವನ್ನು ಇನ್ನೊಬ್ಬರು ತೆಗೆದುಕೊಂಡರೂ ಅಸೂಯೆಪಡುತ್ತಿರಲಿಲ್ಲ. "ನಾನೊಬ್ಬಳೇ ಧನ್ಯಳಾಗಬೇಕೆ. ಈಕೆಯೂ ಅವರಿಗೆ ಸೇವೆಮಾಡಿ ಧನ್ಯಳಾಗಲಿ" ಎಂಬ ಉದಾರಭಾವವನ್ನು ತೋರುತ್ತಿದ್ದರು. ಸತಿಪತಿಯರಿಬ್ಬರೂ ಐವತ್ತು ಗಜ ದೂರದಲ್ಲಿದ್ದರೂ ಕೆಲವು ವೇಳೆ ಶ್ರೀ ಶಾರದಾದೇವಿಯವರಿಗೆ ಎರಡು ತಿಂಗಳಿಗೊಮ್ಮೆ ಅವರ ದರ್ಶನ ಸಿಕ್ಕುತ್ತಿತ್ತಂತೆ. ಆಗ "ಪ್ರತಿದಿನ ಅವರನ್ನು ನೋಡುವ ಭಾಗ್ಯ ಎಲ್ಲಿಂದ ಬರಬೇಕು" ಎಂದು ನೊಂದೆದೆಗೆ ಸಮಾಧಾನ ಹೇಳಿಕೊಳ್ಳುತ್ತಿದ್ದರು. ಶ್ರೀರಾಮಕೃಷ್ಣರಿಗೆ ಅವರ ಹೃದಯದ ಉದ್ವೇಗ ಹೇಗೋ ತಿಳಿದು ಅದನ್ನು ಕ್ರಮೇಣ ಸರಿಪಡಿಸಿದರು.

## ೯. ವೈರಾಗ್ಯದ ಎದೆಯಲ್ಲಿ ಪ್ರೇಮಲತೆ

ಶ್ರೀರಾಮಕೃಷ್ಣರು ಮತ್ತು ಶ್ರೀ ಶಾರದಾದೇವಿಯವರಿಬ್ಬರೂ ಆದರ್ಶ ತಪಸ್ವಿಗಳು. ಇಬ್ಬರೂ ತಮ್ಮ ಜೀವನದ ಪುಷ್ಪವನ್ನು ಜಗನ್ಮಾತೆಯ ಪಾದಾರವಿಂದದಲ್ಲಿ ಅರ್ಪಣಮಾಡಿದ್ದರು. ಇಬ್ಬರೂ ಆಜನ್ಮ ಬ್ರಹ್ಮಚರ್ಯವ್ರತವನ್ನು ಧಾರಣೆಮಾಡಿದ್ದರು. ಇಬ್ಬರಲ್ಲಿಯೂ ತೀವ್ರ ವೈರಾಗ್ಯವಿತ್ತು. ಅನೇಕರು, ದಂಪತಿಗಳು ಸ್ವಲ್ಪವೂ ಕಾಯ ಸಂಬಂಧವನ್ನು ಇಟ್ಟುಕೊಳ್ಳದಿದ್ದರೆ ಪ್ರೀತಿ ಹೇಗೆ ಸಾಧ್ಯವೆಂದು ಕೇಳ ಬಹುದು. ಆದರೆ ನಿಸ್ವಾರ್ಥದ ವಿಮಲಪ್ರೇಮ ಚಿಲುಮೆ ಜಿನುಗುವುದು ವೈರಾಗ್ಯದ ಬಂಡೆಯಲ್ಲಿಯೇ ಎಂದು ಹೇಳಬೇಕಾಗುವುದು. ಎಲ್ಲಿ ದೇಹದ ಸಂಬಂಧವಿದೆಯೋ ಅಲ್ಲಿರುವುದು ಕಾಮಮಿಶ್ರವಾದ ಪ್ರೀತಿ. ಅಲ್ಲಿ ಸ್ವಾರ್ಥತೆ ನೆಲಸಿರುವುದು. ಎಲ್ಲಿ ಸ್ವಾರ್ಥಯಿರುವುದೋ ಅಲ್ಲಿ ಈಗ ಇದ್ದ ಪ್ರೇಮವೇ ಸರ್ವದಾ ಇರುವುದು, ಎಂದು ಹೇಳಲಾಗುವುದಿಲ್ಲ. ಸ್ವಾರ್ಥಿ, ತಾನು ಪ್ರೀತಿಸುವ ವಸ್ತುವಿನ ಸುತ್ತಲೂ ಅನುಮಾನದ ಬೇಲಿ ಯನ್ನು ಕಟ್ಟಿ ಸಂರಕ್ಷಿಸುವನು. ತಾನೇ ಆ ವಸ್ತುವಿಗೆ ಸಂಪೂರ್ಣ ಒಡೆಯನೆಂದು ಭಾವಿಸುವನು. ಸ್ವಾರ್ಥಸಾಧನೆಗೆ ಸ್ವಲ್ಪ ಅಡ್ಡಿ ಬಂದರೂ ಪ್ರೇಮ ದ್ವೇಷವಾಗಿ ಪರಿಣಮಿಸುವುದು. ಎಲ್ಲಿ ಪ್ರೇಮಕ್ಕೋಸುಗ ಪ್ರೇಮ ವಿದೆಯೋ, ಎಲ್ಲಿ ಎರಡು ಆತ್ಮಗಳು ಒಂದಾಗಿದೆಯೋ, ಅಲ್ಲಿ ಸ್ವಾರ್ಥತೆ ಸಂಪೂರ್ಣ ನಾಶವಾಗಿದೆ. ಅಲ್ಲಿ ಅನ್ಯೋನ್ಯ ಮನಸ್ತಾಪಗಳಿಗೆ ಕಾರಣ ವಿಲ್ಲ, ಕಲಹಗಳಿಲ್ಲ. ಶಾಂತಿ ಸೌಹಾರ್ದ ಸಹಾನುಭೂತಿಗಳು ತಾಂಡ ವಾಡುತ್ತಿರುತ್ತವೆ. ಇಬ್ಬರೂ ತಮ್ಮ ಮಿತಿಯನ್ನು ತಿಳಿದು ಅದರಂತೆ ಅನುಸರಿಸಿಕೊಂಡು ಹೋಗುವರು.

ಆಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಅತ್ಯಂತ ಮುಖ್ಯವಾದುದು. ಅದರ ತಳಹದಿಯ ಮೇಲೆಯೇ ಉಳಿದ ಬ್ರಹ್ಮಚರ್ಯ, ವಾನಪ್ರಸ್ಥ ಸನ್ಯಾಸಾಶ್ರಮಗಳು ನಿಂತಿವೆ. ತಳಹದಿ ಸರಿಯಾಗಿ ಇಲ್ಲದೇ ಇದ್ದರೆ ಉಳಿದವೆಲ್ಲ ಕುಸಿದುಬೀಳುತ್ತವೆ. ಅದಕ್ಕೋಸ್ಕರವೇ ಶ್ರೀರಾಮಕೃಷ್ಣರು ಮದುವೆಯಾಗಿದ್ದರೂ ಕೈಹಿಡಿದ ಹೆಂಡತಿಯನ್ನು ಬಿಡಲಿಲ್ಲ. ಆಂತರಿಕ ಜೀವನದಲ್ಲಿ ಸನ್ಯಾಸಿಗಳಂತೆ ನಿಸ್ಸಂಗರಾಗಿದ್ದರೂ, ಬಾಹ್ಯಜೀವನದಲ್ಲಿ ಗೃಹಸ್ಥರಿಗೆ ಆದರ್ಶರಾಗಿದ್ದರು. ಮದುವೆಯಾದವರೆಲ್ಲಾ ತಮಗೆ ದೇವರ ಮೇಲೆ ಪ್ರೀತಿ ಉದಿಸಿದೆ ಎಂದು ಕೈಹಿಡಿದ ಸತಿಯನ್ನು ತೊರೆದು ಮೋಕ್ಷ ಸಂಪಾದನೆಗೆ ಹೋಗಬೇಕಾಗಿಲ್ಲ. ದೇವರಮೇಲೆ ಪ್ರೀತಿ ಹುಟ್ಟಿದ

ಮೇಲೆಯೂ ಆಕೆಯನ್ನು ಹೃತ್ಪೂರ್ವಕ ಪ್ರೀತಿಸಬಹುದು. ದೇವರ ಪ್ರೇಮ ಮತ್ತು ಸತಿಯ ಪ್ರೇಮ ಒಂದಕ್ಕೊಂದು ವಿರೋಧವಲ್ಲ. ಒಂದನ್ನು ಇನ್ನೊಂದು ಪೋಷಿಸುತ್ತದೆ. ಈ ಧರ್ಮವೇ, ಸನ್ಯಾಸಿಯನ್ನು ಆತನ ಧರ್ಮವು ಯಾವ ಗುರಿಯೆಡೆಗೆ ಒಯ್ಯುವುದೊ ಅದೇ ಗುರಿಗೆ ಗೃಹಸ್ಥನನ್ನು ಒಯ್ಯುವುದು. ಶ್ರೀರಾಮಕೃಷ್ಣ ಶ್ರೀ ಶಾರದಾದೇವಿಯವರ ದಾಂಪತ್ಯ ಜೀವನ ಇದಕ್ಕೆ ನಿದರ್ಶನ.

ಶ್ರೀರಾಮಕೃಷ್ಣರು ಶ್ರೀ ಶಾರದಾದೇವಿಯನ್ನು ನೋಡುವುದು ದಿನಕ್ಕೆ ಕೆಲವು ನಿಮಿಷಗಳಾದರೂ ಅವರಿಗೆ ಅನಾನುಕೂಲಗಳೇನೇನು ಎಂಬುದನ್ನು ತಿಳಿದು ಸರಿಪಡಿಸುತ್ತಿದ್ದರು. ಆಧ್ಯಾತ್ಮಿಕ ಪ್ರೀತಿಗೆ ದೇಹ ಸಂಬಂಧವಿಲ್ಲದೇ ಇದ್ದರೂ ಹೇಗೆ ಪ್ರೀತಿಸುವ ವಸ್ತುವನ್ನು ಕಷ್ಟಕ್ಕೆ ಬೀಳದಂತೆ ನೋಡಿಕೊಂಡಿರುವುದು ಎನ್ನುವುದಕ್ಕೆ ಎಷ್ಟೋ ನಿದರ್ಶನಗಳನ್ನು ಇವರ ಜೀವನದಲ್ಲಿ ನೋಡಬಹುದು. ಕೆಲವು ದಿನಗಳು ಗುಲಾಬ್‌ಮಾ ಎಂಬಾಕೆ ಶ್ರೀರಾಮಕೃಷ್ಣರಿಗೆ ಆಹಾರವನ್ನು ತೆಗೆದುಕೊಂಡು ಹೋಗಿ ರಾತ್ರಿ ಸುಮಾರು ೧೦ ಘಂಟೆಯವರೆವಿಗೂ ಅಲ್ಲಿಯೇ ಮಾತನಾಡುತ್ತಾ ಇರುತ್ತಿದ್ದರು. ಶಾರದಾದೇವಿ ಇವರ ಊಟವನ್ನು ಬರುವತನಕ ಕಾದು ಕುಳಿತುಕೊಂಡಿರಬೇಕಾಗಿತ್ತು. ಒಮ್ಮೆ ಇವರಿಗೆ ಕಾದು ಸಾಕಾಗಿ, ಇವಳ ಆಹಾರವನ್ನು ಎಷ್ಟು ಹೊತ್ತು ನೋಡಿಕೊಂಡಿರುವುದು, ನಾಯಿಯೋ ಬೆಕ್ಕೋ ತೆಗೆದುಕೊಂಡು ಹೋಗಲಿ ಎಂದರು. ಇದು ಶ್ರೀರಾಮಕೃಷ್ಣರಿಗೆ ತಿಳಿದು ತಕ್ಷಣವೇ ಗುಲಾಬ್‌ಮಾ ಎಂಬಾಕೆಗೆ, "ನೀನು ಇಲ್ಲಿ ಬಹಳ ಹೊತ್ತು ಕಳೆಯುವುದರಿಂದ ಶಾರದೆಗೆ ಅನಾನುಕೂಲವಾಗಬಹುದು, ಬೇಗಹೋಗು" ಎಂದು ಹೇಳಿದರು.

ಸತಿಪತಿಗಳಿಬ್ಬರೂ ಐವತ್ತು ಗಜ ದೂರದಲ್ಲಿ ಇದ್ದರೂ, ಒಬ್ಬರು ಇನ್ನೊಬ್ಬರ ಮುಖವನ್ನು ನೋಡಬೇಕಾದರೆ ಕೆಲವು ವೇಳೆ ಎರಡು ತಿಂಗಳು ಆಗುತ್ತಿತ್ತು ಎಂದು ಹೇಳಿರುವೆವು. ಆದರೂ ಒಬ್ಬರು ಇನ್ನೊಬ್ಬರನ್ನು ಚಿಂತಿಸದೆ ಇರಲಿಲ್ಲ. ಒಮ್ಮೆ ಶ್ರೀ ಶಾರದಾದೇವಿಯವರಿಗೆ ಸ್ವಲ್ಪ ತಲೆನೋವಾಯಿತು. ಹತ್ತಿರದಲ್ಲಿದ್ದ ಒಬ್ಬ ಭಕ್ತನನ್ನು ಅನೇಕವೇಳೆ ಕಳುಹಿಸಿ ಹೇಗಿದೆ ಎಂದು ವಿಚಾರಿಸುವರು. " ಏಕೆ, ಅವಳಿಗೆ ತಲೆನೋವು ಬಂದಿತು ? " ಎಂದು ವಿಷಾದಪಡುತ್ತಿದ್ದರು. ಪತಿಗೆ ದೇವರ ಮೇಲೆ ಪ್ರೀತಿ ಬಂದಿದೆ ಎಂದು ಸತಿಯಮೇಲೆ ಅಸಡ್ಡೆ ತೋರುವುದು ವೈರಾಗ್ಯದ ಚಿಹ್ನೆಯಲ್ಲ. ಪ್ರೇಮಮಯ ಪರಮಾತ್ಮ. ಅವನನ್ನು ಮಾನವನು

ಆರಾಧಿಸುವಾಗ ಇನ್ನೊಬ್ಬರನ್ನು ದ್ವೇಷಿಸುವುದು ಹೇಗೆ? ಶ್ರೀರಾಮ ಕೃಷ್ಣರು ಎಲ್ಲರನ್ನೂ ಪ್ರೀತಿಯಿಂದ ನೋಡುತ್ತಿದ್ದರು. ಅಲ್ಲದೆ ತನ್ನನ್ನು ನೆಚ್ಚಿ ಯಾರು ಅವರ ತಾಯಿತಂದೆಗಳನ್ನು ತೊರೆದುಬಂದರೋ, ಅವರ ದೈಹಿಕ ಮಾನಸಿಕ ಮತ್ತು ಆಧ್ಯಾತ್ಮಿಕ ಮೇಲ್ಮೆಗೆ ಸದಾ ಪ್ರಯತ್ನಪಡುತ್ತಿದ್ದರು. "ಶ್ರೀರಾಮಕೃಷ್ಣರು ತ್ಯಾಗವೇ ರೂಪು ತಾಳಿದಂತೆ ಇದ್ದರೂ, ಅವರು ಕೆಲವುವೇಳೆ ನನ್ನ ವಿಚಾರವಾಗಿ ತುಂಬಾ ಚಿಂತೆಮಾಡುತ್ತಿದ್ದರು" ಎಂದು ಶ್ರೀ ಶಾರದಾದೇವಿಯವರೇ ಹೇಳಿರುವರು.

"ಒಂದು ದಿನ ನಿನ್ನ ಜೀವನಕ್ಕೆ ಎಷ್ಟು ರೂಪಾಯಿಗಳು ಬೇಕಾಗುವುದು?" ಎಂದು ಕೇಳಿದರು. ನನಗೆ ಹೇಳಲು ತುಂಬಾ ಸಂಕೋಚವಾಯಿತು. ಆದರೂ ಐದು ಆರು ರೂಪಾಯಿಗಳು ಆದರೆ ಸಾಕು ಎಂದೆ. 'ನೀನು ರಾತ್ರಿ ಹೊತ್ತು ಎಷ್ಟು ಚಪಾತಿ ತಿನ್ನುತ್ತೀಯೆ?' ಎಂದು ಕೇಳಿದರು. ನನಗೆ ಹೇಳಲು ತುಂಬಾ ನಾಚಿಕೆಯಾಗಿ ಸುಮ್ಮನಿದ್ದೆ. ಆದರೆ ಮತ್ತೊಮ್ಮೆ ಒತ್ತಿ ಕೇಳಿದರು. ನಾನು ಇಷ್ಟು ಎಂದು ಹೇಳಿದರೆ ಇವಳು ಹೊಟ್ಟೆಬಾಕಿ ಎಂದು ಎಲ್ಲಿ ತಿಳಿಯುತ್ತಾರೋ ಎಂಬ ಭಯ ಬೇರೆ. ಬಲವಂತಪಡಿಸಿದಮೇಲೆ ಐದಾರು ತಿನ್ನುತ್ತೇನೆ ಎಂದೆ. ನಂತರ ಇವರಿಗೆ ಊಟ ಮುಂತಾದುವುಗಳಿಗೆ ಕಷ್ಟವಿಲ್ಲ ಎಂದು ತಿಳಿದು ಹೊರಟರು" ಎಂದು ಶಾರದಾದೇವಿಯವರೇ ಹೇಳಿರುವರು.

ಎಂತಹ ಸತಿಯಾದರೂ ತಮ್ಮ ಪ್ರಿಯಪತಿಯಿಂದ ಏನಾದರೂ ಒಡವೆ ಬಂದರೆ ಒಂದು ಬಗೆ ಆನಂದದಿಂದ ಅದನ್ನು ಸ್ವೀಕರಿಸಿ ನೋಡಿ ನೋಡಿ ಕೊಟ್ಟವನನ್ನು ನೆನೆಯುವುದು ಸಹಜ. ಹೆಣ್ಣೇ ಸೌಂದರ್ಯೋಪಾಸಕಳು. ಮನಸ್ಸೆಳೆಯುವ ಆಕಾರಕ್ಕೆ, ಬಣ್ಣಕ್ಕೆ, ಒಡವೆವಸ್ತುಗಳಿಗೆ ಮನಸೋಲುವುದು ಹೆಣ್ಣಿನ ಒಂದು ಸ್ವಭಾವ. ಇದನ್ನು ಕೂಡಾ ಶ್ರೀರಾಮಕೃಷ್ಣರು ತಿಳಿದು ತೃಪ್ತಿಪಡಿಸಿದರು. ಅವರಿಗೆ ದೇವಸ್ಥಾನದಿಂದ ಬರುತ್ತಿದ್ದ ಏಳು ರೂಪಾಯಿಯನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ ತಮ್ಮ ಕೋಣೆಯ ಒಂದು ಕಡೆ ಇಟ್ಟದ್ದರು. ಒಂದು ದಿನ ಹೃದಯುನನ್ನು ಕರೆದು "ಎಷ್ಟು ಹಣವಿದೆ ನೋಡು" ಎಂದು ಕೇಳಿದರು. ಅಲ್ಲಿದ್ದ ಮುನ್ನೂರು ರೂಪಾಯಿಗಳನ್ನು ತೆಗೆದುಕೊಂಡು ಹೋಗಿ ಸುಂದರವಾದ ಎರಡು ಚಿನ್ನದ ಬಳೆಯನ್ನು ಮಾಡಿಸಿ ತೆಗೆದುಕೊಂಡು ಬಾ—ಎಂದು ಹೇಳಿದರು. "ಶ್ರೀಶಾರದೆಯೇ ಸಕಲ ವಿದ್ಯೆಯ ಅಧಿದೇವತೆ. ಈ ರೂಪಿನಲ್ಲಿ ಇರುವಳು. ಅವಳಿಗೆ ಕೆಲವು ಆಭರಣಗಳನ್ನು ಹಾಕಿಕೊಳ್ಳಬೇಕೆಂಬ

ಬಯಕೆ. ಇದನ್ನು ಕೊಟ್ಟರೆ ಅವಳು ಸಂತೋಷಿಸುವಳು" ಎಂದು ಹೇಳಿ ಕೊಟ್ಟರು. ಈ ವೈರಾಗ್ಯಚಕ್ರವರ್ತಿಯ ಎದೆಯಲ್ಲಿ ಎಂತಹ ಸತೀಪ್ರೇಮ ವಿತ್ತು ಎಂಬುದನ್ನು ನೋಡಬಹುದು. ಸತಿಯರಿಗೆ ಹೊರಲಾರದಷ್ಟು ಚಿನ್ನದ ಆಭರಣಗಳನ್ನು ಮಾಡಿಸಿಕೊಡುವ ಗಂಡಂದಿರು ಕೆಲವರು ಇರುವರು. ಆದರೆ ಎಷ್ಟು ಜನ ಶ್ರೀರಾಮಕೃಷ್ಣರ ದೃಷ್ಟಿಯಿಂದ ಮಾಡಬಲ್ಲರು?

ಅಷ್ಟು ಪ್ರೀತಿಯಿಂದ ಕೊಟ್ಟ ಆಭರಣಗಳನ್ನು ಶ್ರೀ ಶಾರದಾದೇವಿ ಯವರು ಅನೇಕವೇಳೆ ಧರಿಸುತ್ತಿದ್ದರು. ಒಂದುಸಲ ನೆರೆಮನೆಯ ಹೆಂಗಸು (ಸದಾ ಆಕೆಗೆ ಇನ್ನೊಬ್ಬರಲ್ಲಿ ತಪ್ಪು ಕಂಡುಹಿಡಿಯುವುದೇ ಸ್ವಭಾವ) "ಶ್ರೀರಾಮಕೃಷ್ಣರು ಅಂತಹ ತ್ಯಾಗಿಗಳು. ಅವರು ಒಂದು ಬೆಳ್ಳಿಯ ನಾಣ್ಯವನ್ನು ಸಹ ಕೈಯಲ್ಲಿ ಮುಟ್ಟುವುದಿಲ್ಲ. ಈಕೆ ಅವರ ಹೆಂಡತಿ ಚಿನ್ನದ ಆಭರಣವನ್ನು ಹಾಕಿಕೊಂಡು ಒಯ್ಯಾರ ಮಾಡು ತ್ತಾಳಲ್ಲಾ" ಎಂದು ಅಣಕಿಸಿದರಂತೆ. ಇದು ಶ್ರೀ ಶಾರದಾದೇವಿಯವರಿಗೆ ಗೊತ್ತಾಗಿ ಅಂದಿನಿಂದಲೇ ಅವರ ಆಭರಣಗಳನ್ನು ತೆಗೆದಿಟ್ಟರಂತೆ. ಹತ್ತಿರ ಇದ್ದ ಒಬ್ಬ ಭಕ್ತಳು ಇವರನ್ನು ನೋಡಿ, "ನೀವು ಯಾತಕ್ಕೆ ಒಡವೆಗಳನ್ನು ತೆಗೆದುಹಾಕಿದಿರಿ?" ಎಂದು ಪ್ರಶ್ನೆಮಾಡಿದಳು. "ನನ್ನಿಂದ ಅವರಿಗೆ ಯಾತಕ್ಕೆ ಒಂದು ಕೆಟ್ಟ ಹೆಸರು" ಎಂದು, ಹೇಳಿದರು. "ಪರನಿಂದೆಗೆ ಅಂಜಬೇಡಿ. ನಿಂದೆ ಮಾಡುವವರಿಗೇನು ಗೊತ್ತು ಇದರ ರಹಸ್ಯ. ಪರಮ ಹಂಸರು ಯಾವ ರೀತಿ ನಿಮ್ಮನ್ನು ನೋಡುತ್ತಾರೆ ಎಂಬುದು ಆ ಅಲ್ಪ ಮನಸ್ಸಿನವಳಿಗೆ ಏನು ಗೊತ್ತು. ಭಕ್ತ ಪ್ರೀತಿಯಿಂದ ಹೂವನ್ನು ತಂದು ದೇವರಿಗೆ ಕೊಟ್ಟರೆ, ದೇವರು ನಾನೇನು ಸೊಗಸುಗಾರ ಪುಟ್ಟಸ್ವಾಮಿಯಲ್ಲ, ಎಂದು ಕಿತ್ತು ಬಿಸಾಡುವನೇ? ಭಕ್ತ ಪ್ರೀತಿಯಿಂದ ಕೊಟ್ಟದ್ದನ್ನು ಆದರ ದಿಂದ ಸ್ವೀಕರಿಸಿ ಧರಿಸುವುದಿಲ್ಲವೇ? ಇನ್ನೊಬ್ಬರಲ್ಲಿ ಸದಾ ತಪ್ಪು ಕಂಡು ಹಿಡಿಯುವ ಹೀನ ಮನುಜರಿಗೆ ಇಂತಹ ಆಳವಾದ ದಿವ್ಯಭಾವಗಳು ಹೇಗೆ ಬರುವುದು? ನೀವು ಧರಿಸಿಕೊಳ್ಳಿ. ಇದರಿಂದ ನಿಮ್ಮ ಪತಿಗೆ ಸಂತೋಷ ವಾಗುವುದು, ನಿಮಗಲ್ಲ" ಎಂದು ಹೇಳಿದಾಗ ಪುನಃ ಧರಿಸಲು ಮೊದಲು ಮಾಡಿದರು. ಆದರೆ ಕೆಲವು ಕಾಲದ ಮೇಲೆ ಶ್ರೀರಾಮಕೃಷ್ಣರಿಗೆ ಖಾಯಿಲೆ ಪ್ರಾಪ್ತವಾಗಿ ರೋಗಶಯ್ಯೆಯಲ್ಲಿರುವಾಗ ಅವನ್ನೆಲ್ಲಾ ತೆಗೆದು ಹಾಕಿದರು. ಪುನಃ ಧರಿಸಲಿಲ್ಲ.

ಇನ್ನೂ ಅನೇಕ ವಿಷಯಗಳಲ್ಲಿ ಶ್ರೀರಾಮಕೃಷ್ಣರು, ಶ್ರೀ ಶಾರದಾ

ದೇವಿಯವರು ತಮ್ಮ ಹೃದಯಕ್ಕೆ ಎಷ್ಟು ಹತ್ತಿರದವರೆಂಬುದನ್ನು ತೋರಿಸಿದ್ದರು. ಒಂದು ದಿನ ಹಾಸ್ಯಾರ್ಥವಾಗಿ ಒಬ್ಬ ಭಕ್ತನಿಗೂ ತಮಗೂ ಯಾರ ಕಾಂತಿ ಹೆಚ್ಚು ಆಕರ್ಷಣೀಯ ಎಂಬ ಸ್ಪರ್ಧೆ ನಡೆದಾಗ ಇಬ್ಬರೂ ಶ್ರೀ ಶಾರದಾದೇವಿಯವರಿಗೆ ತೀರ್ಪುಕೊಡಲು ಕೇಳಿಕೊಂಡರು. ಶ್ರೀರಾಮಕೃಷ್ಣರು, ನಂತರ ಭಕ್ತನೂ, ಅವರ ಮುಂದೆ ಹೋಗಿ ನಿಂತು ಬಂದರು. ಶ್ರೀ ಶಾರದಾದೇವಿಯವರು, ಭಕ್ತನೇ ಸ್ವಲ್ಪ ಜಾಸ್ತಿ ಸುಂದರವಾದ ಬಣ್ಣ ಉಳ್ಳವನೆಂದು ತೀರ್ಪುಕೊಟ್ಟರು.

ಒಮ್ಮೆ ಅವರು ಕಮಾರಪುಕುರದಲ್ಲಿ ಇದ್ದಾಗ ಲಕ್ಷ್ಮೀದೇವಿಯ ತಾಯಿ ಮತ್ತು ಶಾರದಾದೇವಿ ಇಬ್ಬರೂ ಅಡಿಗೆಮಾಡುತ್ತಿದ್ದರು. ಶ್ರೀ ಶಾರದಾದೇವಿಯವರಿಗೆ ಅಷ್ಟು ಚೆನ್ನಾಗಿ ಅಡಿಗೆಮಾಡಲು ಒರುತ್ತಿರಲಿಲ್ಲ. ಇನ್ನೊಬ್ಬರು ಪಾಕಶಾಸ್ತ್ರದಲ್ಲಿ ನಿಪುಣರು. ಲಕ್ಷ್ಮೀದೇವಿಯ ತಾಯಿ ಮಾಡಿದ ಪಲ್ಯವನ್ನು ತಿಂದು ಇದನ್ನು ಮಾಡಿದವರನ್ನು ರಾಮದಾಸನೆಂಬ ಕಲ್ಕತ್ತೆಯ ವೈದ್ಯಪ್ರವೀಣನಿಗೆ ಹೋಲಿಸಬಹುದು ಎಂದರು. ಅದೇ ಶ್ರೀ ಶಾರದಾದೇವಿಯವರು ಮಾಡಿದ ಅಡಿಗೆಯನ್ನು ತಿಂದು ಇದನ್ನು ಮಾಡಿದವರನ್ನು ಶ್ರೀನಾಥನೆಂಬ ಒಬ್ಬ ಏನೂ ತಿಳಿಯದ ಅಳಲೆಕಾಯಿ ಪಂಡಿತನಿಗೆ ಹೋಲಿಸಬಹುದು ಎಂದು ನಕ್ಕರು. ಯಾರೋ ಹತ್ತಿರದಲ್ಲಿದ್ದವರು, "ಯಾವಾಗಲೂ ನಿಮಗೆ ಅಡಿಗೆಮಾಡುವುದಕ್ಕೆ ಪ್ರವೀಣೆ ಸಿಕ್ಕುವುದಿಲ್ಲ. ಶ್ರೀ ಶಾರದೆಗೆ ಅಡಿಗೆಮಾಡಲು ಚೆನ್ನಾಗಿ ಬರದೇ ಇದ್ದರೂ, ಅವರನ್ನು ಕಾಲುಹಿಸುಕು ಬಾ ಎಂದು ಕರೆಯಬಹುದು. ಮೈಗೆ ಎಣ್ಣೆ ಹಚ್ಚು ಎನ್ನಬಹುದು. ನೀವು ಹೇಳುವ ಕೆಲಸವನ್ನೆಲ್ಲಾ ಮಾಡುವರು. ನೀವು ಕೂಗುವುದೇ ತಡ ನಾನಿರುವೆನು ಎಂದು ಅವರು ಬರುವರು"—ಎಂದು ಹಾಸ್ಯವಾಗಿ ಉತ್ತರಕೊಟ್ಟರು. ಆಗ ಶ್ರೀರಾಮಕೃಷ್ಣರು ಕೂಡ ನಗುತ್ತಾ, "ಹೌದು, ಹೌದು," ಎಂದು ಹೇಳಿ ಸುಮ್ಮನಾದರು.

ಶ್ರೀ ಶಾರದಾದೇವಿಯವರನ್ನು ಕೆಲವುವೇಳೆ ಹಾಸ್ಯಮಾಡುತ್ತಲೂ, ನಗಿಸುತ್ತಲೂ, ಇದ್ದರೂ ಕೂಡ ಅವರಲ್ಲಿದ್ದ ದೈವತ್ವಕ್ಕೆ ಯಾವಾಗಲೂ ಗೌರವಕೊಡುತ್ತಿದ್ದರು. ಅನೇಕ ಜೀವಿಗಳಿಗೆ ಜ್ಞಾನೋಪದೇಶಕ್ಕಾಗಿ ಶ್ರೀ ಶಾರದಾದೇವಿಯವರು ಜನ್ಮವೆತ್ತಿರುವರು ಎಂದು ತಿಳಿದಿದ್ದರು. ತಾವು ಮಾಡಿ ಮಿಗುವ ಕೆಲಸಗಳನ್ನೆಲ್ಲಾ ಅವರು ಮಾಡಬೇಕಾಗುವದೆಂದು ಅವರಿಗೆ ಗೊತ್ತಿತ್ತು. ಕೆಲವು ಸಲ ಅವರು ಶಾರದಾದೇವಿಯವರಿಗೆ "ಜನರು ಸುತ್ತಲೂ ಅಜ್ಞಾನದ ಕತ್ತಲಲ್ಲಿ ಕ್ರಿಮಿಗಳಂತೆ ತೊಳಲುತ್ತಿರು

ವರು. ಅವರನ್ನು ಬೆಳಕಿಗೆ ತರುವುದು ನಿನ್ನ ಕರ್ತವ್ಯ" ಎಂದರು. ಶ್ರೀ ಶಾರದಾದೇವಿಯವರು, "ನಾನು ಹೆಂಗಸು ಏನು ಮಾಡಬಲ್ಲೆ?" ಎಂದಾಗ "ಹೆಂಗಸಾದರೇನು ಆಕೆ ಗುರುವಾಗಲಾರಳೆ. ಆಕೆಯೇ ಮಹಾ ಮಾಯೆ. ಆಕೆ ಇಚ್ಛೆಪಟ್ಟರೆ ಕೋಟಿ ರಾಮರು, ಕೃಷ್ಣರು ಜಗತ್ತಿನಲ್ಲಿ ಉದ್ಭವಿಸುವರು" ಎಂದರು ತಾವು ಧ್ಯಾನಮಾಡಿ ಸಿದ್ಧಿಹೊಂದಿದ ಅನೇಕ ದಿವ್ಯಮಂತ್ರಗಳನ್ನು ಅವರಿಗೆ ಕಲಿಸಿ ಶಿಷ್ಯರ ಸ್ವಭಾವಕ್ಕೆ ಅನುಗುಣವಾಗಿ ಅದನ್ನು ಉಪದೇಶಮಾಡುವಂತೆ ಹೇಳಿದರು. ಶ್ರೀ ಶಾರದಾದೇವಿಯುವರು ತಾವು ಉಪದೇಶ ಕೊಡುವಾಗ "ಈ ಮಂತ್ರಗಳೆಲ್ಲಾ ಶ್ರೀರಾಮಕೃಷ್ಣರು ನನಗೆ ಕೊಟ್ಟದ್ದು. ಅವರ ತಪಶ್ಶಕ್ತಿ ಇದರಲ್ಲಿ ಅಡಗಿದೆ. ಇದರ ಸಹಾಯದಿಂದ ಮಾಯೆಯನ್ನು ದಾಟುವುದರಲ್ಲಿ ಸಂಶಯವಿಲ್ಲ" ಎಂದು ಹೇಳುತ್ತಿದ್ದರು.

ಶ್ರೀರಾಮಕೃಷ್ಣರು ಒಂದು ಮಾತಿನಿಂದ ಕೂಡ ನೋವನ್ನು ಉಂಟುಮಾಡದೆ ಜಾಗರೂಕರಾಗಿದ್ದರು. ಶ್ರೀ ಶಾರದಾದೇವಿಯವರು ಶ್ರೀರಾಮಕೃಷ್ಣರು ಹೇಳಿದಂತೆ ಕೇಳುತ್ತಿದ್ದರೂ ಕೆಲವುವೇಳೆ ತಾವು ಮಾಡಿದುದು ಸರಿ ಎಂದು ತೋರಿದರೆ ಅದಕ್ಕೆ ಪ್ರತಿಯಾಗಿ ಶ್ರೀರಾಮಕೃಷ್ಣರು ಏನು ಹೇಳಿದರೂ ಮಾಡುತ್ತಿರಲಿಲ್ಲ. ಶ್ರೀರಾಮಕೃಷ್ಣರು ಅವರು, ಹಾಗೆ ಮಾಡುವುದಕ್ಕೆ ಕಾರಣವನ್ನು ತಿಳಿದು, ಅವರು ಹಾಗೆ ಮಾಡುವುದು ಒಳ್ಳೆಯದಕ್ಕೆ ಆಗಿದ್ದರೆ ಸಂತೋಷಪಡುತ್ತಿದ್ದರೇ ಹೊರತು, ಬಲವಂತದಿಂದ ತಾವು ಹೇಳಿದಂತೆಯೇ ಮಾಡಬೇಕೆಂದು ನಿರ್ಬಂಧಪಡಿಸುತ್ತಿರಲಿಲ್ಲ. ಅನೇಕ ಭಕ್ತರು ಮಿಠಾಯಿ ಮುಂತಾದುವುಗಳನ್ನು ತಂದುಕೊಡುತ್ತಿದ್ದರು. ಶ್ರೀರಾಮಕೃಷ್ಣರಿಗೆ ಸ್ವಲ್ಪವಿಟ್ಟು ಮಿಕ್ಕಿದ್ದನ್ನು ನೆರೆಹೊರೆಯ ಬಾಲಕರು ಮತ್ತು ಭಕ್ತರಿಗೆ ಹಂಚುತ್ತಿದ್ದರು. ತಮಗೆ ಕೂಡಾ ಏನನ್ನೂ ಇಟ್ಟುಕೊಳ್ಳುತ್ತಿರಲಿಲ್ಲ. ಇದನ್ನು ತಿಳಿದು ಶ್ರೀರಾಮಕೃಷ್ಣರು, "ಹೆಂಗಸು ಇಷ್ಟು ಧಾರಾಳಿಯಾದರೇ ಸಂಸಾರ ಹೇಗೆ ನಡೆಸುವುದು?" ಎಂದು ಶಾರದಾದೇವಿಯವರಿಗೆ ಹೇಳಿದರು. ತಾನು ಇಷ್ಟು ಧಾರಾಳಿಯಾಗಿರುವುದು ಶ್ರೀರಾಮಕೃಷ್ಣರು ತಪ್ಪು ಎಂದು ಭಾವಿಸಿರುವರು; ಬಂದವರಿಗೆಲ್ಲಾ ಕೊಡದೆ ನಾನು ಏನನ್ನೂ ಮುಚ್ಚಿಡಲಾರೆನು ಎಂದು ಸ್ವಲ್ಪ ಅಸಮಾಧಾನದಿಂದ ವ್ಯಸನಪಟ್ಟು ಹೋಗುತ್ತಿದ್ದರು. ಇವರ ಮುಖವನ್ನು ನೋಡಿ ಶ್ರೀರಾಮಕೃಷ್ಣರು ತಮ್ಮ ಮಾತಿನಿಂದ ಇವರನ್ನು ನೋಯಿಸಿದೆನೆಂದು ತಿಳಿದು, ಹತ್ತಿರವಿದ್ದ ಶಿಷ್ಯರೊಬ್ಬ

ರನ್ನು ಕರೆದು "ಆಕೆಯನ್ನು ಕರೆದುಕೊಂಡುಬನ್ನಿ, ಆಕೆಯ ಕಣ್ಣಿನಿಂದ ಒಂದು ತೊಟ್ಟು ನೀರು ಬಿದ್ದರೆ ನನ್ನ ತಪಸ್ಸೆಲ್ಲಾ ವ್ಯರ್ಥವಾಗುವುದು" ಎಂದರು.

ಮತ್ತೊಮ್ಮೆ ಶ್ರೀ ಶಾರದಾದೇವಿಯವರಲ್ಲಿಗೆ ಒಬ್ಬ ವೃದ್ಧ ಹೆಂಗಸು ಬಂದು ಬಹಳ ಮಾತನಾಡಿ ಹೋಗುತ್ತಿದ್ದಳು. ಆಕೆ ತನ್ನ ಯೌವನದಲ್ಲಿ ಅಷ್ಟು ಶುದ್ಧವಾದ ಜೀವನವನ್ನು ನಡೆಸಿರಲಿಲ್ಲ. ಶ್ರೀರಾಮಕೃಷ್ಣರು ಅಷ್ಟೊಂದು ಸದರವಾಗಿ ಆಕೆಯೊಂದಿಗೆ ಬೆರೆಯಬೇಡವೆಂದು ಹೇಳಿದ್ದರು. ಆದರೂ ಅವರೊಡನೆ ಮಾತುಕತೆಯಾಡುವುದು, ಏನಾದರೂ ತಿನ್ನಲು ಕೊಡುವುದು, ಅವರ ಕಷ್ಟದ ಕತೆಯನ್ನು ಕೇಳಿ ಸಹಾನುಭೂತಿ ತೋರುವುದು ಇವುಗಳನ್ನು ಮಾಡುತ್ತಿದ್ದರು. ಶ್ರೀರಾಮಕೃಷ್ಣರು ಇದನ್ನು ನೋಡಿ, ನಾನು ಹೇಳಿದಮೇಲೆಯೂ ಇವರು ಹೀಗೆ ಮಾಡುತ್ತಿರುವರಲ್ಲಾ ಎಂದು ಕೋಪಗೊಳ್ಳದೆ, ಇವರಲ್ಲಿದ್ದ ಪರೋಪಕಾರ ಬುದ್ಧಿಯನ್ನು ನೋಡಿ ಸಂತೋಷಪಟ್ಟರು. ಮತ್ತೊಂದು ಇಂತಹ ಪ್ರಸಂಗವೇ ಶ್ರೀ ಶಾರದಾದೇವಿಯವರು ಪತಿತರನ್ನು ಕಂಡರೆ ಎಷ್ಟು ಮರುಗುತ್ತಿದ್ದರು ಎಂಬುದನ್ನು ತೋರಿಸುವುದು. ಒಂದು ದಿನ ಕಲ್ಕತ್ತಾ ನಗರದಿಂದ ಒಬ್ಬ ಗೃಹಿಣಿ ಬಂದಿದ್ದಳು. ಅಗ ಊಟದ ಸಮಯ. ಶ್ರೀ ಶಾರದಾದೇವಿಯವರು ಶ್ರೀರಾಮಕೃಷ್ಣರಿಗೆ ಆಹಾರವನ್ನು ತೆಗೆದುಕೊಂಡು ಹೋಗುತ್ತಿದ್ದರು. ಆಗ ಬಂದ ಹೆಂಗಸು ತಾನು ತೆಗೆದುಕೊಂಡು ಹೋಗುತ್ತೇನೆ ಎಂದು ಅವರಿಂದ ತೆಗೆದುಕೊಂಡು ಹೋದಳು. ಶ್ರೀರಾಮಕೃಷ್ಣರಿಗೆ ಆ ದಿವಸ ಇವರು ತಂದ ಆಹಾರವನ್ನು ಊಟಮಾಡಲು ಆಗಲಿಲ್ಲ. ಶ್ರೀ ಶಾರದಾದೇವಿಯವರನ್ನು ಕರೆದು, ಬೇರೆ ಆಹಾರವನ್ನು ಅವರ ಕೈಯಿಂದ ತರಿಸಿ, ಇನ್ನೊಂದುಸಲ ಮತ್ತೊಬ್ಬರ ಕೈಯಲ್ಲಿ ಆಹಾರವನ್ನು ಕಳುಹಿಸುವುದಿಲ್ಲ ಎಂದು ಮಾತುಕೊಟ್ಟರೆ ಊಟಮಾಡುತ್ತೇನೆ ಎಂದು ಹೇಳಿದರು. ಶ್ರೀ ಶಾರದಾದೇವಿಯವರು, "ತಾನು ಹಾಗೆ ಮಾತುಕೊಡುವುದಕ್ಕೆ ಆಗುವುದಿಲ್ಲ. ಯಾರಾದರೂ ಬಂದು ತಮಗೆ ಸೇವೆಮಾಡಲು ಅವಕಾಶವನ್ನು ಕೊಡಿ ಎಂದು ಹೇಳಿದಾಗ ನಮಗೆ ಇಲ್ಲ ಎಂದು ಹೇಳುವುದಕ್ಕೆ ಮನಸ್ಸು ಬರುವುದಿಲ್ಲ" ಎಂದರು. ಈ ಮಾತನ್ನು ಕೇಳಿದಾಗ ಶ್ರೀರಾಮಕೃಷ್ಣರಿಗೆ ಎಲ್ಲರ ತಪ್ಪನ್ನು ಮರೆತು ಅವರನ್ನು ಉದ್ಧರಿಸಲು ತವಕಪಡುತ್ತಿರುವ ತಾಯಿಯ ಪ್ರೇಮ ಈಕೆಯಲ್ಲಿದೆ ಎಂದು ತಿಳಿದು, ಅತ್ಯಂತ ಸಂತೋಷಪಟ್ಟರು.

ಒಂದು ದಿನ ಶ್ರೀರಾಮಕೃಷ್ಣರ ಬಳಿಗೆ ಒಬ್ಬ ಗೃಹಿಣಿ ಭಕ್ತೆ ಬಂದು, ತಾನು ಶ್ರೀರಾಮಕೃಷ್ಣರ ಮೂಲಕ ದೇವರನ್ನು ಗೋಪಿಯರು ಶ್ರೀಕೃಷ್ಣನನ್ನು ಪ್ರೀತಿಸಿದ ರೀತಿ ಪ್ರೀತಿಸಬೇಕೆಂದು ಕೇಳಿಕೊಂಡರು. ಇದನ್ನು ಕೇಳಿ ಶ್ರೀರಾಮಕೃಷ್ಣರಿಗೆ ಸ್ವಲ್ಪ ಅಸಮಾಧಾನವಾಗಿ ಗದರಿಸಿ ಕೊಂಡರು. ಇದನ್ನು ಕೇಳುತ್ತಿದ್ದ ಶ್ರೀ ಶಾರದಾದೇವಿಯವರು, ಅವರು ಆಡುವ ಮಾತುಗಳಿಗೆ ನಸುನಕ್ಕು, ಹತ್ತಿರ ಇದ್ದ ಒಬ್ಬ ಹೆಂಗಸಿಗೆ ಆಕೆ ಯನ್ನು ಕರೆದುಕೊಂಡು ಬಾ ಎಂದು ಹೇಳಿಕಳುಹಿಸಿದರು. "ಶ್ರೀರಾಮ ಕೃಷ್ಣರು ಎಲ್ಲರ ಎದುರಿಗೆ ಆಕೆಯನ್ನು ಹಾಗೆ ದಂಡಿಸಿ ಮಾನವನ್ನು ಕೆಡಿಸ ಬೇಕೆ? ಏನಾದರೂ ಹೇಳುವುದಿದ್ದರೆ ನನ್ನ ಹತ್ತಿರ ಹೇಳಿಕಳುಹಿಸಿದ್ದರೆ ಆಗುತ್ತಿರಲಿಲ್ಲವೇ?" ಎಂದರು. ಆಕೆ ಬಂದಮೇಲೆ "ಮಗು ನೀನು ಹೇಳುವ ಮಾತು ಅವರಿಗೆ ಸರಿಹೋಗದಿದ್ದರೆ ನನ್ನ ಹತ್ತಿರ ಬಂದು ಹೇಳು" ಎಂದು ಸಮಾಧಾನ ಮಾಡಿ ಕಳುಹಿಸಿದರು.

ಶ್ರೀರಾಮಕೃಷ್ಣರಲ್ಲಿಗೆ ಬರುತ್ತಿದ್ದ ಅನೇಕ ಹುಡುಗರಿಗೆ ಶ್ರೀ ಶಾರದಾದೇವಿಯವರು ರಾತ್ರಿ ಅಡಿಗೆಮಾಡಿ ಬಡಿಸುತ್ತಿದ್ದರು. ಶ್ರೀರಾಮ ಕೃಷ್ಣರೇ ಅವರ ದೇಹದಾರ್ಢ್ಯವನ್ನು ನೋಡಿ ಒಬ್ಬೊಬ್ಬರಿಗೆ ಇಷ್ಟಿಷ್ಟು ರೊಟ್ಟಿಯನ್ನು ಕೊಡು ಎಂದು ಹೇಳುತ್ತಿದ್ದರು. ಒಬ್ಬ ಹುಡುಗನನ್ನು "ನೀನು ರಾತ್ರಿ ಎಷ್ಟು ರೊಟ್ಟಿಯನ್ನು ತೆಗೆದುಕೊಳ್ಳುತ್ತೀಯೆ?" ಎಂದು ಕೇಳಿದರು. ಅವನು ಐದೊ ಆರೊ ಎಂದು ಹೇಳಿದನು. "ಅಷ್ಟೊಂದು ಏಕೆ ತೆಗೆದುಕೊಳ್ಳುವುದು. ಧ್ಯಾನಮಾಡುವ ಕಾಲದಲ್ಲಿ ನಿದ್ರೆ ಮಾಡ ಬೇಕಾಗುವುದು" ಎಂದರು. ಶಿಷ್ಯನು "ಶ್ರೀ ಶಾರದಾದೇವಿಯವರು ಎಷ್ಟನ್ನು ಕೊಡುತ್ತಾರೋ ಅಷ್ಟನ್ನು ತಿನ್ನುವುದು ನನ್ನ ಸ್ವಭಾವ" ಎಂದನು. ಶ್ರೀರಾಮಕೃಷ್ಣರು ಶ್ರೀ ಶಾರದಾದೇವಿಯವರ ಬಳಿಗೆ ಹೋಗಿ, "ನೀನು ಜಾಸ್ತಿ ತಿನ್ನುವುದಕ್ಕೆ ಕೊಟ್ಟು ಅವರನ್ನು ಸೋಮಾರಿಗಳಾಗಿ ಮಾಡು ತ್ತೀಯೆ" ಎಂದರು. ಆಗ ಶ್ರೀ ಶಾರದಾದೇವಿಯವರು "ಅವನು ಎರಡು ರೊಟ್ಟಿ ಜಾಸ್ತಿ ತೆಗೆದುಕೊಂಡನೆಂದು ಯಾಕೆ ಇಷ್ಟು ಗಲಾಟೆಮಾಡುವುದು. ಅವನ ಧ್ಯಾನದ ಜವಾಬ್ದಾರಿಯನ್ನು ನಾನು ನೋಡಿಕೊಳ್ಳುತ್ತೇನೆ. ನೀವು ಅವನಮೇಲೆ ರೇಗಬೇಡಿ" ಎಂದರು.

ಮುಖ್ಯವಾದ ಪ್ರಸಂಗಗಳಲ್ಲಿ ಶ್ರೀ ಶಾರದಾದೇವಿಯವರ ಮನೋ ಭಿಪ್ರಾಯವನ್ನು ತಿಳಿದು ತಾವು ಹೇಳಿದಂತೆ ಬಲಾತ್ಕರಿಸದೆ ಅವರಿಗೆ ಸೂಕ್ತತೋರಿದ ರೀತಿಯಲ್ಲಿ ಅನುಸರಿಸಲು ಸ್ವಾತಂತ್ರ್ಯವನ್ನು ಕೊಡು

ತ್ತಿದ್ದರು. ಶ್ರೀರಾಮಕೃಷ್ಣರು ತಮ್ಮ ಸತಿಯ ಸೇವೆಯನ್ನು ಸ್ವೀಕರಿಸುತ್ತಿದ್ದರು. ವಿನೋದವಾಗಿ ಮಾತನಾಡಿ ಅವರನ್ನು ಸಂತೋಷಪಡಿಸುತ್ತಿದ್ದರು. ಅವರೊಂದಿಗೆ ಮಗುವಿನಂತೆ ಸರಳಭಾವದಿಂದ ಇರುತ್ತಿದ್ದರು. ಆದರೂ ಕೂಡ ಅವರಿಗೆ ಅತ್ಯಂತ ಗೌರವವನ್ನು ಕೊಡುತ್ತಿದ್ದರು. ಒಂದು ದಿನ ರಾತ್ರಿ ಊಟವನ್ನು ತೆಗೆದುಕೊಂಡು ಬರುವ ಸಮಯದಲ್ಲಿ ಬಾಗಿಲು ಸದ್ದಾಗಲು "ಒಳಗೆ ಬರುವಾಗ ಬಾಗಿಲನ್ನು ಮುಚ್ಚಿ ಬಾ" ಎಂದು, ಬಂದವರು ಯಾರೋ ಗುಡಿಯ ಆಳುಗಳೆಂದು ತಿಳಿದು ಏಕವಚನದಲ್ಲಿ ಹೇಳಿದರು. ಶ್ರೀ ಶಾರದಾದೇವಿಯವರು "ಆಗಲಿ ಹಾಗೇ ಮಾಡುತ್ತೇನೆ" ಎಂದು ಹೇಳಿದರು. ಇವರ ಧ್ವನಿಯನ್ನು ಕೇಳಿ ರಾಮಕೃಷ್ಣರಿಗೆ ಸ್ವಲ್ಪ ಆಶ್ಚರ್ಯ ಉಂಟಾಯಿತು. ತಕ್ಷಣವೇ "ಆಳುಗಳು ಬಂದರೆಂದು ತಿಳಿದು ಏಕವಚನದಲ್ಲಿ ಹೇಳಿದೆ ದಯವಿಟ್ಟು ಕ್ಷಮಿಸು" ಎಂದು ಕೇಳಿಕೊಂಡರು. ಶ್ರೀ ಶಾರದಾದೇವಿಯವರು, "ಅದರಲ್ಲಿ ತಪ್ಪೇನೂ ಇಲ್ಲ" ಎಂದರು. ಆದರೂ ಅಂದಿನ ದಿನ ಶ್ರೀರಾಮಕೃಷ್ಣರಿಗೆ ನಿದ್ದೆ ಬರಲಿಲ್ಲವಂತೆ. ಒರಟು ಮಾತಿನಿಂದ ಆಕೆಯನ್ನು ಎಷ್ಟು ನೋಯಿಸಿದೆನೋ ಎಂದು ಸಂತಾಪ. ಬೆಳಿಗ್ಗೆ ಎದ್ದುಹೋಗಿ, "ನಾನು ಹಾಗೆ ನಿನ್ನನ್ನು ಅಂದದ್ದು ತಪ್ಪು. ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ" ಎಂದರಂತೆ. ಈ ವಿಚಾರವಾಗಿ ಶ್ರೀ ಶಾರದಾದೇವಿಯವರು ಅನೇಕ ವರ್ಷಗಳ ಮೇಲೆ ಮಾತನಾಡುತ್ತಾ, "ತನ್ನನ್ನು ಮದುವೆಯಾಗಿದ್ದವರು ಒಂದುಸಲವಾದರೂ ಏಕವಚನದಲ್ಲಿ ಕರೆದವರಲ್ಲ. ಎಷ್ಟು ಪ್ರೀತಿಯಿಂದ ನನ್ನನ್ನು ನೋಡುತ್ತಿದ್ದರು. ನನ್ನನ್ನು ಒಂದು ಹೂವಿನಿಂದ ಕೂಡ ಹೊಡೆದವರಲ್ಲ" ಎನ್ನುತ್ತಿದ್ದರು.

ಶ್ರೀರಾಮಕೃಷ್ಣರಂತಹ ರೂಪುತಾಳಿದ ವೈರಾಗ್ಯ ವ್ಯಕ್ತಿಯ ಮುಂದೆ ಶ್ರೀ ಶಾರದಾದೇವಿಯವರು ಬೆಳೆದಿದ್ದರು. ಅವರನ್ನು ಸೇವಿಸಿ ಅವರಲ್ಲಿದ್ದ ವೈರಾಗ್ಯ ಇವರ ಜೀವನದಲ್ಲೂ ಮೂಡಿತ್ತು ಎಂಬುದಕ್ಕೆ ಇನ್ನೊಂದು ಪ್ರಸಂಗವಿದೆ. ಒಂದು ದಿನ ಶ್ರೀರಾಮಕೃಷ್ಣರ ಹಾಸಿಗೆಯ ಮೇಲೆ ಹಾಸಿದ್ದ ದುಪ್ಪಟಿಯೊಂದು ಕೊಳೆಯಾಗಿತ್ತು. ಅದರ ಬದಲು ಹಾಕಲು ಮತ್ತೊಂದು ಇರಲಿಲ್ಲ. ಇವರ ಬಳಿಗೆ ಬಹಳ ಧನಿಕನಾದ ಮಾರ್ವಾಡಿ ಭಕ್ತ ಬರುತ್ತಿದ್ದನು. ಅವನು ಇದನ್ನು ನೋಡಿ, "ನಿಮ್ಮ ಹೆಸರಿನಲ್ಲಿ ಬ್ಯಾಂಕಿನಲ್ಲಿ ಹತ್ತುಸಾವಿರ ರೂಪಾಯಿಗಳನ್ನಿಡುತ್ತೇನೆ. ಇದರಿಂದ ಬರುವ ಬಡ್ಡಿಯನ್ನು ನಿಮ್ಮ ಚಿಲ್ಲರೆಯ ಖರ್ಚುಗಳಿಗೆ ಉಪಯೋಗಿಸಬಹುದು" ಎಂದನು. ಇದನ್ನು ಕೇಳಿದ ಶ್ರೀರಾಮಕೃಷ್ಣರಿಗೆ ಒಂದು ಸಿಡಿಲು ಹೊಡಿ

ದಂತೆ ಆಯಿತು. "ನನ್ನನ್ನು ಈ ಹಣದ ಮಾಯೆಯಲ್ಲಿ ಕಟ್ಟಿಹಾಕಬೇಡ. ಬೇಕಾದರೆ ಹೋಗಿ ಶ್ರೀ ಶಾರದಾದೇವಿಯರನ್ನು ಕೇಳು. ಅವರಿಗೆ ನನ್ನಂತಹ ದರಿದ್ರನನ್ನು ಮದುವೆಯಾಗಿರುವುದರಿಂದ ಚೆನ್ನಾಗಿರುವ ಸೀರೆ ಒಡವೆಗಳು ಸಿಕ್ಕುವ ಸಂಭವವಿಲ್ಲ. ಆಕೆ ಇಚ್ಛೆಪಟ್ಟರೆ ಸ್ವೀಕರಿಸಲಿ" ಎಂದರು. ಆತನು ಶ್ರೀ ಶಾರದಾದೇವಿಯ ಹತ್ತಿರ ಹೋದಾಗ "ಶ್ರೀರಾಮಕೃಷ್ಣರಿಗೆ ಬೇಡದ ಧನ ನನಗೂ ಬೇಡ. ನಾನು ತೆಗೆದುಕೊಂಡರೂ ಅವರ ಸೇವೆಗೇ ಅದನ್ನು ಉಪಯೋಗಿಸಬೇಕು. ಆದರಿಂದ ಅವರೇ ತೆಗೆದುಕೊಂಡಂತೆ ಆಯಿತು" ಎಂದರು. ಇದನ್ನು ಕೇಳಿ ಶ್ರೀರಾಮಕೃಷ್ಣರಿಗೆ ಅತ್ಯಾನಂದವಾಯಿತು.

ಅವರ ದಾಂಪತ್ಯ ಜೀವನದ ಸವಿಯನ್ನು ನೋಡಿದೆವು. ಕೆಲವು ವೇಳೆ ಭಿನ್ನಾಭಿಪ್ರಾಯಗಳು ಬರುತ್ತಿದ್ದವು. ಆದರೆ ಅದರಿಂದ ಕಲಹವಾಗುತ್ತಿರಲಿಲ್ಲ. ಒಬ್ಬರು ಇನ್ನೊಬ್ಬರ ಹೃದಯವನ್ನು ತಿಳಿದು ತಮ್ಮ ನಡತೆಯನ್ನು ಸರಿಪಡಿಸಿಕೊಳ್ಳುತ್ತಿದ್ದರು. ಇಂತಹ ದೃಷ್ಟಿ ಎಲ್ಲ ಗೃಹಸ್ಥರ ಜೀವನದಲ್ಲೂ ಬಂದರೆ ಸಂಸಾರದಲ್ಲಿ ಬೆಳಗೆದ್ದರೆ ಬರುವ ಮನಸ್ತಾಪಗಳು ಮಾಯವಾಗಿ, ತೃಪ್ತಿ ಆನಂದ ನಲಿದಾಡುವುದರಲ್ಲಿ ಸಂಶಯವಿಲ್ಲ.



## ೧೦. ದಕ್ಷಿಣೇಶ್ವರ ಕಾಲದ ಕೆಲವು ಘಟನೆಗಳು

ಶ್ರೀ ಶಾರದಾದೇವಿಯವರು ಸುಮಾರು ೧೩ ವರ್ಷಗಳನ್ನು ದಕ್ಷಿಣೇಶ್ವರದಲ್ಲಿ ಶ್ರೀರಾಮಕೃಷ್ಣರ ಸಾನ್ನಿಧ್ಯದಲ್ಲಿ ಕಳೆದರು. ಇದರ ಮಧ್ಯೆ ಸುಮಾರು ಏಳು ಸಲ ತಮ್ಮ ತೌರುಮನೆಯಾದ ಜಯರಾಮವಟಿಗೆ ಹೋಗಿದ್ದರು. ೧೮೭೪ನೇ ಇಸವಿ ೨೬ನೇ ಮಾರ್ಚಿ ತಿಂಗಳಲ್ಲಿ ಶ್ರೀಶಾರದಾ ದೇವಿಯವರ ತಂದೆ ಕಾಲವಾದರು. ಇದರಿಂದ ಮನೆಗೆ ಪೌರೋಹಿತ್ಯದ ಮೂಲಕ ಬರುತ್ತಿದ್ದ ವರಮಾನವೂ ನಿಂತುಹೋಯಿತು. ತಂದೆಯ ಕೆಲಸವನ್ನು ತೆಗೆದುಕೊಳ್ಳಲು ಇನ್ನು ಯಾವ ಗಂಡು ಮಕ್ಕಳೂ ತಯಾ ರಾಗಿರಲಿಲ್ಲ. ಇದ್ದ ಸ್ವಲ್ಪ ಜಮೀನನ್ನು ಆಸಕ್ತಿಯಿಂದ ನೋಡಿಕೊಳ್ಳು ವವರು ಯಾರೂ ಇಲ್ಲದ ಕಾರಣ ಜೀವನಕ್ಕೆ ಕಷ್ಟವಾಯಿತು. ಆದರೆ ಅವರ ತಾಯಿ ಶ್ಯಾಮಸುಂದರಿದೇವಿ ಕಷ್ಟಗಳಿಗೆ ಸಿಕ್ಕಿ ಗ್ರಹಚಾರವನ್ನು ದೂರುವವರ ಗುಂಪಿಗೆ ಸೇರಿದವರಲ್ಲ. ಕಷ್ಟದಲ್ಲಿದ್ದರೂ ನೆಚ್ಚುಗೆಡಲಿಲ್ಲ. ಹೆಂಗಸಾದರೂ ಸಾಮರ್ಥ್ಯದಿಂದ ಅದನ್ನು ಎದುರಿಸಿದರು. ತನ್ನ ಮಕ್ಕಳನ್ನು ಹತ್ತಿರದ ನೆಂಟರಮನೆಗೆ ಕರೆದುಕೊಂಡುಹೋಗಿ ಬಿಟ್ಟು ಅಲ್ಲಿ ವಿದ್ಯೆಯನ್ನು ಕಲಿಸಲು ಮೊದಲುಮಾಡಿದರು. ಇವರ ಜೀವನಕ್ಕಾಗಿ ಆ ಹಳ್ಳಿಯಲ್ಲಿಯೇ ಒಬ್ಬರ ಮನೆಯಿಂದ ಭತ್ತವನ್ನು ತಂದು ಕುಟ್ಟಿ ಬಂದ ಕೂಲಿಯಿಂದ ಜೀವಿಸುತ್ತಿದ್ದರು. ಅಂತಹ ಕಷ್ಟದಲ್ಲಿಯೂ ಅವರ ತಾಯಿ ಪ್ರತಿ ವರುಷವೂ ಜಗದ್ಧಾತ್ರಿ ಪೂಜೆಯನ್ನು ಮಾಡುತ್ತಿದ್ದರು.

೧೮೭೪ನೇ ಏಪ್ರೆಲ್ ತಿಂಗಳ ಹೊತ್ತಿಗೆ ಶ್ರೀ ಶಾರದಾದೇವಿಯವರು ಮತ್ತೊಮ್ಮೆ ತೌರುಮನೆಗೆ ಹೋಗಿ ಬಂದರು. ಆಗಲೇ ಅವರಿಗೆ ದಕ್ಷಿಣೇಶ್ವರದಲ್ಲಿ ಶಂಭುಮಲ್ಲಿಕ್ ಎಂಬ ಒಬ್ಬ ಭಕ್ತನು ವಾಸಿಸುವುದಕ್ಕೆ ಬೇರೆ ಮನೆಯನ್ನು ಕಟ್ಟಿಸಿಕೊಟ್ಟಿದ್ದನು. ಅಲ್ಲಿ ಸುಮಾರು ಒಂದು ವರುಷವಿದ್ದು ನಂತರ ಶ್ರೀರಾಮಕೃಷ್ಣರಿಗೆ ಖಾಯಿಲೆ ಆದಾಗ ಅವರ ಶುಶ್ರೂಷೆಗೆಂದು ಪುನಃ ಹತ್ತಿರದ ನಹಬತ್ ಖಾನೆಗೆ ಬಂದವರು ಆ ಮನೆಗೆ ಹಿಂತಿರುಗಿ ಹೋಗಲಿಲ್ಲ. ಶ್ರೀರಾಮಕೃಷ್ಣರಿಗೆ ಖಾಯಿಲೆ ಗುಣ ವಾದಮೇಲೆ ಶ್ರೀ ಶಾರದಾದೇವಿಯವರಿಗೂ ಅದೇ ಖಾಯಿಲೆ ತಗುಲಿತು. ಭಕ್ತರೊಬ್ಬರ ಔಷಧೋಪಚಾರದಿಂದ ಸ್ವಲ್ಪ ಗುಣಮುಖವಾಯಿತು. ಆದರೆ ಮಾರನೆವರ್ಷ ೧೮೭೫ನೆಯ ಸೆಪ್ಟೆಂಬರ್ ಅವರ ಊರಿಗೆ ಹೋದಾಗ ನಿಂತಿದ್ದ ಖಾಯಿಲೆ ಪುನಃ ಮರುಕಳಿಸಿತು. ಅವರ ತಾಯಿ ಮತ್ತು ಸೋದರರು ತಮ್ಮ ಕೈಲಾದ ಪ್ರಯತ್ನವನ್ನೆಲ್ಲಾ ಮಾಡಿದರೂ ಅದರಿಂದ

ಏನೂ ಪ್ರಯೋಜನವಾಗಲಿಲ್ಲ. ಆಕೆ ಬದುಕುವುದೇ ಸಂದೇಹವಾಯಿತು. ಈ ಸುದ್ದಿ ಶ್ರೀರಾಮಕೃಷ್ಣರಿಗೂ ಮುಟ್ಟಿ "ಏನು, ಅವಳು ಸಾಯುವುದಕ್ಕೆ ಮಾತ್ರ ಹುಟ್ಟಿದಳೆ. ಮಾನವನ ಜೀವನದ ಗುರಿಯನ್ನು ಹೊಂದುವುದು ಅವಳ ಹಣೆಯಲ್ಲಿ ಬರೆಯಲಿಲ್ಲವೆ?" ಎಂದು ವ್ಯಥೆಪಟ್ಟರು.

ಶ್ರೀ ಶಾರದಾದೇವಿಯವರು ಮಾನವ ಪ್ರಯತ್ನವೆಲ್ಲಾ ನಿಷ್ಪ್ರಯೋಜನವಾದಮೇಲೆ ದೇವರ ಪ್ರಯತ್ನದಿಂದಲೇನಾದರೂ ಗುಣವಾಗುವುದೋ ಎಂದು ಸಂಕಲ್ಪಮಾಡಿದರು. ಅವರ ಊರಿನಲ್ಲಿ ಸಿಂಹವಾಹಿನಿಯ ದೇವಾಲಯವಿದೆ. ಅವರು ಅಲ್ಲಿಗೆ ಬಾಲ್ಯದಿಂದಲೂ ಆಡಿಗಡಿಗೆ ಹೋಗಿ ತಮ್ಮ ಕಷ್ಟಕಾಲದಲ್ಲಿ ಪ್ರಾರ್ಥಿಸಿ ಅದರಿಂದ ಪಾರಾಗಿದ್ದರು. ಆಮಶಂಕೆ ಜಾಸ್ತಿಯಾಗಿ ಶರೀರವೆಲ್ಲಾ ಬಾತುಹೋಗಿತ್ತು. ಮೂಗು ಕಣ್ಣುಗಳಲ್ಲಿ ಸದಾ ನೀರು ಸೋರುತ್ತಿತ್ತು. ಕಣ್ಣು ಮಂಜಾಯಿತು. ಪೂರ್ಣಚಂದ್ರನಿದ್ದಾಗಲೂ ಅಮಾವಾಸ್ಯೆಯ ಕತ್ತಲೆಯಂತೆ ಕಾಣುತ್ತಿದ್ದಿತು. ದೇವಿಯ ಹತ್ತಿರ ಹೋಗಿ ಅನ್ನ ನೀರುಗಳೇನೂ ಇಲ್ಲದಂತೆ ಪ್ರಾರ್ಥಿಸುವೆನೆಂದು ನಿರ್ಧರಿಸಿದರು. ಅದರಂತೆಯೇ ಒಂದು ದಿನ ರಾತ್ರಿ ಯಾರಿಗೂ ತಿಳಿಯದಂತೆ ಒಬ್ಬ ಹುಡುಗನನ್ನು ಕರೆದುಕೊಂಡು ಗುಡಿಗೆ ಹೋದರು. ಅವರು ಧ್ಯಾನದಲ್ಲಿದ್ದಾಗ ದೇವಿಯು ಪ್ರತ್ಯಕ್ಷಳಾಗಿ ಕಣ್ಣಿಗೆ ಹಾಕುವ ಔಷಧಿಯನ್ನು ಹೇಳಿದಳು. ಆಮಶಂಕೆಗೆ ಔಷಧಿಯನ್ನು ಅವರ ತಾಯಿವರಿಗೆ ಕನಸಿನಲ್ಲಿ ಹೇಳಿದಳಂತೆ. ಅನಂತರ ಇವುಗಳಿಂದ ರೋಗ ಗುಣಮುಖಕ್ಕೆ ತಿರುಗಿತು.

ಮಾರನೆಯ ವರ್ಷ ಅವರು ಹಳ್ಳಿಯಲ್ಲಿದ್ದಾಗ ಮಲೇರಿಯಾ ಜ್ವರದಿಂದ ನರಳುತ್ತಿದ್ದರು. ಅವರ ಊರಿನಲ್ಲಿ ಒಬ್ಬ ಅಳಲೇಕಾಯಿ ವೈದ್ಯನಿದ್ದನು. ಅವನೇ ಅಲ್ಲಿಗೆಲ್ಲಾ ನಿಪುಣ. ಶ್ರೀ ಶಾರದಾದೇವಿಯವರನ್ನು ಒಂದು ದೇವಾಲಯಕ್ಕೆ ಕರೆದುಕೊಂಡುಹೋಗಿ, ಅಲ್ಲಿ ನೆಲದಮೇಲೆ ಮಲಗಿಸಿ, ಒಂದು ಉರಿಯುವ ಕೊಳ್ಳಿಯಿಂದ ಯಾವುದೋ ಒಂದು ಮರದ ಎಲೆಯನ್ನು ಜ್ವರದ ಗಡ್ಡೆ ಇರುವ ಕಡೆ ಇಟ್ಟು ಸುಟ್ಟನು. ಈ ಕಟುಕ ವೈದ್ಯನ ರುದ್ರಚಿಕಿತ್ಸೆಯನ್ನು ಬಹಳ ಸ್ಥೈರ್ಯದಿಂದ ಅನುಭವಿಸಿದರಂತೆ! ಒಂದುಸಲವಾದರೂ ಕಿರುಚದೆ ನೋವನ್ನು ತಡೆದುಕೊಂಡರು. ಇದರಿಂದ ಅವರ ಖಾಯಿಲೆ ಎಷ್ಟರಮಟ್ಟಿಗೆ ಗುಣವಾಯಿತೋ ಇಲ್ಲವೋ ತಿಳಿಯದು. ಇದಾದ ಕೆಲವು ದಿನಗಳಮೇಲೆ ೧೮೭೨ನೆಯ ಜೂನಿಗೆ ದಕ್ಷಿಣೇಶ್ವರಕ್ಕೆ ಹೋದರು. ಅಷ್ಟುಹೊತ್ತಿಗೆ ಶ್ರೀರಾಮಕೃಷ್ಣರ ತಾಯಿ ಚಂದ್ರಮಣಿದೇವಿಯವರು ಕಾಲವಾಗಿದ್ದರು.

ನಾಲ್ಕನೇ ಬಾರಿ ೧೮೮೧ ನೇ ಫೆಬ್ರವರಿ ತಿಂಗಳಲ್ಲಿ ದಕ್ಷಿಣೇಶ್ವರಕ್ಕೆ ಹೋದರು. ಆದರೆ ಆಗ ಶ್ರೀರಾಮಕೃಷ್ಣರ ಸೇವಕನಾಗಿದ್ದ ಹೃದಯನ ನಡವಳಿಕೆಯನ್ನು ತಾಳಲಾರದೆ ಜಯರಾಮವಟಿಗೆ ಹೊರಟುಹೋದರು. ಶ್ರೀರಾಮಕೃಷ್ಣರು ದಿನದಿನಕ್ಕೆ ಪ್ರಖ್ಯಾತಿಗೆ ಬರುತ್ತಿದ್ದಾಗ ಇವರನ್ನು ನೋಡುವುದಕ್ಕೆ ಕಲ್ಕತ್ತಾ ನಗರದ ಅನೇಕ ಗಣ್ಯವಕ್ತಿಗಳು ಬರುತ್ತಿದ್ದರು. ಹೃದಯನು ಆಗ ಕಾಳಿಕಾದೇವಾಲಯದ ಮುಖ್ಯ ಪೂಜಾರಿಯಾಗಿದ್ದನು. ಜನರು ಶ್ರೀರಾಮಕೃಷ್ಣರನ್ನು ನೋಡಲು ಬರುವಾಗ ಎಲ್ಲರೂ ಇವನ ಮೂಲಕವಾಗಿಯೇ ಹೋಗುವಂತೆ ಮಾಡಿಕೊಂಡಿದ್ದನು. ಶ್ರೀರಾಮಕೃಷ್ಣರನ್ನು ಒಂದು ಕೊಠಡಿಯಲ್ಲಿಟ್ಟು ಯಾರು ತನಗೆ ಹಣಕಾಸುಗಳನ್ನು ಕೊಡುತ್ತಿದ್ದರೋ ಅವರಿಗೆ ಮಾತ್ರ ಇವರೊಂದಿಗೆ ಮಾತನಾಡಲು ಅವಕಾಶವನ್ನು ಕೊಡುತ್ತಿದ್ದನು. ಕ್ರಮೇಣ ರಾಮಕೃಷ್ಣರಿಗಿಂತಲೂ ತಾನು ದೊಡ್ಡವನೆಂದು ತಿಳಿಯಲು ಮೊದಲುಮಾಡಿದನು. ಮಾರ್ವಾಡಿಯ ಹತ್ತು ಸಾವಿರ ರೂಪಾಯನ್ನು ಬಿಟ್ಟುದಕ್ಕೆ ಶ್ರೀರಾಮಕೃಷ್ಣರಮೇಲೆ ಸಿಟ್ಟಾದನು. ಶ್ರೀರಾಮಕೃಷ್ಣರು ಮಾಡುತ್ತಿದ್ದಂತೆ ರಾತ್ರಿಯ ಹೊತ್ತು ಪಂಚವಟಿಯ ಕೆಳಗೆ ಧ್ಯಾನಕ್ಕೆ ಹೋಗುವುದು, ಭಾವಸಮಾಧಿ ಬಂದಂತೆ ನಟಿಸುವುದು, ಇವುಗಳನ್ನೆಲ್ಲಾ ಮಾಡಿ ಜನರನ್ನು ಆಕರ್ಷಿಸಿ ಶ್ರೀರಾಮಕೃಷ್ಣರಲ್ಲಿಗೆ ಜನರು ಹೋಗದೆ ತನ್ನಲ್ಲಿಗೆ ಬರಲಿ ಎಂದು ಪ್ರಯತ್ನಪಟ್ಟನು. ಶ್ರೀರಾಮಕೃಷ್ಣರು ಇವನು ಹಿಂದೆ ಮಾಡಿದ ಸೇವೆಯನ್ನು ನೆನೆದು ಸದ್ಯಕ್ಕೆ ಕೊಡುತ್ತಿದ್ದ ಕೋಟಲೆಯನ್ನೆಲ್ಲಾ ಸಹನೆಯಿಂದ ಸಹಿಸುತ್ತಿದ್ದರು. ಒಂದು ದಿನ ಅದು ಮಿತಿಮೀರಿ ಹೋಗಲು, ಗುಡಿಗೆ ಹೋಗಿ ಜಗನ್ಮಾಯಿಯ ಹತ್ತಿರ, "ಹೃದಯ ಇಲ್ಲಿದ್ದರೆ ತೊಂದರೆಯಾಗುವುದು, ನೀನು ದಯವಿಟ್ಟು ಇಲ್ಲಿಂದ ಅವನನ್ನು ಕಳುಹಿಸು" ಎಂದು ಬೇಡಿದರು. ಮಾರನೆಯ ದಿನವೇ ಇವನ ಕೆಲಸದಲ್ಲಿ ಏನೋ ತಪ್ಪನ್ನು ಕಂಡುಹಿಡಿದು ಗುಡಿಯವರು ಅವನನ್ನು ತೆಗೆದು ಹಾಕಿದರು. ನಂತರ ರಾಮಲಾಲ್ ಎಂಬುವನು ಪೂಜಾರಿಯಾದನು. ಇವನಿಗೂ ಮುಖ್ಯ ಪೂಜಾರಿಯ ಅಮಲೇರಿತು. ಶ್ರೀರಾಮಕೃಷ್ಣರನ್ನು ಸರಿಯಾಗಿ ನೋಡಿಕೊಳ್ಳುತ್ತ ಇರಲಿಲ್ಲ. ಆಗ ಶ್ರೀ ಶಾರದಾದೇವಿಯವರು ಜಯರಾಮವಟಿಯಲ್ಲಿ ಇದ್ದರು. "ನನ್ನನ್ನು ನೋಡಿಕೊಳ್ಳುವುದಕ್ಕೆ ಯಾರೂ ಇಲ್ಲ. ನೀನು ಒಂದು ಪಲ್ಲಕ್ಕಿಯನ್ನಾದರೂ ಮಾಡಿಕೊಂಡು ಬಾ" ಎಂದು ಶ್ರೀರಾಮಕೃಷ್ಣರು ಶ್ರೀ ಶಾರದಾದೇವಿಯವರಿಗೆ ಕಾಗದ ಬರೆದರು. ಇದರಂತೆ ೧೮೮೫ನೇ ಫೆಬ್ರವರಿಯಲ್ಲಿ

ಶ್ರೀ ಶಾರದಾದೇವಿಯವರು ದಕ್ಷಿಣೇಶ್ವರಕ್ಕೆ ಬಂದರು. ಇದಾದಮೇಲೆ ಎರಡುಸಲ ಶ್ರೀರಾಮಕೃಷ್ಣರು ಕಾಲವಾಗುವುದಕ್ಕೆ ಮುಂಚೆ ಜಯರಾಮ ವಟಿಗೆ ಹೋಗಿ ಬಂದಿದ್ದರು. ಅದರಲ್ಲಿ ಒಂದುಸಲ ಜಯರಾಮವಟಿಯಿಂದ ಬರುವಾಗ ಒಂದು ಗಮನಾರ್ಹವಾದ ಘಟನೆ ಜರುಗಿತು.

ಜಯರಾಮವಟಿಯಿಂದ ದಕ್ಷಿಣೇಶ್ವರಕ್ಕೆ ಬರಬೇಕಾದರೆ ನಡುವೆ ದಟ್ಟವಾದ ಕಾಡಿನ ಮೂಲಕ ಹಾದು ಹೋಗಬೇಕಾಗಿತ್ತು. ಗಾಡಿ ಹೋಗಲು ಅನುಕೂಲವಾದ ರಸ್ತೆಗಳಿರಲಿಲ್ಲ; ತುಂಬ ಶ್ರೀಮಂತರಾದರೆ ಪಲ್ಲಕ್ಕಿಯನ್ನು ಮಾಡಿಕೊಂಡು ಹೋಗಬಹುದಾಗಿತ್ತು. ಉಳಿದವರೆಲ್ಲಾ ಕಾಲು ನಡಿಗೆಯಿಂದಲೆ ದಾರಿಯನ್ನು ಸಾಗಿಸಬೇಕಾಗಿತ್ತು. ಮಧ್ಯೆ ದಟ್ಟವಾದ ಕಾಡಿನಲ್ಲಿ ಒಂದು ಕಾಳಿಯ ಗುಡಿ ಇದ್ದಿತು. ಅಲ್ಲಿ ಕೆಲವು ಡಕಾಯಿತರು ನರಬಲಿಯನ್ನು ದೇವಿಗೆ ಕೊಡುತ್ತಿದ್ದರಂತೆ. ಒಮ್ಮೆ ಶಾರದಾದೇವಿಯವರು ಇತರ ಜನರೊಡನೆ ಕಾಲುನಡಿಗೆಯಲ್ಲಿ ಈ ದಾರಿಯಲ್ಲಿ ಹೊರಟಿದ್ದರು. ಸಂಜೆಯಾಗುತ್ತಾ ಬಂದಿತು. ಕತ್ತಲೆಯಾಗುವುದರೊಳಗಾಗಿ ಆ ಕಾಡನ್ನು ದಾಟಿಬಿಡುವ ಎಂದು ವೇಗವಾಗಿ ನಡೆಯಲಾರಂಭಿಸಿದರು. ಆದರೆ ಇತರರ ವೇಗಕ್ಕೆ ಶಾರದಾದೇವಿಯವರು ನಡೆಯಲಾಗಲಿಲ್ಲ. ಆದುದರಿಂದ ಇವರ ದೆಸೆಯಿಂದ ಈ ಗುಂಪಿನಲ್ಲಿ ಉಳಿದವರೆಲ್ಲರೂ ಶ್ರೀ ಶಾರದಾದೇವಿಯವರಂತೆ ನಿಧಾನವಾಗಬೇಕಾಯಿತು. ಇದನ್ನು ನೋಡಿ, "ನನಗೊಬ್ಬಳಿಗೋಸ್ಕರ ನೀವು ಇಷ್ಟು ಜನ ಕಾಯಬೇಕಾಗಿಲ್ಲ. ನೀವು ಮುಂದೆ ಹೋಗಿ ಸಿಕ್ಕುವ ಹಳ್ಳಿಯಲ್ಲಿರಿ. ನಾನು ಬರುತ್ತೇನೆ" ಎಂದು ಹೇಳಿದರು. ಗುಂಪಿನವರು ಮುಂದೆ ಹೊರಟು ಕ್ರಮೇಣ ಶ್ರೀ ಶಾರದಾದೇವಿಯವರಿಗೆ ಕಾಣದಂತೆ ಕಣ್ಮರೆಯಾದರು. ಶ್ರೀ ಶಾರದಾದೇವಿಯವರು ಒಂಟಿಯಾದರು. ಸೂರ್ಯನು ಮುಳುಗಿದನು. ಕಗ್ಗತ್ತಲು ಸುತ್ತ ಕವಿಯಿತು. ಮಿಡಿತೆಗಳ ಧ್ವನಿ ಮತ್ತಷ್ಟು ಭಯವನ್ನು ಹೆಚ್ಚಿಸಿತು. ಎಷ್ಟು ಪ್ರಯತ್ನಪಟ್ಟರೂ ವೇಗವಾಗಿ ನಡೆದು ಕಾಡನ್ನು ದಾಟಲು ಆಗಲಿಲ್ಲ. ಆಗ ರಸ್ತೆಯಲ್ಲಿ ಒಬ್ಬ ಕಪ್ಪು ಭೀಮಾಕಾರದ ಮನುಷ್ಯನು ಹೆಗಲಮೇಲೆ ದೊಣ್ಣೆಯನ್ನು ಹಾಕಿಕೊಂಡು ಬರುತ್ತಿದ್ದನು. ಅವನನ್ನು ನೋಡಿ ಇವರಿಗೆ ಸ್ವಲ್ಪ ಅಂಜಿಕೆಯಾಯಿತು. ಕಾಡಿನ ಮಧ್ಯದಲ್ಲಿ ಯಾರೂ ಹತ್ತಿರ ಇಲ್ಲದೆ ಇರುವಾಗ ಕಿರಿಚಿ, ಅತ್ತು ಅಥವಾ ಓಡಿದರೆ ಪ್ರಯೋಜನವಿಲ್ಲವೆಂದು ಅವನನ್ನು ನೋಡುತ್ತಾ ಸುಮ್ಮನೆ ನಿಂತರು. ಆ ಮನುಷ್ಯನು, "ಈ ಕತ್ತಲೆಯಲ್ಲಿ ಹೋಗುತ್ತಿರುವ

ಹೆಂಗಸು ಯಾರು?" ಎಂದು ಪ್ರಶ್ನೆ ಮಾಡಿದನು. ಇವರು ಸ್ವಲ್ಪವೂ ಅಂಜದೆ, "ಅಪ್ಪ! ನನ್ನ ಜೊತೆಯವರು ಮುಂದೆ ಹೊರಟುಹೋದರು. ನನಗೆ ದಾರಿತಪ್ಪಿದಂತೆ ಕಾಣುತ್ತಿದೆ. ನಿನ್ನ ಅಳಿಯ ದಕ್ಷಿಣೇಶ್ವರದ ಕಾಳಿಕಾಗುಡಿಯಲ್ಲಿ ಇದ್ದಾರೆ. ನಾನು ಅಲ್ಲಿಗೆ ಹೊರಟಿರುವುದು. ನೀನು ನನ್ನನ್ನು ಅಲ್ಲಿಯವರೆಗೆ ಕರೆದುಕೊಂಡುಹೋಗಿ ಬಿಟ್ಟರೆ ಅವರು ತುಂಬ ಸಂತೋಷಪಡುವರು" ಎಂದರು.

ಅಷ್ಟರಲ್ಲಿಯೇ ಮತ್ತೊಂದು ಸ್ತ್ರೀವ್ಯಕ್ತಿಯು ಅಲ್ಲಿಗೆ ಬಂದಿತು. ಆಕೆ ಮಾತನಾಡುತ್ತಿದ್ದ ಪುರುಷನ ಪತ್ನಿ. ಹೆಂಗಸನ್ನು ನೋಡಿ ಶಾರದಾದೇವಿಯವರಿಗೆ ಸ್ವಲ್ಪ ಧೈರ್ಯ ಬಂದಿತು. ಅವಳ ಹತ್ತಿರ ಹೋಗಿ ಅವಳ ಕೈಯನ್ನು ಹಿಡಿದುಕೊಂಡು, "ನಾನು ನಿನ್ನ ಮಗಳು ಶಾರದೆ, ಜೊತೆಯವರು ಹೊರಟುಹೋದರು. ಬಹಳ ಕಷ್ಟದಲ್ಲಿ ಸಿಕ್ಕಿಬಿದ್ದಿರುವೆನು. ದೇವರೇ ನನ್ನನ್ನು ಪಾರುಮಾಡಲು ತಂದೆಯನ್ನೂ ನಿನ್ನನ್ನೂ ಕಳುಹಿಸಿದ. ಇಲ್ಲದಿದ್ದರೆ ನನ್ನ ಗತಿ ಏನಾಗುತ್ತಿತ್ತೋ" ಎಂದು ನಿಸ್ಸಂದೇಹ ಭಾವದಿಂದ ಹೇಳಿದರು. ಆಪತ್ತಿನಲ್ಲಿ ಸಿಕ್ಕಿದ ಅಬಲೆಯ ಮಾತಿಗೆ ಮರುಗಿ ಇಬ್ಬರೂ ಮನಕರಗಿದರು. ಅವರು ಶ್ರೀ ಶಾರದಾದೇವಿಯವರನ್ನು ತಮ್ಮ ಮಗಳೆಂದು ಭಾವಿಸಿ ಅವರನ್ನು ಸಮಾಧಾನಪಡಿಸಿ ಹೆಚ್ಚು ನಡೆಯಗೊಡದೆ ಹತ್ತಿರ ಇದ್ದ ತಲೆಭಲೋ ಎಂಬ ಸಣ್ಣ ಹಳ್ಳಿಯಲ್ಲಿ ತಮಗೆ ಪರಿಚಿತರಾದವರ ಒಂದು ಅಂಗಡಿಯಲ್ಲಿ ಅವರಿಗೆ ಮಲಗಿಕೊಳ್ಳಲು ಅಣಿಮಾಡಿದರು. ರಾತ್ರಿ ಊಟಕ್ಕೆ ಪುರಿಯನ್ನು ಕೊಟ್ಟರು. ಆತನ ಸತಿ ತನ್ನ ಮಗಳು ಶಾರದೆಗೆ ತನ್ನ ಬಟ್ಟೆಯನ್ನು ಹಾಸಿ ಹಾಸಿಗೆ ಮಾಡಿದಳು. ಅಂದು ರಾತ್ರಿಯೆಲ್ಲಾ ಕಾವಲಿದ್ದು ತಂದೆತಾಯಿಗಳಂತೆ ರಕ್ಷಿಸಿದರು. ಮಾರನೇದಿನ ಅವರನ್ನು ತಾರಕೇಶ್ವರದವರೆಗೂ ಕರೆದುಕೊಂಡು ಹೋಗಿ ಅಲ್ಲಿ ಸ್ವಲ್ಪ ವಿಶ್ರಮಿಸಿಕೊಳ್ಳುವಂತೆ ಮಾಡಿದರು. ಸತಿಯು ತನ್ನ ಗಂಡನಿಗೆ, "ನಮ್ಮ ಮಗಳು ಏನೂ ತಿಂದಿಲ್ಲ. ಬೇಗ ತಾರಕನಾಥನ ಪೂಜೆಮಾಡಿ ಅಂಗಡಿಗೆ ಹೋಗಿ ಏನಾದರೂ ತರಕಾರಿ ತೆಗೆದುಕೊಂಡು ಬನ್ನಿ. ನನ್ನ ಮಗಳಿಗೆ ಈ ದಿವಸ ಹಬ್ಬದ ಊಟವನ್ನು ಕೊಡಬೇಕು" ಎಂದು ಹೇಳಿ ಕಳುಹಿಸಿದಳು.

ಆತ ಸಾಮಾನು ತರಲು ಪೇಟೆಗೆ ಹೋಗಿಬಂದನು. ಅಷ್ಟು ಹೊತ್ತಿಗೆ ಶಾರದಾದೇವಿಯರೊಂದಿಗೆ ಬಂದ ಜನಗಳು ಇವರನ್ನು ಅಲ್ಲಿ ಇಲ್ಲಿ ಹುಡುಕುತ್ತಾ ಇವರು ಇರುವ ಸ್ಥಳಕ್ಕೆ ಬಂದರು. ಶ್ರೀ ಶಾರದಾದೇವಿ

ಯವರು ಅವರಿಗೆ ತನ್ನ ಹೊಸ ತಂದೆ ತಾಯಿಯನ್ನು ತೋರಿಸಿ, "ಇವರು ರಾತ್ರಿ ನನ್ನ ಸಹಾಯಕ್ಕೆ ಬರದಿದ್ದದರೆ ನಾನು ಏನಾಗುತ್ತಿದ್ದೆನೊ" ಎಂದರು. ಅಪರಿಚಿತ ದಂಪತಿಗಳು ಅಡಿಗೆಮಾಡಿ ಊಟ ಕೊಟ್ಟು ಕಂಬನಿದುಂಬಿ ಬೀಳ್ಕೊಟ್ಟರು. ಶ್ರೀ ಶಾರದಾದೇವಿಯವರಿಗೂ ತಾವು ಬಿಟ್ಟುಹೋಗುವಾಗ ಬರುವ ಕಣ್ಣೀರನ್ನು ತಡೆಯಲು ಆಗಲಿಲ್ಲ. ಒಂದು ದಿನ ರಾತ್ರಿಯ ಬಾಂಧವ್ಯವು ಎಷ್ಟು ನಿಕಟತೆಯನ್ನು ಹುಟ್ಟಿಸಿತ್ತು! ಇಬ್ಬರ ಜಾತಿಯೇ ಬೇರೆ, ಕುಲವೇ ಬೇರೆ. ಆದರೂ ಹೆತ್ತ ತಂದೆ ತಾಯಿಗಳ ಪ್ರೇಮ ಅವರಲ್ಲಿತ್ತು. ಶ್ರೀ ಶಾರದಾದೇವಿಯವರು ಅವರಿಗೆ ದಕ್ಷಿಣೇಶ್ವರಕ್ಕೆ ಬರುವುದಕ್ಕೆ ಆಹ್ವಾನವಿತ್ತರು. ಆ ಹೆಂಗಸು ದುಃಖದಿಂದ ಇವರೊಂದಿಗೆ ಬಹಳ ದೂರದವರೆವಿಗೂ ನಡೆದುಕೊಂಡುಹೋಗಿ ಪಕ್ಕದ ಹೊಲದಲ್ಲಿ ಬೆಳೆದ ಬಟಾಣಿಯನ್ನು ಕೊಯ್ದು ಶ್ರೀ ಶಾರದಾದೇವಿಯವರ ಸೆರಗಿನಲ್ಲಿ ಕಟ್ಟಿ "ರಾತ್ರಿ ಫಲಹಾರವನ್ನು ಮಾಡುವಾದ ಅದನ್ನು ತಿನ್ನು" ಎಂದು ಹೇಳಿ ಆಕೆಯನ್ನು ಬೀಳ್ಕೊಟ್ಟಳು.

ಶ್ರೀ ಶಾರದಾದೇವಿಯವರ ಆಹ್ವಾನವನ್ನು ಮನ್ನಿಸಿ ಆ ಅಪರಿಚಿತ ದಂಪತಿಗಳು ಅನೇಕವೇಳೆ ದಕ್ಷಿಣೇಶ್ವರಕ್ಕೆ ಬರುತ್ತಿದ್ದರು. ಬರುವಾಗ ಮಗಳಿಗೆ ಸ್ವಲ್ಪ ತಿಂಡಿಯನ್ನು ತರುತ್ತಿದ್ದರು. ಈ ಕಥೆಯನ್ನು ಕೇಳಿ ತಿಳಿದುಕೊಂಡ ಶ್ರೀರಾಮಕೃಷ್ಣರು ಅವರಿಬ್ಬರನ್ನು ಅಳಿಯನಂತೆ ಉಪಚಾರ ಮಾಡಿದರು. ಶ್ರೀ ಶಾರದಾದೇವಿಯವರು ಈ ವಿಚಾರವಾಗಿ ಕೆಲವು ಕಾಲದಮೇಲೆ ಹೇಳುತ್ತಾ, "ನನ್ನ ಅಪರಿಚಿತ ತಂದೆ ಈಗ ಸಾಧುವಿನಂತೆ ಕಂಡರೂ ಹಿಂದೆ ಅನೇಕ ಕೊಲೆ ಕಳವುಗಳನ್ನು ಮಾಡಿರಬಹುದು" ಎಂದು ಹೇಳುತ್ತಿದ್ದರು. ಅವರು ಅಬಲೆಯಾಗಿದ್ದರೂ ಅವರಲ್ಲಿ ಸನ್ನಿವೇಶನ್ನು ಎದುರಿಸಲು ಬೇಕಾದ ಧೈರ್ಯ, ಸ್ಥೈರ್ಯ, ವಿವೇಕ, ಹೇಗೆ ಮನೆಮಾಡಿಕೊಂಡಿದ್ದಿತು ಎಂಬುದಕ್ಕೆ ಇದು ಸಾಕ್ಷಿ.



## ೧೧. ಪತಿ ವಿಯೋಗ

ಜೀವನದಲ್ಲಿ ಸುಖವಾದಮೇಲೆ ದುಃಖ, ದುಃಖವಾದಮೇಲೆ ಸುಖ, ಒಂದಾದ ಮೇಲೊಂದು ಬರುವುದು. ಕೊನೆಗೆ ಅವತಾರಪುರುಷನಾಗಲೀ, ಸಾಧಾರಣಜೀವಿಯಾಗಲೀ, ಎಲ್ಲರೂ ಒಮ್ಮೆ ಮೃತ್ಯುವಿಗೆ ವಶರಾಗಲೇ ಬೇಕು. ಶ್ರೀ ಶಾರದಾದೇವಿಯವರ ಜೀವನದಲ್ಲಿಯೂ ಶ್ರೀರಾಮಕೃಷ್ಣರ ಸನ್ನಿಧಿಯಲ್ಲಿದ್ದು, ಅವರ ಸೇವೆಯನ್ನು ಮಾಡಿ, ಉಪದೇಶದ ದಿವ್ಯಾಮೃತವನ್ನು ಕೇಳುತ್ತಿದ್ದ, ಸವಿದಿನಗಳು ಕೊನೆಗಾಣುವುದರಲ್ಲಿತ್ತು.

ಶ್ರೀರಾಮಕೃಷ್ಣರಿಗೆ ಬಂದ ಭಕ್ತರೊಡನೆ ಮಾತನಾಡಿ ಮಾತನಾಡಿ ಕೊನೆಗೆ ಗಂಟಲಿನವ್ರಣರೋಗ ಪ್ರಾಪ್ತವಾಯಿತು. ಪ್ರಖ್ಯಾತರಾದ ವೈದ್ಯರೆಲ್ಲರೂ ಬಂದು ಚಿಕಿತ್ಸೆ ಮಾಡಿಹೋದರು. ಆದರೂ ಏನೂ ಪ್ರಯೋಜನವಾಗಲಿಲ್ಲ. ಅವರನ್ನು ಅಲ್ಲಿಂದ ಬಿಡಿಸಿ ಕಲ್ಕತ್ತಾ ನಗರದೊಳಗೆ ಎಲ್ಲಿಯಾದರೂ ಇಟ್ಟರೆ ವೈದ್ಯನಿಗೆ ಬಂದುಹೋಗಲು ಹತ್ತಿರವಾಗುತ್ತದೆ ಎಂದು ತಿಳಿದು ಶ್ಯಾಮಪುರದಲ್ಲಿ ಕೆಲವು ದಿನಗಳು ಇಟ್ಟಿದ್ದರು. ಆಗ ಸ್ವಲ್ಪ ದಿನಗಳು ಶ್ರೀ ಶಾರದಾದೇವಿಯವರು ದಕ್ಷಿಣೇಶ್ವರದಲ್ಲಿಯೇ ಇದ್ದರು. ಅವರೊಂದಿಗೆ ಕೆಲವು ಸ್ತ್ರೀಭಕ್ತರು ವಾಸಿಸುತ್ತಿದ್ದರು. ಅವರಲ್ಲಿ ಗುಲಾಬ್‌ಮಾ ಎಂಬಾಕೆ ತಿಳಿಯದೆಯೇ, " ಶ್ರೀ ಶಾರದಾದೇವಿಯವರಿಂದ ಬೇಸತ್ತು ಶ್ರೀರಾಮಕೃಷ್ಣರು ಕಲ್ಕತ್ತೆಗೆ ಹೊರಟುಹೋದರು" ಎಂದಳು. ಅದನ್ನು ಕೇಳಿ ಅತ್ಯಂತ ದುಃಖವಾಯಿತು. ತಾನು ತಿಳಿಯದೆ ಶ್ರೀರಾಮಕೃಷ್ಣರ ಹೃದಯವನ್ನು ನೋಯಿಸಿರುವಂತಹ ಕಾರ್ಯವೇನಿರಬಹುದೆಂದು ಆಲೋಚಿಸಿದರು. ಆದರೆ ಯಾವೂ ಹೊಳೆಯಲಿಲ್ಲ. ತಕ್ಷಣವೇ ಒಂದು ಗಾಡಿಯನ್ನು ಮಾಡಿಕೊಂಡು ಶ್ರೀರಾಮಕೃಷ್ಣರಲ್ಲಿಗೆ ಹೋಗಿ, "ತಾವು ಏನಾದರೂ ನಾನು ತಪ್ಪು ಮಾಡಿದಕ್ಕೆ ಜಿಗುಪ್ಸೆತಾಳಿ ಇಲ್ಲಿಗೆ ಬಂದಿರಾ? ಗುಲಾಬ್ ಹಾಗೆ ಹೇಳುತ್ತಾಳಲ್ಲಾ" ಎಂದು ಕಂಬನಿದುಂಬಿ ಕೇಳಿದರು. ಶ್ರೀರಾಮಕೃಷ್ಣರು, " ನಾನು ಹಾಗೆ ಏನನ್ನೂ ಹೇಳಿಲ್ಲವಲ್ಲ ; ತಿಳಿಯದೇ ಇರುವವರು ಹೇಳಿದ ಮಾತಿರಬೇಕು" ಎಂದು ಸಮಾಧಾನಮಾಡಿ ಕಳುಹಿಸಿದರು. ಗುಲಾಬ್‌ಮಾಳನ್ನು ಕರೆಯಿಸಿ ಅವಳು ಹಾಗೆ ತಿಳಿಯದೆ ಆಡಿದ ಮಾತಿನಿಂದ ಶಾರದೆಗೆ ಎಷ್ಟು ದುಃಖವಾಗಿದೆ ಎಂದು ತಿಳಿಸಿ, ಹೋಗಿ ಅವರ ಹತ್ತಿರ ಕ್ಷಮಾಪಣೆಯನ್ನು ಬೇಡುವಂತೆ ಹೇಳಿದರು. ತಮಾಷೆಗಾಗಿ ಆಡಿದ ಒಂದು ಮಾತಿನಿಂದ ಇಂತಹ ಪ್ರಸಂಗ ಬರುತ್ತದೆ ಎಂದು ಆಕೆ ಯೋಚಿಸುತ್ತಿರಲಿಲ್ಲ. ಶ್ರೀ ಶಾರದಾದೇವಿಯವರಲ್ಲಿಗೆ ಹೋಗಿ

ಇವರು ಅಳುತ್ತಾ ತಾವು ಮಾಡಿದ ತಪ್ಪನ್ನು ಕ್ಷಮಿಸಬೇಕು—ಎಂದು ಬೇಡಿ ಕೊಂಡರು. ಶ್ರೀ ಶಾರದಾದೇವಿಯವರು ಏನೂ ಹೇಳದೆ ನಗುತ್ತ, ಇವರ ಕೆನ್ನೆಯನ್ನು ಪ್ರೀತಿಯಿಂದ ಮುಟ್ಟಿ ಆಕೆಯನ್ನು ಸಂತೈಸಿದರು. ಹಿಂದೆ ಆಡಿದ್ದ ಮಾತನ್ನೆಲ್ಲಾ ಇವರು ಮರೆತಿದ್ದರು. ಇನ್ನೊಬ್ಬರು ತಿಳಿಯದೆ ಮಾಡಿದ ಒಂದು ಅಪಕಾರವನ್ನು ಸದಾ ನೆನೆಯುವ ಕ್ಷುದ್ರಹೃದಯದ ವರಲ್ಲ ಶ್ರೀ ಶಾರದಾದೇವಿಯವರು.

ಪತಿಯು ರೋಗದಲ್ಲಿ ನರಳುತ್ತಿದ್ದಾಗ ಕೆಲವು ದಿನ ಅವರ ಶಿಷ್ಯರು ಅವರ ಊಟ ಉಪಚಾರಗಳನ್ನು ನೋಡಿಕೊಳ್ಳುತ್ತಿದ್ದರು. ಆದರೆ ಕ್ರಮೇಣ ಶ್ರೀ ಶಾರದಾದೇವಿಯವರಿದ್ದರೆ ಈ ಕೆಲಸಕ್ಕೆ ಚೆನ್ನಾಗಿರುತ್ತಿತ್ತು ಎಂದು ತಿಳಿದರೂ ಅವರನ್ನು ಕರೆಯಲು ಹಿಂಜರಿಯುತ್ತಿದ್ದರು. ಮನೆ ಸಣ್ಣದು. ಅನೇಕ ಜನ ಗಂಡಸರು ಇದ್ದರು. ಇವರಿಗೆ ಇಳಿದುಕೊಳ್ಳು ವುದಕ್ಕೆ ಸೌಕರ್ಯವಾದ ಯಾವ ಕೋಣೆಯೂ ಇರಲಿಲ್ಲ. ಏನಾದರೂ ಆಗಲಿ ಅವರನ್ನು ಕೇಳಿ ನೋಡೋಣವೆಂದು ಶ್ರೀಶಾರದಾದೇವಿಯವರನ್ನು ಕೇಳಿ ದಾಗ ಅವರು ತಮ್ಮ ಪತಿಯ ಜೀವವೇ ಅಪಾಯದಲ್ಲಿರುವಾಗ ತಮ್ಮ ನಾಚಿಕೆ ಅವರ ಸೇವೆಗೆ ಅಡ್ಡಿಬಾರದಿರಲಿ ಎಂದು ಅದನ್ನು ಒತ್ತಟ್ಟಿಗಿಟ್ಟು ಹೋಗಲು ಒಪ್ಪಿಕೊಂಡರು. ಆ ಮನೆಯಮೇಲೆ ಒಂದು ಸಣ್ಣ ಕೊಠಡಿ ಯಲ್ಲಿ ಶ್ರೀಶಾರದಾದೇವಿಯವರು ವಾಸಿಸುತ್ತಿದ್ದರು. ಬೆಳಗ್ಗೆ ಹೊತ್ತಿಗೆ ಮುಂಚೆ ಎದ್ದು ತಮ್ಮ ಕೆಲಸವನ್ನೆಲ್ಲಾ ತೀರಿಸಿ ಒಳಗೆ ಹೋದರೆ ಶ್ರೀರಾಮ ಕೃಷ್ಣರ ಊಟ ಮತ್ತು ಅವರಿಗೋಸುಗ ಬೇಕಾದ ಕೆಲವು ಕೆಲಸಗಳಿಗೆ ಮಾತ್ರ ಹೊರಗೆ ಬರುತ್ತಿದ್ದರು. ಅವರು ಬರುವಾಗ ಲಟು ಎಂಬ ಶಿಷ್ಯ ನನ್ನು ಕಳುಹಿಸಿ ಶ್ರೀರಾಮಕೃಷ್ಣರ ಹತ್ತಿರ ಹೊರಗಡೆ ಜಾಸ್ತಿ ಗಂಡಸ ರಿದ್ದರೆ ಅವರಿಗೆ ಹೊರಗೆ ಹೋಗುವಂತೆ ಹೇಳಿ ಆಹಾರವನ್ನು ತಂದು ಬಡಿಸುತ್ತಿದ್ದರು.

ಶಾಮಪುಕುರದಲ್ಲಿದ್ದ ಮನೆಯಲ್ಲಿ ಸುಮಾರು ಮೂರು ತಿಂಗಳು ಶ್ರೀರಾಮಕೃಷ್ಣರು ವಾಸವಾಗಿದ್ದರು. ಮನೆ ನಗರದ ಮಧ್ಯದಲ್ಲಿತ್ತು. ಬಹಳ ಗದ್ದಲ. ಒಳ್ಳೆಯ ಗಾಳಿ ಬೆಳಕು ಬರುವುದಕ್ಕೆ ಅವಕಾಶವಿರಲಿಲ್ಲ. ಅಲ್ಲಿಂದ ಕಾಶೀಪುರದಲ್ಲಿದ್ದ ಒಂದು ತೋಟದಮನೆಗೆ ಬಂದರು. ಹಿಂದಿನ ಮನೆಗಿಂತ ಅದು ಅನುಕೂಲವಾಗಿತ್ತು. ವೈದ್ಯರು ತಮ್ಮ ಕುಶಲತೆ ಯನ್ನೆಲ್ಲಾ ತೋರಿ ಚಿಕಿತ್ಸೆ ಮಾಡಿದರು. ಶಿಷ್ಯರು ಮತ್ತು ಶ್ರೀಶಾರದಾ ದೇವಿಯವರು ತಮ್ಮ ಕೈಲಾದ ಸೇವೆಯನ್ನೆಲ್ಲಾ ಮಾಡಿದರು. ಆದರೂ

ರೋಗ ಉಲ್ಬಣಾವಸ್ಥೆಯನ್ನು ತಾಳಿತು. ಶ್ರೀಶಾರದಾದೇವಿಯವರು ಇನ್ನು ಮಾನವ ವೈದ್ಯರಿಂದ ಪ್ರಯೋಜನವಿಲ್ಲವೆಂದು ತಿಳಿದು, ಹತ್ತಿರ ಇದ್ದ ತಾರಕೇಶ್ವರಕ್ಕೆ ಹೋಗಿ ಅಲ್ಲ ಎರಡು ದಿನಗಳು ದೇವರ ಹತ್ತಿರ ಆಹಾರ ನಿದ್ರೆಗಳಿಲ್ಲದೆ ಪ್ರಾರ್ಥನೆಯಲ್ಲಿ ಕಳೆದರು. ಎರಡನೆಯ ದಿನ ರಾತ್ರಿ ಒಬ್ಬನು ದೊಣ್ಣೆಯಿಂದ ಮಡಿಕೆಗಳನ್ನು ಒಡೆಯುತ್ತಿದ್ದ ಶಬ್ದ ಕೇಳಿಸಿತು. ಇದಾದ ಮೇಲೆ ಮನಸ್ಸಿನಲ್ಲಿ ಒಂದು ವೈರಾಗ್ಯದ ಭಾವ ಮೂಡಿತು. ಗಂಡನು ಯಾರು? ಹೆಂಡತಿ ಯಾರು? ಎಲ್ಲ ಕೆಲವು ದಿನಗಳ ಪರಸ್ಪರ ಅನುರಾಗ. ಹಿಂದೆ ಬರುವಾಗ ನಾವು ಒಟ್ಟಿಗೆ ಬರಲಿಲ್ಲ. ಹೋಗುವಾಗ ನಾವು ಒಟ್ಟಿಗೇ ಹೋಗುವುದಿಲ್ಲ. ಯಾಕೆ ನಾನು ಯಾವ ದಿನವಾದರೂ ಹೋಗುವ ಮತ್ತೊಂದು ದೇಹವನ್ನು ಉಳಿಸಲು ನನ್ನ ಪ್ರಾಣ ಬಲಿಕೊಡಬೇಕು. ದೇವರು ಮಾಡಿಸಿದ್ದು ಆಗಲಿ—ಎಂದು ಬೆಳಗ್ಗೆ ಮನೆಗೆ ಬಂದರು. ಶ್ರೀರಾಮಕೃಷ್ಣರ ದಿವ್ಯದೃಷ್ಟಿಗೆ ಇವರು ಹೋದ ವಿಷಯ ಗೊತ್ತಾಗಿತ್ತು. ಹಿಂದಿನ ರಾತ್ರಿ ಅವರಿಗೆ ಕನಸಿನಲ್ಲಿ ಒಂದು ಆನೆ ಔಷಧಿ ತರಲು ನೆಲವನ್ನು ತನ್ನ ಸೊಂಡಲಿನಿಂದ ಕೊರೆಯುತ್ತಿರುವಂತೆ ತೋರಿತು. ಶ್ರೀಶಾರದಾದೇವಿಯವರು ಬಂದಮೇಲೆ, "ಏನು ನೀನು ಹೋದ ಕೆಲಸ ಆಯಿತೆ? ಎಲ್ಲ ಮಾಯೆ ಅಲ್ಲವೆ?" ಎಂದರು. ಮುಂದೆ ಒದಗುವ ಸಂಕಟವನ್ನು ತಡೆದುಕೊಳ್ಳಲು ಶ್ರೀರಾಮಕೃಷ್ಣರೇ ಜಗನ್ಮಾತೆಗೆ ಆಕೆಯ ಮನಸ್ಸಿನಲ್ಲಿ ವೈರಾಗ್ಯವನ್ನು ಹುಟ್ಟಿಸಬೇಕೆಂದು ಪ್ರಾರ್ಥಿಸಿದ್ದರು.

ಕ್ರಿ. ಶ. ೧೮೮೬ನೆಯ ಇಸವಿ ಆಗಸ್ಟ್ ತಿಂಗಳು ೧೫ನೇ ಭಾನುವಾರ. ಕಾಶೀಪುರದ ಉದ್ಯಾನಮಂದಿರದಲ್ಲಿ ಶ್ರೀರಾಮಕೃಷ್ಣರ ರೋಗ ಶಯ್ಯೆಯ ಸುತ್ತಲೂ ಇವರ ಶಿಷ್ಯರು ಕುಳಿತುಕೊಂಡಿರುವರು. ರೋಗ ಬರಬರುತ್ತಾ ದಾರುಣವಾಗಿ ಶ್ರೀರಾಮಕೃಷ್ಣರು ನರಳುತ್ತಿರುವರು. ನಾಡಿಗಳ ಚಲನೆ ಅಸ್ಥಿರವಾಗಿದೆ. ಶಿಷ್ಯರೆಲ್ಲರೂ ಶೋಕಾಕ್ರಾಂತರಾಗಿ ನಿಸ್ಸಹಾಯರಾಗಿ ಸುತ್ತಲೂ ಕಂಬನಿ ತುಂಬಿ ನಿಂತಿರುವರು. ಶ್ರೀಶಾರದಾದೇವಿಯವರು ಮಾತ್ರ ಇವರ ಹತ್ತಿರ ಇಲ್ಲ; ಇವರ ಹಿಂದೆಯಿರುವ ಕೋಣೆಯಲ್ಲಿ ನಿಂತು ದುಃಖದಿಂದ ಪ್ರತಿಕ್ಷಣವೂ ಇವರ ಸ್ಥಿತಿಯನ್ನು ಲಟುವಿನಿಂದ ತಿಳಿದುಕೊಳ್ಳುತ್ತಿದ್ದರು. ನಾಡಿಗಳ ಚಲನೆ ಅಸ್ಥಿರವಾಗತೊಡಗಿತು. ಡಾಕ್ಟರ್ ನವೀನ ಪಾಲನು ಬಂದು ರೋಗಿಯನ್ನು ಪರೀಕ್ಷೆ ಮಾಡಿ ನೋಡಿದನು. ಆತನಿಗೆ ಏನೂ ಹೇಳಲು ಆಗಲಿಲ್ಲ. ನಾಡಿಯು

ಪರೀಕ್ಷೆಯಲ್ಲಿ ನಿಪುಣರಾಗಿದ್ದ ಶಿಷ್ಯನೊಬ್ಬನು ಬಂದು ಪರೀಕ್ಷಿಸಿ ಸ್ಥಿತಿ ನಿರಾಶಾಸೂಚಿತವಾಗಿದೆ ಎಂದು ಬಿಟ್ಟನು. ಪ್ರಾತಃಕಾಲ ಕಳೆಯಿತು. ಮಧ್ಯಾಹ್ನ ಶ್ರೀಶಾರದಾದೇವಿಯವರು ಗಂಜಿಯನ್ನು ತೆಗೆದುಕೊಂಡು ಬಂದರು. ಎಷ್ಟು ಪ್ರಯತ್ನಪಟ್ಟರೂ ಒಂದು ತೊಟ್ಟು ಗಂಜಿ ಕೂಡಾ ಗಂಟಲಿನ ಒಳಗೆ ಇಳಿಯಲು ಸಾಧ್ಯವಾಗಲಿಲ್ಲ. ತಂದ ಗಂಜಿಯನ್ನು ಹಾಗೆಯೇ ತೆಗೆದುಕೊಂಡು ಹೋದರು. ಸಂಜೆಯ ಹೊತ್ತಿಗೆ ಶ್ರೀರಾಮ ಕೃಷ್ಣರಿಗೆ ಉಸಿರಾಡುವುದು ಕಠಿಣವಾಯಿತು. ನೋಟ ಎದೆ ಕರಗು ವಂತೆ ಇತ್ತು. ಕೋಣೆಯಲ್ಲಿ ದೀಪ ಉರಿಯುತ್ತಿದೆ. ಎಲ್ಲರೂ ದುಃಖಿತ ರಾಗಿರುವರು. ಎಲ್ಲರ ಕಣ್ಣಿನಲ್ಲಿಯೂ ಕಂಬನಿ ತುಂಬಿರುವುದು. ಶ್ರೀರಾಮ ಕೃಷ್ಣರು ಶಿಷ್ಯರನ್ನು ಅಷ್ಟು ಪ್ರೀತಿಯಿಂದ ಕಾಣುತ್ತಿದ್ದರು. ತಾಯಿಯ ಮಮತೆಯನ್ನು ಕೂಡಾ ನಾಚಿಸುವಂತೆ ಇತ್ತು ಇವರು ತಮ್ಮ ಶಿಷ್ಯರನ್ನು ಪ್ರೀತಿಸುತ್ತಿದ್ದ ರೀತಿ. ಇಂತಹ ಪವಿತ್ರತಮ ಮಹಾಪುರುಷನ ಜೀವನದ ಹಣತೆ ನಂದಿಹೋಗುವುದರಲ್ಲಿದೆ.

ಕತ್ತಲೆ ಕಾಲಿಟ್ಟಿತು. ಅನಂತ ತಾರೆಗಳು ಗಗನದಲ್ಲಿ ಯುಗಾವ ತಾರ ಪುರುಷನ ಜೀವನದ ಕೊನೆಯ ದಿನದ ಲೀಲೆಯನ್ನು ನೋಡಲು ಬಂದವು. ಶ್ರೀರಾಮಕೃಷ್ಣರಿಗೆ ಹಸಿವು ಆದುದರಿಂದ ಗಂಜಿಯನ್ನು ಕೇಳಿ ದರು. ಶ್ರೀಶಾರದಾದೇವಿಯವರು ತೆಗೆದುಕೊಂಡುಬಂದರು. ಎಷ್ಟೇ ಪ್ರಯತ್ನಪಟ್ಟರೂ ಕುಡಿಯಲಾಗಲಿಲ್ಲ. ಮರಳಿ ದುಃಖಿತರಾದರು. ಶ್ರೀ ರಾಮಕೃಷ್ಣರು ಶಿಷ್ಯರೊಬ್ಬರ ಎದೆಯಮೇಲೆ ಒರಗಿ ಹಾಗೆ ಸ್ವಲ್ಪ ವಿಶ್ರ ಮಿಸಿಕೊಂಡರು. ಮತ್ತೊಬ್ಬರು ಬೀಸಣಿಗೆಯಿಂದ ಬೀಸುತ್ತಿದ್ದರು. ಶ್ರೀರಾಮಕೃಷ್ಣರು ಹಾಗೆಯೇ ಧ್ಯಾನಾಸಕ್ತರಾದರು. ಬಹಳ ಹೊತ್ತು ಬಾಹ್ಯ ಪ್ರಜ್ಞೆ ಬರಲಿಲ್ಲ. ಶಿಷ್ಯರೆಲ್ಲರೂ ಅಂಜಿ ಹತ್ತಿರ ಇರುವ ಭಕ್ತರ ಮನೆಗೆ ಈ ಸುದ್ದಿಯನ್ನು ಹೇಳಲು ಹೊರಟರು.

ಅರ್ಧರಾತ್ರಿ ಹೊತ್ತಿಗೆ ಪುನಃ ಪ್ರಜ್ಞೆ ಬಂದಿತು. ಹಸಿವಾಗುತ್ತದೆ ಎಂದರು. ನರೇಂದ್ರನು ಶ್ರೀಶಾರದಾದೇವಿಯವರಿಂದ ಒಂದು ಬಟ್ಟಲು ಗಂಜಿಯನ್ನು ತಂದುಕೊಟ್ಟನು. ಶ್ರೀರಾಮಕೃಷ್ಣರು ಅದನ್ನು ನಿರಾ ಯಾಸವಾಗಿ ಕುಡಿದರು. ಬಹಳ ದಿನಗಳಿಂದ ಆಹಾರ ಅಷ್ಟು ಸುಲಭ ವಾಗಿ ಹೊಟ್ಟೆಗೆ ಹೋಗಿರಲಿಲ್ಲ. ತರುವಾಯ ನೋವು ಸ್ವಲ್ಪ ಶಮನ ವಾದಂತೆ ತೋರಿತು. ಮಲಗಿ ನಿದ್ದೆ ಮಾಡಿದರೆ ಮೇಲಾಗುವುದೆಂದು ಅವರಿಗೆ ದಿಂಬುಗಳನ್ನು ಜೋಡಿಸಿ ಶ್ರೀ ಶಾರದಾದೇವಿಯವರಿಗೆ ಬಟ್ಟಲನ್ನು

ಕೊಡಲು ಹೋದರು. ಶ್ರೀ ಶಾರದಾದೇವಿಯವರು, "ಏನಾದರೂ ಕುಡಿದರೆ?" ಎಂದು ಕೇಳಿದರು. "ಕುಡಿದರು ನೋವು ಸ್ವಲ್ಪ ಕಡಿಮೆ ಯಾಗಿದೆ. ಹಾಗೆ ಸ್ವಲ್ಪ ವಿಶ್ರಮಿಸಿಕೊಂಡರೆ ಬೆಳಗ್ಗೆ ಏಳುವ ಹೊತ್ತಿಗೆ ಅಪಾಯದಿಂದ ಪಾರಾಗಬಹುದು" ಎಂದರು. ಶ್ರೀ ಶಾರದಾದೇವಿಯ ಇದನ್ನು ಕೇಳಿ ನಿರಾಶೆಯ ಎದೆಯಲ್ಲಿ ಒಂದು ಆಸೆ ಮಿಂಚಿದಂತೆ ಆಯಿತು. "ಜಗನ್ಮಯಿ! ಅವರನ್ನು ಹೇಗಾದರೂ ಉಳಿಸು. ಅವರಿಂದ ಅನೇಕ ಜೀವರು ಉದ್ಧಾರವಾಗಬೇಕಾಗಿದೆ" ಎಂದು ಬೇಡಿದರು.

ರಾತ್ರಿ ಒಂದು ಒಂಟಿಯ ಸಮಯವಾಗಿದೆ. ರಾಮಕೃಷ್ಣರ ದೇಹ ದಲ್ಲಿ ಯಾವುದೋ ಒಂದು ಮಹಾಶಕ್ತಿ ಸಂಚರಿಸಿದಂತೆ ಆಗಿ ವಿಕಂಪಿಸಿತು. ರೋಮಾಂಚನವಾಯಿತು. ಕಣ್ಣು ಹುಬ್ಬುಗಳ ನಡುವೆ ಈಕ್ಷಿಸಿ ಧ್ಯಾನಾ ಸಕ್ತರಾದಂತೆ ಕಾಣುತ್ತಿತ್ತು. "ಜಯಕಾಳಿ! ಜಯಕಾಳಿ!! ಜಯಕಾಳಿ!!!" ಎಂದು ಸಮಾಧಿಸ್ಥರಾದರು. ಹಿಂದಿನಂತೆ ಪುನಃ ಹಿಂತಿರುಗಿ ಬರಲಿಲ್ಲ: ಅವರ ಜೀವನಜ್ಯೋತಿ ತಮಗೆ ವಹಿಸಿದ ಕಾರ್ಯವನ್ನು ಮಾಡಿ ಜಗನ್ಮಯಿ ಮಹಾಶಕ್ತಿ ಕಾಳಿಯಲ್ಲಿ ಐಕ್ಯವಾಯಿತು.

ಸಿಡಿಲಿನಂತೆ ಆ ಸುದ್ದಿ ಎಲ್ಲರೆದೆಗೂ ಬಡಿಯಿತು. ಸ್ವಲ್ಪಹೊತ್ತಿನ ಹಿಂದೆ ಅವರ ಸ್ಥಿತಿ ಸ್ವಲ್ಪ ಆಶೆಯನ್ನು ತೋರುತ್ತಿತ್ತು. ವಿಧಿಯೇ ಹೀಗೆ. ಆಸೆಯನ್ನು ತೋರಿ ಕೈ ನೀಡಿದರೆ ನಿರಾಶೆಯನ್ನು ನೀಡುವುದು. ಶ್ರೀರಾಮ ಕೃಷ್ಣರ ಪಾರ್ಥಿವಜೀವ ಅಳಿಸಿಹೋಗಿ, ಅವರ ಚಿನ್ಮಯಜೀವ, ಶಿಷ್ಯರ ನೆನಹಿನ ಗುಡಿಯಲ್ಲಿ ಜೀವಿಸತೊಡಗಿತು. ಇವರ ಅಂತ್ಯಕ್ರಿಯೆಗಳೆಲ್ಲ ಆಯಿತು. ಶ್ರೀರಾಮಕೃಷ್ಣರು ತಾವು ಕಾಲವಾಗುವುದಕ್ಕೆ ಮುಂಚೆ ಬೀಸಿದ ವೈರಾಗ್ಯ ಶ್ರೀ ಶಾರದಾದೇವಿಯವರಿಗೆ ಅಷ್ಟು ಮನೋಯಾತನೆ ಯನ್ನು ಕೊಡಲಿಲ್ಲ. ಆದರೇನು? ಎಷ್ಟುಕಾಲ ಈ ವೈರಾಗ್ಯದ ಪ್ರಭಾವ ಪತಿಯನ್ನು ಕಳೆದುಕೊಂಡ ದುಃಖವನ್ನು ಕಾಣದಂತೆ ಮಾಡುವುದು? ವೈದ್ಯ ರೋಗಿಯಮೇಲೆ ಶಸ್ತ್ರಚಿಕಿತ್ಸೆಯನ್ನು ಮಾಡುವುದಕ್ಕೆ ಮುಂಚೆ ಪ್ರಜ್ಞೆ ತಪ್ಪಿಸಿ ತನ್ನ ಕೆಲಸ ಮಾಡಿಯಾದಮೇಲೆ ಪ್ರಜ್ಞೆ ಬರುವಂತೆ ಮಾಡುತ್ತಾನೆ. ಪ್ರಜ್ಞೆ ಬಂದೊಡನೆಯೇ ನೋವು ತಾನಿರುವೆನೆಂದು ಕಾಲಿಡುವುದು. ಅದರಂತೆಯೇ ಶ್ರೀ ಶಾರದಾದೇವಿಯವರ ದುಃಖಕ್ಕೆ ಮೇರೆಯಿರಲಿಲ್ಲ. ತಾವು ಐದು ವರ್ಷದ ಮಗುವಾಗಿದ್ದಾಗ ತಮ್ಮ ಜೀವನವನ್ನು ಶ್ರೀರಾಮರ ಕೈಯ್ಯಲ್ಲಿ ಕೊಟ್ಟರು. ಅಂದಿನಿಂದ ಅವರನ್ನು ಪ್ರೀತಿಸುವುದರಲ್ಲಿ, ಸೇವಿಸುವುದರಲ್ಲಿ, ಕಳೆದರು ಈಗ ತಮ್ಮ ಜೀವನದ

ಜೀವ ಕಣ್ಮರೆಯಾಗಿರುವುದು. ತನ್ನವರು ಎಂದು ಹೇಳಿಕೊಳ್ಳುವವರು ಹತ್ತಿರದಲ್ಲಿ ಯಾರೂ ಇಲ್ಲ. ಇದ್ದ ಶಿಷ್ಯರೇನೋ ಇವರನ್ನು ತಾಯಿಯಂತೆ ಪ್ರೀತಿಸುತ್ತಿದ್ದರು. ಆದರೆ ಆಗ ತಾನೇ ಕಾಲೇಜು, ಹೈಸ್ಕೂಲುಗಳಲ್ಲಿ ಓದುತ್ತಿದ್ದ ಜಗದ ಅನುಭವವಿಲ್ಲದ ಬಾಲಕರು. ಮುಂದೆ ಇವರನ್ನು ನೋಡಿಕೊಳ್ಳುವವರು ಯಾರು? ಆಶ್ರಯದಾತರು ಯಾರು? ಎಂಬ ಭಯ ಇವರನ್ನು ಕಾಡತೊಡಗಿತು.

ಶ್ರೀ ರಾಮಕೃಷ್ಣರು ಕಾಲವಾದಮೇಲೆ ಪದ್ಧತಿಯಂತೆ ಸುಮಂಗಲಿಗೆ ಗುರುತಾದ ಇವರ ಒಳೆಗಳನ್ನು ಒಡೆಯಲು ಹೋದರಂತೆ. ಆಗ ಶ್ರೀರಾಮಕೃಷ್ಣರು ಇವರಿಗೆ ಗೋಚರಿಸಿ, "ಏನು ನಾನು ಸತ್ತು ಹೋಗಿರುವೆನೆ? ದೇಹದಿಂದ ನಾನು ಹೊರಗೆ ಹೋಗಿರಬಹುದು; ಆದರೆ ಒಂದು ಕೋಣೆಯಿಂದ ಮತ್ತೊಂದು ಕೋಣೆಗೆ ಹೋದಂತೆ" ಎಂದರಂತೆ. ಶ್ರೀ ಶಾರದಾದೇವಿಯವರಿಗೆ ಇದೊಂದು ಅನುಭವ ಅವರ ದುಃಖ ಜೀವನಕ್ಕೆ ಊರುಗೋಲಾಯಿತು. ತಮ್ಮನ್ನು ಬಿಟ್ಟು ಪತಿ ದೇಹದಿಂದ ಕಣ್ಮರೆಯಾಗಿಹೋದರೂ ತಮ್ಮನ್ನು ಅವರು ಸದಾ ನೋಡಿಕೊಳ್ಳುತ್ತಿರುವರು ಎಂದು ಧೈರ್ಯ ಬಂದಿತು. ಸುಮಂಗಲಿಯರು ಉಟ್ಟುಕೊಳ್ಳುವ ದೊಡ್ಡಂಚಿನ ಸೀರೆಯನ್ನು ಹರಿದು ಸಾಮಾನ್ಯ ಸೀರೆಯನ್ನು ಉಟ್ಟರು. ಕೆಲವು ದಿನಗಳು ಶ್ರೀರಾಮಕೃಷ್ಣರು ಇದ್ದ ಮನೆಯಲ್ಲಿಯೇ ಇದ್ದರು. ತಕ್ಷಣವೇ ಬದಲಾಯಿಸಿದರೆ ಶ್ರೀಶಾರದಾದೇವಿಯವರಿಗೆ ವ್ಯಥೆಯಾಗುವುದೆಂದು ತಿಳಿದು ಕೆಲವು ಶಿಷ್ಯರು ಅವರನ್ನು ಅಲ್ಲಿ ಇರಿಸಿದ್ದರು. ಕ್ರಿ. ಶ. ೧೮೮೬ನೇ ಆಗಸ್ಟ್ ೨೧ನೇ ತೇದಿಯಲ್ಲಿ ಶ್ರೀಶಾರದೇವಿಯವರು ಬಲರಾಮ ಬೋಸ್ ಎಂಬ ಗೃಹಸ್ಥ ಭಕ್ತನ ಮನೆಗೆ ಹೋದರು. ಆಗಲೇ ಶ್ರೀರಾಮಕೃಷ್ಣರ ಕೆಲವು ಭಕ್ತರಲ್ಲಿ ಅವರ ಬೂದಿಯ ವಿಚಾರವಾಗಿ ಒಂದು ಕಲಹ ಬಂದಿತು. ಕೆಲವರು ತಮಗೆ ಬೇಕೆಂದು, ಮತ್ತೆ ಕೆಲವರು ತಮಗೆ ಬೇಕೆಂದು, ಹಠ ಹಿಡಿದರು. ಇದನ್ನು ಕೇಳಿ ಶ್ರೀಶಾರದಾದೇವಿಯವರು "ಅಂತಹ ಅಮೂಲ್ಯವಾದ ಜೀವನವೇ ಮಾಯವಾಯಿತಂತೆ; ಉಳಿದ ಬೂದಿಗೆ ಇವರು ಕಾದಾಡುತ್ತಿರುವರಲ್ಲ!" ಎಂದು ಸಂತಾಪಪಟ್ಟರು.



# ೧೨. ಬೃಂದಾವನ ಯಾತ್ರೆ

ವೈರಾಗ್ಯದ ಕಟ್ಟೆ ಕಟ್ಟಿದ್ದರೂ ಪತಿವಿಯೋಗದುಃಖದ ಹುಚ್ಚು ಹೊಳೆ ಮತ್ತೆ ಮತ್ತೆ ಅದನ್ನು ಕಿತ್ತು ಒಗೆಯುತ್ತಿತ್ತು. ಶ್ರೀರಾಮಕೃಷ್ಣರು ಶ್ರೀಶಾರದಾದೇವಿಯವರ ಪತಿಗಳಾಗಿದ್ದರು, ಗುರುಗಳಾಗಿದ್ದರು, ಇಷ್ಟ ದೈವವಾಗಿದ್ದರು, ಜೀವನದ ಸರ್ವಸ್ವವಾಗಿದ್ದರು. ಯಾರು ಎಷ್ಟು ಸಮಾಧಾನ ಮಾಡಿದರೂ, ಅವರ ದುಃಖಕ್ಕೆ ಮಿತಿಯಿರಲಿಲ್ಲ. ಕೆಲವು ಭಕ್ತರು ಹೇಗಾದರೂ ಮಾಡಿ ಇವರ ದುಃಖವನ್ನು ಮರೆಸುವುದಕ್ಕೆ ಒಂದು ಉಪಾಯ ಹೂಡಿದರು. ಅದೇ ಬೃಂದಾವನದ ತೀರ್ಥಯಾತ್ರೆಗೆ ಹೊರಡುವುದು. ಶ್ರೀರಾಮಕೃಷ್ಣರು ತಮ್ಮ ಮಹಾ ಸಮಾಧಿಗೆ ಮುಂಚೆ ಶ್ರೀ ಶಾರದಾದೇವಿಯವರನ್ನು ಕರೆದು, "ಈ ದೇಹಕ್ಕೆ (ತಮ್ಮ ದೇಹಕ್ಕೆ) ಯಾವ ಯಾವ ಯಾತ್ರೆ ಮಾಡಲು ಸಾಧ್ಯವಾಗಲಿಲ್ಲವೋ ಅದನ್ನೆಲ್ಲಾ ನೀನು ಮಾಡು" ಎಂದು ಹೇಳಿದ್ದರು. ಅದರಂತೆಯೇ ಒಂದು ಸನ್ನಿವೇಶವು ಬಂದೊದಗಲು ಶ್ರೀಶಾರದಾದೇವಿಯವರು ಹೊರಡಲು ಅನುವಾದರು.

ಕ್ರಿ. ಶ. ೧೮೮೬ನೇಯ ಆಗಸ್ಟ್ ೨೦ನೆಯ ತೇದಿ ಯೋಗಾನಂದ, ಅಭೇದಾನಂದ, ಅದ್ಭುತಾನಂದ ಎಂಬ ಸನ್ಯಾಸಿ ಭಕ್ತರು ಮತ್ತು ಲಕ್ಷ್ಮೀದೇವಿ, ಗುಲಾಬ್‌ಮಾ, ಮಾಸ್ಟರ್ ಮಹಾಶಯ ಮತ್ತು ಅವರ ಪತ್ನಿ ಮೊದಲಾದ ಗೃಹಸ್ಥ ಭಕ್ತರೂ, ಶಾರದಾದೇವಿಯವರ ಜೊತೆಯಲ್ಲಿ ಹೊರಟರು. ಬೃಂದಾವನ ಸೇರುವುದಕ್ಕೆ ಮುಂಚೆ ವೈದ್ಯನಾಥ್, ಕಾಶಿ, ಅಯೋಧ್ಯೆ ಮುಂತಾದ ಪುಣ್ಯಕ್ಷೇತ್ರಗಳನ್ನು ನೋಡಿಕೊಂಡು ಹೊರಟರು. ಇವುಗಳಲ್ಲಿ ಆಗಲೇ ಕೆಲವಕ್ಕೆ ಇವರ ಪತಿಯವರು ಹೋಗಿದ್ದರು. ವೈದ್ಯನಾಥದಲ್ಲಿ ಶಿವನ ದೇವಾಲಯವಿದೆ. ಅಲ್ಲಿಗೆ ಶ್ರೀರಾಮಕೃಷ್ಣರು ಹೋಗಿದ್ದಾಗ ಚಲಿಸುವ ಅಸ್ಥಿಪಂಜರದಂತೆ ಹೊಟ್ಟೆಗೆ ಕೂಳಿಲ್ಲದೆ ನರಳುತ್ತಿರುವ ಭಿಕ್ಷುಕರನ್ನು ನೋಡಿ ಮನಕರಗಿ ತಮ್ಮ ಜೊತೆಯಲ್ಲಿದ್ದ ಮಥುರನಾಥನಿಗೆ, "ಇವರಿಗೆ ಅನ್ನವನ್ನು, ಹೊದೆಯಲು ಬಟ್ಟೆಯನ್ನು, ಕೊಟ್ಟಲ್ಲದೆ ಮುಂದೆ ಹೋಗುವುದಿಲ್ಲ" ಎಂದು ಹಠಹಿಡಿದಿದ್ದರು. ಜೀವಿಗಳ ಸೇವೆಯೇ ಶಿವನ ಸೇವೆ ಎಂಬ ಉಪದೇಶವನ್ನು ಬಿತ್ತಿದ ಸ್ಥಳ ಅದು.

ಕಾಶಿಗೆ ಹೋದಾಗ ಶ್ರೀ ಶಾರದಾದೇವಿಯವರಿಗೆ ಅನೇಕ ಆಧ್ಯಾತ್ಮಿಕ ಅನುಭವಗಳು ಆದವಂತೆ. ಒಂದು ದಿನ ವಿಶ್ವನಾಥನ ಗುಡಿಯಲ್ಲಿ ಸಂಜೆ ಮಂಗಳಾರತಿಯನ್ನು ನೋಡುತ್ತಿದ್ದಾಗ ಸಮಾಧಿ ಮಗ್ನರಾದರು. ಅಲ್ಲಿ ಭಾಸ್ಕರಾನಂದರೆಂಬ ಹೆಸರುವಾಸಿಯಾದ ಸನ್ಯಾಸಿಯನ್ನು ನೋಡಲ

ಹೋದರು. ಆತ ಮಳೆ ಬಿಸಲುಗಳನ್ನು ಲೆಕ್ಕಿಸದೆ ಹೊದೆಯಲು ಒಂದು ಬಟ್ಟೆಯೂ ಕೂಡ ಇಲ್ಲದೆ ನಗ್ನನಾಗಿದ್ದನು. ಇವರೊಂದಿಗೆ ಬಂದ ಕೆಲವು ಹೆಂಗಸರಿಗೆ ಹೇಗೆ ಬೆತ್ತಲೆ ಮನುಷ್ಯನನ್ನು ನೋಡುವುದು ಎಂದು ನಾಚಿಕೆಯಾಯಿತು. ಆ ಸಾಧುವಿಗೆ ಇವರ ಮನಸ್ಸಿನ ಇಂಗಿತ ತಿಳಿದು, "ತಾಯಿಯವರೇ, ನಿವೇನೂ ನಾಚಿಕೆ ಪಡಬೇಡಿ. ನನಗೆ ನಿಮ್ಮಲ್ಲಿ ಜಗನ್ಮಯಿ ಕಾಣುತ್ತಾಳೆ. ಮಗುವಿನ ಮುಂದೆ ತಾಯಿಗೆ ನಾಚಿಕೆ ಏಕೆ ?" ಎಂದರು. ಶ್ರೀ ಶಾರದಾದೇವಿಯವರು ನಂತರ ಅವರ ವಿಚಾರವಾಗಿ ಮಾತನಾಡುತ್ತಾ, "ಎಂತಹ ಮಹಾತ್ಮ! ಅವರಲ್ಲಿ ಸ್ವಲ್ಪವೂ ದೇಹಾಭಿಮಾನವಿಲ್ಲ. ಅವರನ್ನು ನೋಡಿದಮೇಲೆ ನನ್ನ ಮನಸ್ಸಿಗೆ ಶಾಂತಿ ಸಿಕ್ಕಿತು" ಎಂದರು.

ಬಳಿಕ ಅಯೋಧ್ಯೆಗೆ ಪ್ರಯಾಣ ಬೆಳೆಸಿದರು. ಶ್ರೀರಾಮನು ಹುಟ್ಟಿದ ಊರು. ಅವನು ಆಳಿದ ಊರು. ತಾವು ಮಗುವಾಗಿದ್ದಾಗಲೇ ರಾಮಾಯಣ ಕಥೆಗಳನ್ನು ತಾಯ ತೊಡೆಯಮೇಲೆ ಕುಳಿತು ಕೇಳುತ್ತಿದ್ದರು. ಸೀತಾರಾಮರ ಹೆಸರು ಅವರ ಎಳೆ ಹೃದಯದ ಮೇಲೆ ಚಿರ ಮುದ್ರಿತವಾಗಿತ್ತು. ಶ್ರೀರಾಮನ ಲೀಲೆಯನ್ನು ನೋಡಿದ ಊರು ಅಯೋಧ್ಯೆ. ಆ ಪುರದ ಧೂಳು ಕೂಡಾ ಇವರಿಗೆ ಪಾವನವಾಗಿತ್ತು. ಒಂದಾನೊಂದು ಕಾಲದಲ್ಲಿ ಅಲ್ಲಿ ರಾಮಸೀತೆಯರು ನಡೆದುಕೊಂಡು ಹೋಗುತ್ತಿದ್ದ ನೆನಪನ್ನು ತರುತ್ತಿತ್ತು. ಶ್ರೀರಾಮನ ದೇವಸ್ಥಾನಕ್ಕೆ ಹೋಗಿ ತಮ್ಮ ಸೇವೆಯನ್ನು ಸಲ್ಲಿಸಿ ಮುಂದೆ ಬೃಂದಾವನಕ್ಕೆ ಹೋದರು.

ಬೃಂದಾವನ! ಸಕಲ ಹಿಂದೂಗಳಿಗೂ ಪರಮಪವಿತ್ರವಾದ ತೀರ್ಥಯಾತ್ರಾಸ್ಥಳ. ಎಲ್ಲಾ ಹಿಂದೂಗಳೂ ಒಂದಲ್ಲ ಒಂದು ರೂಪಿನಲ್ಲಿ ಪೂಜಿಸುವ ಶ್ರೀಕೃಷ್ಣನ ಲೀಲಾಮಯ ಭೂಮಿ ಬೃಂದಾವನ. ಅಲ್ಲಿಯೆ ಗೋಪಿಯರು ಬಾಲಕೃಷ್ಣನನ್ನು ತಮ್ಮ ತನುಮನ ಧನಕ್ಕಿಂತ ಹೆಚ್ಚಾಗಿ ಪ್ರೀತಿಸಿ ಮುಕ್ತಿ ಪಡೆದದ್ದು. ಆತನ ಲೀಲೆಯ ನೆನಪನ್ನು ಕೊಡುವ ಪ್ರತಿಯೊಂದು ಅಂಗುಲದ ಜಾಗವೂ ಹಿಂದೂವಿಗೆ ಪವಿತ್ರತಮ. ಶ್ರುತಿಗಳಿಗೆ ಸಿಲುಕದ, ವೇದಕ್ಕೆ ನಿಲುಕದ, ಅನೇಕ ಜನ್ಮಗಳ ತಪಸ್ಸಿನಿಂದ ಕೂಡ ಗಳಿಸಲು ಅಸಾಧ್ಯವಾದ ಪರಮಾತ್ಮನನ್ನು ಪ್ರೇಮದಿಂದ ಸೆಳೆದು ತಮ್ಮ ಹೃದಯ ಪಂಜರದಲ್ಲಿ ಪೋಷಿಸಿದ ಮುಗ್ಧ ಗೋಪಿಯರಿದ್ದ ಊರು. ಶ್ರೀ ಕೃಷ್ಣನು ಮಥುರೆಗೆ ಹೋದಮೇಲೆ ದುಃಖಪಡುತ್ತಿದ್ದ ಗೋಪಿಯರನ್ನು ಸಂತೈಸುವುದಕ್ಕಾಗಿ ಉದ್ಧವನೆಂಬ ಹುಟ್ಟು ಜ್ಞಾನಿಯನ್ನು ಕಳುಹಿಸಿ

ದನು. ಆತನು ಬೃಂದಾವನಕ್ಕೆ ಬರುತ್ತಿರುವಾಗ ಗೋಪಿಯರಿಗೆ ಮೊದಲೇ ಈ ಸುದ್ದಿ ತಿಳಿದು ಶ್ರೀ ಕೃಷ್ಣನ ಸಮಾಚಾರವನ್ನೇನಾದರೂ ತಂದಿರುವನೋ ಎಂಬುದನ್ನು ಕೇಳಲು ಕಾತುರರಾಗಿ ದಾರಿಯಲ್ಲಿ ಆವನನ್ನು ಕಂಡರು. ಉದ್ಧವನು ಇವರನ್ನು ನೋಡಿ, ನಿಮ್ಮ ಪಾದ ಸೋಕಿದ ಧೂಳು ಕೂಡ ನನಗೆ ಪವಿತ್ರವಾಗಿದೆ ಎಂದು ಹೇಳಿ ಅವರಿಗೆ ನಮಸ್ಕಾರ ಮಾಡುವನು, ಅನೇಕ ಜನ್ಮಗಳು ತಪಸ್ಸುಮಾಡಿಯೂ ಒಲಿಸಿಕೊಳ್ಳಲಾರದ ಶ್ರೀ ಕೃಷ್ಣನನ್ನು ಅವನೇ ನಿಮ್ಮನ್ನು ಅನವರತವೂ ಚಿಂತಿಸುವಂತೆ ಮಾಡಿದ ನೀವೇ ಧನ್ಯರು–ಎನ್ನುತ್ತಾನೆ. ಭಾಗವತ ಮೊದಲಾದ ಪುರಾಣಗಳನ್ನು ಮನೆಯಲ್ಲಿ ಕೇಳಿದ್ದ ಶ್ರೀ ಶಾರದಾದೇವಿಯವರಿಗೆ ಬೃಂದಾವನ ಪವಿತ್ರಸ್ಥಳವಾಗಿತ್ತು. ಶ್ರೀ ಕೃಷ್ಣನ ವಿರಹದಲ್ಲಿ ನರಳುತ್ತಿದ್ದ ರಾಧೆಯ ಜ್ಞಾಪಕ ಬಂದಿತು. ಇದು ತಮ್ಮ ಆರಾಧನೆಯ ದೇವರಾದ ಶ್ರೀರಾಮಕೃಷ್ಣರನ್ನು ಜ್ಞಾಪಕಕ್ಕೆ ತಂದು ಮರೆತ ದುಃಖವನ್ನು ಮತ್ತೆ ಕೆರಳಿಸಿತು. ಹತ್ತಿರದಲ್ಲಿದ್ದ ಯೋಗಿನ್‌ಮಾ ಎಂಬಾಕೆಯನ್ನು ತಬ್ಬಿ, ತಮ್ಮ ದುಃಖದ ಭಾರವನ್ನು ಕಣ್ಣೀರಿನ ಕೋಡಿಯಿಂದ ಹರಿಸಿ, ಹಗುರಮಾಡಿಕೊಂಡರು. ಆವರ ಮನಸ್ಸಿನಲ್ಲಿ ಒಮ್ಮೆ ಪತಿಯ ದುಃಖ, ಒಮ್ಮೆ ಭಗವಂತನ ಮೇಲೆ ಪ್ರೇಮ ಬಂದು ಅಪ್ಪಳಿಸುತ್ತಿತ್ತು. ಆಗಲೇ ಅವರಿಗೆ ಒಂದು ದಿನ ಶ್ರೀರಾಮಕೃಷ್ಣರು ಪ್ರತ್ಯಕ್ಷರಾಗಿ "ಏಕೆ ಇಷ್ಟು ವ್ಯಸನಪಡುವುದು ? ನಾನು ಎಲ್ಲಿ ಹೋಗಿರುವೆನು ? ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ಹೋಗಿರುವೆನು ಅಷ್ಟೆ" ಎಂದು ಸಮಾಧಾನಮಾಡಿದರು.

ಈ ಅನುಭವ ಅವರ ಹೃದಯದ ದುಃಖವನ್ನು ಸ್ವಲ್ಪ ಶಮನ ಮಾಡಿತು. ಕ್ರಮೇಣ ಶ್ರೀರಾಮಕೃಷ್ಣರು ತಮ್ಮಿಂದ ದೂರದಲ್ಲಿಲ್ಲ ಬಹಳ ಹತ್ತಿರದಲ್ಲೇ ಇರುವರು ಎಂದು ತಿಳಿಯಿತು. ಪತಿವಿಯೋಗದ ದುಃಖ ಕ್ರಮೇಣ ಕಡಿಮೆಯಾಗಿ ಪ್ರೇಮ ಒಂದೇ ಉಳಿದು ಶಾಂತಿ ಅವರ ಮನಸ್ಸಿನಲ್ಲಿ ತಾಂಡವಾಡತೊಡಗಿತು. ಕೆಲವು ವೇಳೆ ಯಮುನಾ ತೀರದಲ್ಲಿ ಶ್ರೀ ಕೃಷ್ಣನ ಧ್ಯಾನದಲ್ಲಿ ತತ್ಪರರಾಗಿ ಹಾಗೆಯೇ ಮರಳು ದಿಬ್ಬದಮೇಲೆ ಸುಮ್ಮನೆ ನಡೆದುಕೊಂಡು ಹೋಗುತ್ತಿದ್ದರು. ಯಾರಾದರು ಇವರ ಹಿಂದೆ ಹೋಗಿ ಪುನಃ ಇವರು ಇದ್ದ ಸ್ಥಳಕ್ಕೆ ಕರೆದು ತರಬೇಕಾಗಿತ್ತು. ಒಂದು ದಿನ ಜನರ ಗುಂಪೊಂದು ಒಂದು ಹೆಣವನ್ನು ಅಲಂಕಾರಮಾಡಿ ಕೀರ್ತನೆಗಳೊಂದಿಗೆ ಅಂತ್ಯಕ್ರಿಯೆಗಾಗಿ ಶ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಿದ್ದರು. ಶ್ರೀಶಾರದಾದೇವಿಯವರು ಅದನ್ನು ನೋಡಿ, "ಎಷ್ಟು ಪುಣ್ಯ

ಶಾಲಿಯಾಗಿರಬೇಕು. ಬೃಂದಾವನದಂತಹ ಪುಣ್ಯ ಸ್ಥಳದಲ್ಲಿ ಸಾಯಬೇಕಾದರೆ! ನಾನೂ ನನ್ನ ಜೀವನದ ಕೊನೆಗಾಲವನ್ನು ಹಾಗೆಯೇ ಕಾಣುತ್ತೇನೆ, ಎಂದು ಬಂದೆ. ಆದರೆ ನನ್ನನ್ನು ಕೊಂಡೊಯ್ಯಲು ಒಂದು ನೆಗಡಿ ತಲೇ ನೋವು ಕೂಡಾ ಇನ್ನೂ ಬರಲಿಲ್ಲವಲ್ಲಾ!" ಎಂದು ಬಿಸುಸುಯ್ದರು.

ಬೃಂದಾವನದಲ್ಲಿ ಸುಮಾರು ಒಂದು ವರುಷಕಾಲ ಇದ್ದರು. ತಮ್ಮ ಬಹುಕಾಲವನ್ನು ಧ್ಯಾನದಲ್ಲಿ ಕಳೆಯುತ್ತಿದ್ದರು. ಧ್ಯಾನಕ್ಕೆ ಕುಳಿತಾಗ್ಗ ಸೊಳ್ಳೆಗಳು ಇವರ ಮುಖದಮೇಲೆ ಕುಳಿತು ಕಚ್ಚಿ ರಕ್ತಬರುವಂತೆ ಆದರೂ ಇವರಿಗೆ ಬಾಹ್ಯಪ್ರಪಂಚದ ಪ್ರಜ್ಞೆ ಬರುತ್ತಿರಲಿಲ್ಲವಂತೆ. ಲೆಕ್ಕವಿಲ್ಲದಷು ಗುಡಿಗಳು ಇವೆ ಬೃಂದಾವನದಲ್ಲಿ. ಅವುಗಳಲ್ಲಿ ಅನೇಕ ಗುಡಿಗಳಿಗೆ ಪುನಃ ಪುನಃ ಹೋಗುತ್ತಿದ್ದರು. ತೀರ್ಥಯಾತ್ರೆಗೆ ಬಂದವರು ಆ ಪುಣ್ಯ ಸ್ಥಳಗಳಲ್ಲಿ ಏನನ್ನಾದರೂ ಬಿಡುವುದು ವಾಡಿಕೆ. ಕೆಲವರು ತಮಗೆ ಸಿಕ್ಕಲಾರದ ಹಣ್ಣನ್ನೋ, ಕೆಲಸಕ್ಕೆ ಬಾರದ ಮತ್ತಾವುದಾದರೂ ವಸ್ತುವನ್ನೋ ತ್ಯಜಿಸಿ ಬಂದು ಪುಣ್ಯಸಂಪಾದಿಸಿರುವೆವು ಎಂದು ಹೆಮ್ಮೆ ಕೊಚ್ಚಿಕೊಳ್ಳುತ್ತಾರೆ. ಶ್ರೀ ಶಾರದಾದೇವಿಯವರು ಅಂತಹ ಉಪಾಯದ ತ್ಯಾಗಕ್ಕೆ ಕೈಹಾಕಲಿಲ್ಲ. ಇನ್ನೊಬ್ಬರಲ್ಲಿ ತಪ್ಪುಕಂಡುಹಿಡಿಯುವ ಒಂದು ಕೆಟ್ಟ ಚಾಳಿ ತಮ್ಮಲ್ಲಿರುವುದೆಂದು ಗೊತ್ತಾಗಿ, ರಾಧಾರಮಣನಲ್ಲಿಗೆ ಹೋಗಿ, "ಇನ್ನೊಬ್ಬರಲ್ಲಿ ತಪ್ಪುಕಂಡುಹಿಡಿಯುವ ಹೀನ ಗುಣ ತಮ್ಮಲ್ಲಿ ಇಲ್ಲದಂತೆ ಮಾಡು" ಎಂದು ಪ್ರಾರ್ಥಿಸಿದರು. ಅಂದಿನಿಂದ ಅವರು ಇನ್ನೊಬ್ಬರಲ್ಲಿ ಎಷ್ಟು ತಪ್ಪಿದ್ದರೂ ಅದನ್ನು ಗಮನಕ್ಕೆ ತೆಗೆದುಕೊಳ್ಳುತ್ತಿರಲಿಲ್ಲ. ಒಂದು ದಿನ ಜೊತೆಯಲ್ಲಿದ್ದ ಯೋಗಿನ್‌ಮಾಗೆ, "ಸಾವಿರ ಒಳ್ಳೆಯದನ್ನು ಮಾಡಬಹುದು. ಆದರೆ ಒಂದು ಕೆಟ್ಟದ್ದನ್ನು ಮಾಡಿದರೆ ಹಿಂದೆ ಮಾಡಿದ ಸಾವಿರ ಒಳ್ಳೆಯದನ್ನು ಮರೆತು ಮಾಡಿದ ಒಂದು ಕೆಟ್ಟದ್ದನ್ನು ಜ್ಞಾಪಿಸಿಕೊಂಡು ನಿನ್ನನ್ನು ದ್ವೇಷಿಸುತ್ತಾನೆ. ಇನ್ನೊಬ್ಬರಲ್ಲಿ ಯಾವಾಗಲೂ ತಪ್ಪನ್ನು ಕಂಡುಹಿಡಿಯುವುದು ಮಾನವ ಸ್ವಭಾವ. ಅದನ್ನು ಬಿಟ್ಟು ಇನ್ನೊಬ್ಬರಲ್ಲಿರುವ ಒಳ್ಳೆಯ ಗುಣವನ್ನು ನೋಡಿ ಸಂತೋಷಪಡುವುದು ಒಳ್ಳೆಯದು. ಯಾವಾಗಲೂ ಇನ್ನೊಬ್ಬರಲ್ಲಿ ತಪ್ಪುಕಂಡುಹಿಡಿಯುತ್ತಿದ್ದರೆ ಕೊನೆಗೆ ಅವರಿಗೆ ತಪ್ಪೊಂದೇ ಕಾಣುವುದು. ಆಗ ನಮ್ಮ ಮನಸ್ಸು ಮಲಿನವಾಗುವುದು. ಇನ್ನೊಬ್ಬರ ತಪ್ಪನ್ನು ನೋಡಬೇಡ" ಎಂದು ಹೇಳಿದರು.

ಬೃಂದಾವನವನ್ನು ಬಿಟ್ಟು ಹೋಗುವುದಕ್ಕೆ ಮುಂಚೆ ಪದ್ಧತಿಯಂತೆ ಪುರಪ್ರದಕ್ಷಿಣೆಯನ್ನು ಎಲ್ಲರೂ ಮಾಡಿದರು. ಅನೇಕ ಮೈಲಿಗಳ ಸುತ್ತಳತೆಯುಳ್ಳ ಊರನ್ನು ತಮಗೆ ಕಾಲಿನಲ್ಲಿ ವಾಯು ನೋವು ಇದ್ದರೂ ನಿರಾಯಾಸವಾಗಿ ಮಾಡಿದರು. ಆಗ ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ಪ್ರತಿಯೊಂದು ಸ್ಥಳವನ್ನೂ ಬಹಳ ಆಸಕ್ತಿಯಿಂದ ನೋಡುತ್ತ ಕೆಲವು ವೇಳೆ ತಟಸ್ಥರಾಗಿ ನಿಂತುಬಿಡುತ್ತಿದ್ದರು. ಶ್ರೀಕೃಷ್ಣನ ಬಾಲ್ಯ ಜೀವನದ ನೆನಪುಗಳು ಅವರನ್ನು ಸಮಾಧಿಗೆ ಕೊಂಡೊಯ್ಯುತ್ತಿದ್ದವು. ಯಾರಾದರೂ ಅವರನ್ನು ಏಕೆ ಹಾಗೆಯೇ ನಿಂತಿರಲ್ಲಾ—ಎಂದು ಪ್ರಶ್ನೆ ಮಾಡಿದರೆ, ಸುಮ್ಮನೆ—ಎಂದು ಉತ್ತರ ಹೇಳಿ ಮುಂದುವರಿಯುತ್ತಿದ್ದರು.

ಬೃಂದಾವನದಲ್ಲಿ ಅವರಿಗೆ ಅನೇಕ ಆಧ್ಯಾತ್ಮಿಕ ಅನುಭವಗಳಾದವು. ಅವರ ಆಂತರಿಕ ಜೀವನ ವಿಕಾಸಕ್ಕೆ ಇವು ಸಹಾಯ ಮಾಡಿವೆ ಎನ್ನುವುದಕ್ಕೆ ಅನೇಕ ಕಾರಣಗಳಿವೆ. ಅವರೇ ಸ್ವತಃ ಆ ವಿಚಾರವಾಗಿ ಏನೂ ಹೇಳದಿದ್ದರೂ ಹತ್ತಿರಿದ್ದು ನೋಡಿದವರು ಇದಕ್ಕೆ ಸಾಕ್ಷಿಯಾಗಿರುವರು. ಒಂದು ದಿನ ಧ್ಯಾನದಲ್ಲಿ ಇದ್ದಾಗ ಬಾಹ್ಯ ಪ್ರಜ್ಞೆಯಿಲ್ಲದೆ ಅವರ ಮನಸ್ಸು ಸಮಾಧಿಯಲ್ಲಿ ತಲ್ಲೀನವಾಯಿತು. ಹತ್ತಿರದಲ್ಲಿದ್ದ ಯೋಗಿನ್‌ಮಾ ಎಷ್ಟು ಪ್ರಯತ್ನಪಟ್ಟರೂ ಅವರ ಮನಸ್ಸನ್ನು ಕೆಳಗೆ ಇಳಿಸಲಾಗಲಿಲ್ಲ. ನಂತರ ಯೋಗಾನಂದರು ಬಂದು ದೇವರ ಹೆಸರನ್ನು ಕಿವಿಯಲ್ಲಿ ಹೇಳಿ ಮನಸ್ಸನ್ನು ಕ್ರಮೇಣ ದೇಹದ ಮೇಲೆ ತಿರುಗಿಸಿದರು. ಆಗ ಅವರು ಶ್ರೀರಾಮಕೃಷ್ಣರ ದಿವ್ಯ ಭಾವದಲ್ಲಿ ತಾವು ಮಗ್ನರಾಗಿದ್ದರೆಂದು ಹೇಳಿದರು.

ಶ್ರೀಶಾರದಾದೇವಿಯವರು ಬೃಂದಾವನದಲ್ಲಿದ್ದ ದಿನದಿಂದಲೇ ಗುರುತ್ವವನ್ನು ಸ್ವೀಕರಿಸಿ ಜನರಿಗೆ ಉಪದೇಶ ಮಾಡಲು ಮೊದಲು ಮಾಡಿದರು ಎಂದು ಹೇಳಬಹುದು. ಅವರ ಶಿಷ್ಯ ಯೋಗಾನಂದರಿಗೆ ಉಪದೇಶವನ್ನು ಕೊಡಬೇಕೆಂದು ಶ್ರೀರಾಮಕೃಷ್ಣರು ಅವರಿಗೆ ಕನಸಿನಲ್ಲಿ ಹೇಳಿದಂತಾಯಿತಂತೆ. ಅವರಿಗೆ ಅದರಲ್ಲಿ ಅಷ್ಟು ನಂಬಿಕೆ ಬರಲಿಲ್ಲ. ಶಾರದಾದೇವಿಯವರು ಆಗಲೇ ಉಪದೇಶ ಕೊಟ್ಟು ಶಿಷ್ಯರನ್ನು ಮಾಡಿಕೊಳ್ಳಲು ಹೊರಟರು, ಎಂದು ಜನರು ಆಡಿಕೊಳ್ಳುವರೆಂದು ಅಂಜಿದರು. ಆದರೆ ಮರುದಿನವೂ ಅವರಿಗೆ ಅದೇ ಕನಸಾಗಿ ಯಾವ ಮಂತ್ರವನ್ನು ಉಪದೇಶಮಾಡಬೇಕು ಎಂಬುದನ್ನೂ ಹೇಳಿದರಂತೆ. ನಂತರ ಅವರು ಯೋಗಾನಂದರಿಗೆ ಉಪದೇಶ ಮಾಡಿದರು.

ಒಂದು ವರ್ಷ ಬೃಂದಾವನದಲ್ಲಿ ವಾಸಮಾಡಿದಮೇಲೆ ಹಿಂತಿರುಗಿದಾಗ ಹರಿದ್ವಾರಕ್ಕೆ ಹೋದರು. ಅಲ್ಲಿ ಬ್ರಹ್ಮಕುಂಡದಲ್ಲಿ ಶ್ರೀರಾಮಕೃಷ್ಣರ ದೇಹಾವಶಿಷ್ಟವನ್ನು ಹಾಕಿದರು. ನಂತರ ಜಯಪುರ ಪುಷ್ಕರ ಮುಂತಾದವುಗಳನ್ನು ನೋಡಿಕೊಂಡು ಪ್ರಯಾಗಕ್ಕೆ ಬಂದರು. ಅಲ್ಲಿಯೇ ಶ್ರೀರಾಮಕೃಷ್ಣರ ಜ್ಞಾಪಕಾರ್ಥವಾಗಿ ಇಟ್ಟುಕೊಂಡಿದ್ದ ಅವರ ಕೂದಲು ಉಗುರು ಮುಂತಾದವುಗಳನ್ನು ತ್ರಿವೇಣಿಯ ಸಂಗಮದಲ್ಲಿ ಹಾಕಿದರು. ಅವರು ಅದನ್ನು ಹೇಗೆ ಮಾಡಿದರೆಂಬುದನ್ನು ಸರಳವಾದ, ಹೃದಯರಂಜಕವಾದ ಅವರ ಭಾಷೆಯಲ್ಲಿ ಕೇಳೋಣ: "ನಾನು ಗಂಗಾ ಯಮುನಾ ನದಿಗಳ ಸಂಗಮಸ್ಥಾನಕ್ಕೆ ಬಂದೆ. ನದಿ ಬಹಳ ಶಾಂತವಾಗಿತ್ತು. ಶ್ರೀರಾಮಕೃಷ್ಣರ ಕೂದಲನ್ನು ಕೈಯಲ್ಲಿ ಹಿಡಿದುಕೊಂಡು ನದಿಗೆ ಹಾಕಬೇಕೆಂದು ಆಲೋಚಿಸುತ್ತಿದ್ದೆ. ತಕ್ಷಣವೇ ಒಂದು ದೊಡ್ಡ ಅಲೆಯೆದ್ದು ನನ್ನ ಕೈಗಳಿಂದ ಕೂದಲನ್ನು ತಾನೇ ತೆಗೆದುಕೊಂಡಿತು. ಪವಿತ್ರ ನದಿ ಶ್ರೀರಾಮಕೃಷ್ಣರ ದೇಹಾವಶೇಷವನ್ನು ಸ್ವೀಕರಿಸಿ ಪವಿತ್ರತರವಾಗಬೇಕೆಂದು ಬಯಸಿತು."

ತಮ್ಮ ತೀರ್ಥಯಾತ್ರೆಯನ್ನು ಮುಗಿಸಿ ಮರಳಿ ಕಲ್ಕತ್ತೆಗೆ ೧೮೮೭ನೇ ಆಗಸ್ಟ್ ತಿಂಗಳಲ್ಲಿ ಬಂದರು.



## ೧೩. ಬಡತನದ ಕುಲುಮೆಯಲ್ಲಿ

ಎಡವಿದ ಕಾಲನ್ನೇ ಎಡಹುವಂತೆ, ದುಃಖ ಒಂದು ಸಲ ಬರಲು ಮೊದಲಾಯಿತೆಂದರೆ ಒಂದಾದಮೇಲೊಂದು ಧಾಳಿಯಿಡುವುದು ವಾಡಿಕೆ. ಯಾರು ತಮ್ಮ ಜೀವನದ ಜವಾಬ್ದಾರಿಯನ್ನು ವಹಿಸಿಕೊಂಡಿದ್ದರೋ ಅಂತಹ ಪತಿರತ್ನ ಮಾಯವಾಗಿದ್ದರು. ಹುಟ್ಟು ತ್ಯಾಗಿಗಳವರು.. ಸತಿಯ ಮುಂದಿನ ಜೀವನೋಪಾಯಕ್ಕಾಗಿ ಯಾವ ಬುತ್ತಿಯನ್ನೂ ಬಿಟ್ಟು ಹೋಗಿರಲಿಲ್ಲ. ದೇವರಲ್ಲಿ ಶರಣಾಗತಳಾಗುವುದೊಂದೇ ಅವರು ತಮ್ಮ ಸತಿಗೆ ಬಿಟ್ಟ ಸರ್ವಸ್ವ. ದೇವರನ್ನು ನೆಚ್ಚಿದವರು ಎಂದೂ ದುರಂತಕ್ಕೆ ಬಂದಿಲ್ಲ. ಆದರೆ ಅವನಿಗೆ ಭಕ್ತರನ್ನು ಪರೀಕ್ಷಿಸಲು ಆಸೆ. ತೋಟಗಾರನು ಛಳಿಗಾಲದಲ್ಲಿ ಗುಲಾಬಿ ಗಿಡದ ಅಡಿಯನ್ನು ತೆಗೆದು ಬೇರಿಗೆ ಹಿಮತಟ್ಟು ವಂತೆ ಬಿಡುವನು. ಛಳಿ ತಾಕಿ ಬೇರು ಬಲವಾದರೆ ನಂತರ ಸುಂದರವಾದ ಪುಷ್ಪಗಳನ್ನು ನೀಡುವುದು. ಅದರಂತೆಯೇ ದೇವರು ಕೂಡಾ ನಮ್ಮ ಜೀವನದ ಬೇರನ್ನು ದುಃಖಸಂಕಟಗಳ ಹಿಮಕ್ಕೆ ಸಿಕ್ಕುವಂತೆ ಮಾಡುವನು. ನಮ್ಮ ಜೀವನದಲ್ಲಿ ಅತ್ಯಂತ ಯಾತನಾಮಯವಾದ ಸಮಯವಿದು. ಆದರೂ ಯಾತನೆಯ ಗರ್ಭದಿಂದ ಮೂಡುವುದು ಸಂತೋಷ. ಕಾರಿರುಳ ಮಡಿಲಿ ನಿಂದ ಹೊರಬರುವುದು ನಗುವ ಅರುಣೆಯ ಸೊಬಗು. ಕಷ್ಟದ ಒರೆಗಲ್ಲಿನ ಮೇಲೆ ತಿಕ್ಕಿನೋಡಲು ಮೊದಲು ಮಾಡಿದನು ಜಗದೀಶ್ವರನು ಶ್ರೀ ಶಾರದಾ ದೇವಿಯವರ ಜೀವನವನ್ನು.

ಶ್ರೀ ಶಾರದಾದೇವಿಯವರು ಶ್ರೀರಾಮಕೃಷ್ಣರಂತಹ ಮಹಾವ್ಯಕ್ತಿ ಯನ್ನು ಕೈಹಿಡಿದಿದ್ದರು. ಸ್ವಾಮಿವಿವೇಕಾನಂದರಂತಹ ಶಿಷ್ಯರು ಇವರ ಶುಶ್ರೂಷೆಗೆ ಇದ್ದರು. ಕೆಲವು ಕಾಲದಮೇಲೆ ಜನರು ಜಗದ ನಾನಾ ಕಡೆ ಗಳಿಂದ ಬಂದು ತಾಯಿಯೆಂದು ಕರೆದು ದೇವಿಯ ಪೀಠದಲ್ಲಿಟ್ಟು ಪೂಜೆ ಮಾಡಿದರು. ಆದರೂ ಅವರು ಬೃಂದಾವನದಿಂದ ಯಾತ್ರೆ ಪೂರೈಸಿ ಕೊಂಡು ಬಂದಮೇಲೆ ಅವರು ಜೀವನಮಾಡುತ್ತಿದ್ದ ರೀತಿಯನ್ನು ಕೇಳಿ ದರೆ ಎಂತಹ ಕಲ್ಲೆದೆಯಾದರೂ ಕರಗುವುದು.

ಪತಿ ತಮ್ಮ ಮಹಾ ಸಮಾಧಿಗೆ ಮುಂಚೆ ಶ್ರೀ ಶಾರದಾದೇವಿ ಯವರನ್ನು ಕರೆದು "ನಾನು ಕಾಲವಾದಮೇಲೆ ನೀನು ಕಮಾರಪುಕುರಕ್ಕೆ ಹೋಗಿ ಇರು. ಏನಾದರೂ ಸಿಕ್ಕಲಿ, ಬರೀ ಅನ್ನವಾಗಲಿ, ಸೊಪ್ಪಾಗಲೀ ಅದನ್ನೆ ಬೇಯಿಸಿ ತಿಂದು ಹರಿಯ ಹೆಸರನ್ನು ಹೇಳುತ್ತಾ ಕಾಲವನ್ನು ಕಳೆ" ಎಂದರು. ಅದರಂತೆಯೇ ಬೃಂದಾವನದಿಂದ ಬಂದಮೇಲೆ ಬರ್ದವಾನಿನ

ಮೂಲಕ ಕಮಾರಪುಕುರಕ್ಕೆ ಹೊರಟರು. ಜೊತೆಯಲ್ಲಿ ಗುಲಾಬ್‌ಮಾ ಮತ್ತು ಯೋಗಾನಂತರು ಇದ್ದರು. ದಾರಿಯಲ್ಲಿರುವಾಗಲೇ ಮುಂದೆ ಅನುಭವಿಸಬೇಕಾಗಿರುವ ಕಷ್ಟದ ರುಚಿಯನ್ನು ನೋಡಿದರು. ಬರ್ದ ವಾನಿನವರೆಗೂ ಯಾರೋ ಭಕ್ತರು ಟಿಕೇಟನ್ನು ತೆಗೆದುಕೊಟ್ಟಿದ್ದರು. ಅಲ್ಲಿಂದ ಉಜರ್ಲ ಎಂಬಲ್ಲಿಗೆ ಹದಿನಾರು ಮೈಲಿಗಳು ನಡೆಯಬೇಕು. ಗಾಡಿಯ ಬಾಡಿಗೆಗೆ ದುಡ್ಡಿಲ್ಲದೆ ಕಾಲುನಡಿಗೆಯಲ್ಲೇ ಹೊರಟು ದಾರಿಯನ್ನು ನಡೆದು ಸಾಕಾಗಿ ಊರನ್ನು ಸೇರಿದರು. ಗುಲಾಬ್‌ಮಾ ಕಿಚಡಿ ಮಾಡಿದಳು. ಅದೇ ಹಸಿದ ಹೊಟ್ಟೆಗೆ ಅಮೃತವಾಗಿತ್ತು. ಅಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು ಕಾಲುನಡಿಗೆಯಲ್ಲೇ ಕಮಾರಪುಕುರವನ್ನು ಸೇರಿದರು.

ಶ್ರೀರಾಮಕೃಷ್ಣರು ಇರುವ ತನಕ ಅವರಿಗೆ ತಿಂಗಳಿಗೆ ಏಳು ರೂಪಾಯಿಗಳನ್ನು ಕೊಡಬೇಕೆಂದು ದಕ್ಷಿಣೇಶ್ವರ ದೇವಸ್ಥಾನವನ್ನು ಕಟ್ಟಿಸಿದ ರಾಣಿರಾಸಮಣಿಯು ತನ್ನ ಮರಣ ಶಾಸನದಲ್ಲಿ ಬರೆದಿದ್ದಳು. ಶ್ರೀರಾಮಕೃಷ್ಣರು ಕಾಲವಾದಮೇಲೆ ತ್ರೈಲೋಕ್ಯನಾಥ್ ಎಂಬ ರಾಣಿರಾಸಮಣಿಯ ಮೊಮ್ಮಗ ಏಳು ರೂಪಾಯಿಗಳನ್ನು ಶ್ರೀ ಶಾರದಾದೇವಿಯವರಿಗೆ ಕೊಡುತ್ತಿದ್ದನು. ಕ್ರಮೇಣ ಗುಡಿಯ ಸರ್ವಾಧಿಕಾರಿಯಾದ ದೀನನಾಥ ಎಂಬುವನು ಶ್ರೀ ಶಾರದಾದೇವಿಯವರನ್ನು ಕಂಡರೆ ಆಗದ ಕೆಲವು ನೆಂಟರೊಡನೆ ಸೇರಿ ಅವರಿಗೆ ದುಡ್ಡನ್ನು ಕೊಡದಂತೆ ಮಾಡಿದನು. ನರೇಂದ್ರನಾಥನು ಗುಡಿಯ ಅಧಿಕಾರಿಗಳೊಡನೆ ಎಷ್ಟೋ ಚರ್ಚೆ ಮಾಡಿದನು. ಅದರಿಂದ ಏನೂ ಪ್ರಯೋಜನವಾಗಲಿಲ್ಲ. ನಂತರ ತಮ್ಮ ಬೋಧನೆಯಿಂದ ಪ್ರಪಂಚವನ್ನೆ ಮುಗ್ಧಗೊಳಿಸಿದ ಸ್ವಾಮಿವಿವೇಕಾನಂದರಿಗೆ, ಭಕ್ತರೊಂದಿಗೆ ವಾದಿಸಿ ಶ್ರೀ ಶಾರದಾದೇವಿಯವರಿಗೆ ಏಳು ರೂಪಾಯಿಗಳನ್ನು ಕೊಡಿಸಲಾಗಲಿಲ್ಲ! ವಿಧಿ ಮುನಿದರೆ ಯಾರೇನು ಮಾಡುವರು.

ಕಮಾರಪುಕುರವನ್ನು ಸೇರಿ ಮೂರುದಿನಗಳು ಆದಮೇಲೆ ಸ್ವಾಮಿ ಯೋಗಾನಂದರು ಕಲ್ಕತ್ತೆಗೆ ಹಿಂತಿರುಗಿದರು. ಬೃಂದಾವನದಿಂದ ಬಂದ ಮೇಲೆ ಸುಮಾರು ಒಂದು ತಿಂಗಳು ಗುಲಾಬ್‌ಮಾ, ಶ್ರೀ ಶಾರದಾದೇವಿಯರೊಂದಿಗೆ ಇದ್ದು ಅವರು ಕಲ್ಕತ್ತೆಗೆ ಹೊರಟುಹೋದರು. ಶ್ರೀ ಶಾರದಾದೇವಿಯವರು ಆಗ ನಿರಾಶ್ರಿತರಾಗಿದ್ದರು. ಶ್ರೀರಾಮಕೃಷ್ಣರ ಹತ್ತಿರದ ನೆಂಟರಾರೂ ಆ ಊರಿನಲ್ಲಿರಲಿಲ್ಲ. ಎಲ್ಲರೂ ಜೀವನೋಪಾಯಕ್ಕಾಗಿ ಬೇರೆ ಬೇರೆ ಊರನ್ನು ಸೇರಿದ್ದರು. ಹೀಗೆ ನಿರಾಶ್ರಿತರಾದವರನ್ನು ನೋಡಿ ಅವರೊಂದಿಗೆ ಸಹಾನುಭೂತಿಯನ್ನು ತೋರಿ ದುಃಖದ ಭಾರವನ್ನು ಇಳಿಸುವ ಬದಲು ಆ ಊರಿನ ಜನರು ಇವರನ್ನು ನೋಡಿ ದೂರಲಾರಂಭಿಸಿದರು.

ವಿಧವೆಯ ವೇಷ ಇರಲಿಲ್ಲ. ಇವರ ಕೈಯಲ್ಲಿ ಬಳೆ ಇತ್ತು. ಸಣ್ಣ ಅಂಚಿನ ಸೀರೆ ಉಡುತ್ತಿದ್ದರು. "ಇವಳ ವೈಯ್ಯಾರ ನೋಡಿ ಗಂಡ ಸತ್ತರೂ ಇವಳ ಶೋಕಿ ಬಿಡಲಿಲ್ಲ" ಎಂದು ಪೂರ್ವಾಚಾರ ಪರಾಯಣರು ದೂರುವರು. ಆದರೆ ಗುಲಾಬ್‌ಮಾ ಇರುವ ತನಕ ಜನಗಳಿಗೆ ಸರಿಯಾದ ಸಮಾಧಾನ ಹೇಳಿ ಶ್ರೀ ಶಾರದಾದೇವಿಯವರನ್ನು ಈ ಕೋಟಲೆಯಿಂದ ತಪ್ಪಿಸುತ್ತಿದ್ದರು. ಅವಳು ಶ್ರೀರಾಮಕೃಷ್ಣರ ವಿಚಾರವನ್ನು ಬಲ್ಲವಳು. ಆಕೆ ನಿಂದಿಸುವ ಜನರನ್ನು ಕುರಿತು, "ಈಕೆ ಗದಾಧರನ ಪ್ರತ್ಯಕ್ಷದೇವತೆ. ಆಕೆ ನಿಮ್ಮಂತೆ ಸಾಧಾರಣ ಕೆಲಸಕ್ಕೆ ಬಾರದ ಹೆಂಗಸಲ್ಲ. ನಿಮ್ಮ ದರ್ಜೆಯಿಂದ ಅವರನ್ನು ಅಳೆಯಬೇಡಿ" ಎನ್ನುತ್ತಿದ್ದಳು.

ಶ್ರೀ ಶಾರದಾದೇವಿಯವರು ಗ್ರಾಮದ ಜನರ ನಿಂದೆಯನ್ನು ಕೇಳಿ ಕೇಳಿ ಬೇಸತ್ತರು. ಇದಕ್ಕೆಲ್ಲ ತಮ್ಮ ಕೈಯುಲ್ಲಿರುವ ಬಳೆಯೇ ಕಾರಣ. ಇವನ್ನು ತೆಗೆದು ಹಾಕಿಬಿಟ್ಟರೆ ಜನರು ನೆಮ್ಮದಿಯಾಗಿರುತ್ತಾರೆ ಎಂದು ತಿಳಿದು, ಬಳೆಯನ್ನು ತೆಗೆದು ಬೇರೆ ಇಟ್ಟರು. ಗಂಗಾನದಿಯ ಮೇಲೆ ಯಾವಾಗಲೂ ತುಂಬ ಭಕ್ತಿ. ಅಲ್ಲಿ ಹೋಗಿ ಒಮ್ಮೆ ಸ್ನಾನಮಾಡಿ ಬರಬೇಕೆಂದು ಇಷ್ಟವಾಯಿತು. ಆದರೆ ದ್ರವ್ಯಾಭಾವದಿಂದ ಆಗಲಿಲ್ಲ. ಒಂದು ದಿನ ಅವರು ಹತ್ತಿರದಲ್ಲಿದ್ದ ಭೂತಿನಾಲೆಗೆ ಸ್ನಾನಕ್ಕೆ ಹೋಗಿದ್ದಾಗ, ದಾರಿಯಲ್ಲಿ ಅವರಿಗೆ ಒಂದು ದೃಶ್ಯ ಕಂಡಿತು. ಶ್ರೀರಾಮಕೃಷ್ಣರು ಮುಂದೆ ಬರುತ್ತಿರುವರು. ಅವರ ಪಾದದಿಂದ ಪುಣ್ಯ ನದಿಗಳು ಹುಟ್ಟಿ ಅಲೆ ಅಲೆಯಾಗಿ ನಾನಾ ದಿಕ್ಕುಗಳಿಗೆ ಹರಿಯುತ್ತಿವೆ. ಅವರ ಹಿಂದೆ ನರೇಂದ್ರ, ರಾಖಾಲ್, ಬಾಬುರಾಮ್ ಮುಂತಾದವರು ಬರುತ್ತಿರುವರು. ಇದನ್ನು ನೋಡಿ, ಎಲ್ಲ ಅವರೇ ಆಗಿರುವರು. ಗಂಗಾನದಿ ಕೂಡ ಅವರ ಪದತಲದಲ್ಲಿ ಹುಟ್ಟಿರುವುದು, ಎಂದು ತಿಳಿದರು. ತಕ್ಷಣವೇ ಹತ್ತಿರದ ಗುಡಿಯ ಅಂಗಳದಿಂದ ಕೆಲವು ಹೂಗಳನ್ನು ಕಿತ್ತು ಗಂಗೆಯನ್ನು ಕಂಡ ಸ್ಥಲದಲ್ಲಿ ಪೂಜಿಸಿದರು. ಆಗಲೇ ಶ್ರೀರಾಮಕೃಷ್ಣರು ಮತ್ತೊಮ್ಮೆ ಗೋಚರಿಸಿ, "ನೀನು ಬಳೆಗಳನ್ನು ತೆಗೆಯಬೇಡ. ನಿನಗೆ ವೈಷ್ಣವತಂತ್ರ ಗೊತ್ತೆ?" ಎಂದು ಪ್ರಶ್ನಿಸಿದರು. ಶ್ರೀ ಶಾರದಾದೇವಿಯವರು ಏನೂ ಗೊತ್ತಿಲ್ಲವೆಂದರು. "ಗೌರಿಮಣಿ ಇಂದು ಮಧ್ಯಾಹ್ನ ಇಲ್ಲಿಗೆ ಬರುತ್ತಾಳೆ. ಅವಳು ಅದೇನೆಂಬುದನ್ನು ಹೇಳುತ್ತಾಳೆ" ಎಂದು ಹೇಳಿ ಅದೃಶ್ಯರಾದರು. ಅವರು ಹೇಳಿದಂತೆ ಅಂದಿನ ಮಧ್ಯಾಹ್ನ ಗೌರಿಮಣಿ ಬಂದು, "ಸತಿಗೆ ಪತಿ ಚಿನ್ಮಯ ಮೂರ್ತಿ. ಅವನು ಕಾಲವಾದರೂ ಆತನ ಆತ್ಮ

ಅಮರವಾದುದು. ಯಾರು ಪತಿಯಲ್ಲಿ ನಿಜವಾದ ಪ್ರೇಮವನ್ನಿಟ್ಟಿರುವರೋ, ಅವರು ವಿಧವೆಯಂತೆ ಆಚರಿಸುವುದಿಲ್ಲ" ಎಂದು ಹೇಳಿದರು. ಇದರಿಂದ ಅವರ ಸಂದೇಹ ಪರಿಹಾರವಾಯಿತು. ಶ್ರೀರಾಮಕೃಷ್ಣರ ದೇಹದಲ್ಲಿದ್ದ ಚೈತನ್ಯವೇ ಪುಣ್ಯನದಿಗಳ ರೂಪಿನಲ್ಲಿ ಹರಿಯುವುದು, ಪುಣ್ಯಕ್ಷೇತ್ರಗಳಲ್ಲಿ ವಾಸಿಸುವುದು; ಅವರ ಕೀರ್ತಿಯನ್ನೇ ಪುಣ್ಯಗ್ರಂಥಗಳು ಸಾರುವುವು ಎಂಬ ನಂಬಿಕೆ ದೃಢವಾಯಿತು. ಜನಗಳ ನಿಂದೆಗೆ ಅಂಜುವುದನ್ನು ಬಿಟ್ಟರು. ತೆಗೆದಿಟ್ಟ ಬಳೆಗಳನ್ನು ಪುನಃ ಧರಿಸಿದರು. ಪ್ರತ್ಯಕ್ಷ ಪತಿಯೇ ಬಂದು ತಮಗೆ ಹೇಳಿರುವಾಗ, ಯಾರು ಏನು ಅದಕ್ಕೆ ವಿರೋಧವಾಗಿ ಹೇಳಿದರೂ ಕಿವಿಗೊಡದೆ, ಅವರು ಕೊಟ್ಟ ಹಿಂಸೆಯನ್ನು ತಾಳಿ, ನಿಂದೆಯನ್ನೆಲ್ಲ ಕೇಳಿದರೂ ನಿಂದಿಸಿದವರನ್ನು ದ್ವೇಷಿಸದೇ ಅವರಿಗೆ ಒಳ್ಳೆಯದನ್ನೇ ಬಯಸುತ್ತಿದ್ದರು.

ನಿಂದೆಗಿಂತ ಮತ್ತೊಂದು ಭಯಂಕರ ಕಷ್ಟ ಅವರನ್ನು ಮುಸುಕಿತು. ಅದೇ ಬಡತನ. ಒಬ್ಬರೇ ಆ ಗ್ರಾಮದಲ್ಲಿ ತಮ್ಮ ಜೀವನವನ್ನು ಕಳೆಯಬೇಕಾಗಿತ್ತು. ತಮ್ಮ ಕಷ್ಟವನ್ನು ಹೇಳಿಕೊಂಡು ಹೃದಯ ದುಃಖದ ಆ ವೇಗವನ್ನು ಕಡಿಮೆ ಮಾಡಿಕೊಳ್ಳೋಣ ಎಂದರೆ ಹತ್ತಿರಕ್ಕೆ ಬಂಧುಗಳಾಗಲೀ ಗ್ರಾಮದ ಜನರಾಗಲೀ ಬರುತ್ತಿರಲಿಲ್ಲ. ಎಲ್ಲರಿಗೂ ಇವರನ್ನು ಕಂಡರೆ ಒಂದು ವಿಧವಾದ ಅಸಡ್ಡೆ. ಅನೇಕ ವಿಧವೆಯರಂತೆ ಇವರೂ ಇರದೇ ತಮ್ಮದೇ ಒಂದು ರೀತಿಯಲ್ಲಿ ಅವರು ಇದ್ದುದೇ ಅವರ ಅನಾದರಣೆಗೆ ಕಾರಣ. ಇವರಿದ್ದ ಮುರುಕು ಮನೆಯ ಕಣಜದಲ್ಲಿ ಸ್ವಲ್ಪ ಬತ್ತವಿತ್ತು. ಅದನ್ನು ಕುಟ್ಟಿ ಅಕ್ಕಿ ಮಾಡಿ ಅನ್ನವನ್ನು ಬೇಯಿಸಿ ಅದನ್ನು ಶ್ರೀ ಗುರುದೇವನಿಗೆ ಅರ್ಪಿಸಿ, ಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಅನ್ನದೊಂದಿಗೆ, ಬೆರಸಿ ತಿನ್ನಲು ಉಪ್ಪನ್ನು ಕೊಂಡುಕೊಳ್ಳುವುದಕ್ಕೂ ಕೂಡ ನೂರು ಕಾಸಿರಲಿಲ್ಲ. ಒಂದು ಗುದ್ದಲಿಯಿಂದ ಮನೆಯ ಹಿತ್ತಲನ್ನು ಅಗೆದು ಅಲ್ಲಿ ಸ್ವಲ್ಪ ಸೊಪ್ಪನ್ನು ಬೆಳೆಸಿದರು. ಅದು ಬೆಳೆದಮೇಲೆ ಸೊಪ್ಪನ್ನು ಬೇಯಿಸಿ ಅನ್ನದೊಂದಿಗೆ ತಿನ್ನುತ್ತಿದ್ದರು. ಇದರ ಜೊತೆಗೆ ಬೆರೆಸುವುದಕ್ಕೆ ಮೆಣಸಿನಕಾಯಿ ಅಥವಾ ಇನ್ನು ಏನಾದರೂ ಮಸಾಲೆ ಕೂಡ ಇರುತ್ತಿರಲಿಲ್ಲ. ತಮಗೆ ಬರುವ ಕಷ್ಟವೆಲ್ಲವೂ ದೇವರಿಂದಲೇ ಬರುತ್ತದೆ. ಆತ ತನ್ನನ್ನು ಪರೀಕ್ಷಿಸಲು ಇವನ್ನೆಲ್ಲಾ ಕೊಡುತ್ತಿರುವನು, ಎಂದು ತಿಳಿದು ಗೊಣಗಾಡದೆ ಇದ್ದುದರಲ್ಲಿಯೇ ತೃಪ್ತರಾಗಿ ತಮ್ಮ ಕಷ್ಟವನ್ನು ಮತ್ತಾರಿಗೂ ಹೇಳದೆ ಮೌನವಾಗಿ ಕಾಲ ಕಳೆಯುತ್ತಿದ್ದರು

ಇವರ ತಾಯಿ ಮೂರು ಮೈಲಿಗಳ ದೂರದಲ್ಲಿ ಜಯರಾಮವಟಿಯಲ್ಲಿದ್ದರು. ಒಂದುದಿನ ತನ್ನ ಮಗಳನ್ನು ಬರಹೇಳಿದರು. ಮಗಳನ್ನು ನೋಡಿದಾಗ ತಾಯಿಯ ಕಣ್ಣಿನಿಂದ ನೀರು ಉಕ್ಕಿತು. ಶ್ರೀ ಶಾರದಾದೇವಿಯವರು ಉಟ್ಟಿದ್ದ ಸೀರೆ ಚಿಂದಿ ಚಿಂದಿಯಾಗಿತ್ತು. ಕೃಶವಾದ ದೇಹ ಸೀರೆಯ ಕಂಡಿಯಿಂದ ಕಾಣುತ್ತಿತ್ತು. ಮಗಳಿಗೆ ಪುನಃ ಕಮಾರಪುಕುರಕ್ಕೆ ಹೋಗ ಬೇಡ, ತನ್ನೊಂದಿಗೆ ಇರು ಎಂದು ಹೇಳಿದರು. ಆದರೆ ಶ್ರೀ ಶಾರದಾ ದೇವಿಯವರಿಗೆ ಅಲ್ಲಿರಲು ಇಚ್ಛೆಯಿರಲಿಲ್ಲ. ತಮ್ಮ ಬಡತನದ ದುಃಸ್ಥಿತಿ ಯನ್ನು ಕೂಡ ತಾಯಿಗೆ ಹೇಳಲಿಲ್ಲ. "ನಾನು ಈಗ ಕಮಾರಪುಕುರಕ್ಕೆ ಹೋಗುತ್ತೇನೆ. ನನ್ನ ಭವಿಷ್ಯವೆಲ್ಲ ದೇವರ ಕೈಯಲ್ಲಿದೆ. ಆತನ ಇಚ್ಛೆ ಯಂತೆ ಮುಂದಿನದು ಆಗುತ್ತದೆ" ಎಂದು ಹೇಳಿ ಹೊರಟುಹೋದರು. ಅವರು ತಮ್ಮ ಕಷ್ಟವನ್ನು ತಾಯೊಂದಿಗೆ ಹೇಳಲಿಲ್ಲ. ಆದರೆ ಹೆತ್ತ ತಾಯಿಗೆ ಮಗಳ ದುಃಸ್ಥಿತಿಯೇ ನಾಲಿಗೆಗಿಂತ ಜೋರಾಗಿ ಎದೆಗೆ ನಾಟು ವಂತೆ ಹೇಳುತ್ತಿತ್ತು. ಹೋಗುತ್ತಿರುವ ಮಗಳನ್ನು ನೋಡಿ, "ಅವತಾರ ಪುರುಷರೆಂದು ಇವಳ ಗಂಡನನ್ನು ಕಲೆಯುವರಲ್ಲ! ಕೈಹಿಡಿದ ಹೆಂಡತಿ ಯನ್ನು ಹೀಗೆ ಬಿಟ್ಟು ಹೋಗಿರುವನು. ಮಾನ ಕಾಪಾಡಿಕೊಳ್ಳಲು ಒಂದು ಸರಿಯಾದ ಸೀರೆ ಕೂಡ ಇಲ್ಲವಲ್ಲ" ಎಂದು ಅವರಿಗೆ ಅನ್ನಿಸಿರ ಬಹುದು!

ಕಮಾರಪುಕುರದಲ್ಲಿ ಒಂಟಿಯಾಗಿ ಕಾಲ ಕಳೆಯುತ್ತಿರುವಾಗಲೇ ಒಂದು ದಿನ ಒಬ್ಬ ಕಾಮುಕ ಇವರನ್ನು ಅಟ್ಟಿಸಿಕೊಂಡು ಬಂದನು. ಅವನನ್ನು ನೋಡಿ ಇವರಿಗೆ ದಿಗಿಲಾಯಿತು. ಕಣಜದ ಹಿಂದೆ ಹೋಗಿ ಅವಿತುಕೊಂಡರು. ಅಲ್ಲಿಯೂ ಅವನು ಇವರನ್ನು ಬೆನ್ನಟ್ಟಿ ಬಂದನು. ಸುತ್ತಲೂ ಇವರು ಮೂರು ನಾಲ್ಕು ಬಾರಿ ಸುತ್ತಿ ಇವನಿಂದ ತಪ್ಪಿಸಿಕೊಳ್ಳ ಬೇಕೆಂದು ಯತ್ನಿಸಿದರು. ಅದು ನಿರರ್ಥಕವಾಯಿತು. ಹತ್ತಿರ ಜನರಾರೂ ಇರಲಿಲ್ಲ. ಇನ್ನೊಬ್ಬರ ಸಹಾಯ ಕೋರಿ ನಿಂತರೆ ಪ್ರಯೋಜನವಿಲ್ಲವೆಂದು ತಾವೇ ಅವನಿಗೆ ಬುದ್ಧಿ ಕಲಿಸಲು ಸಿದ್ಧರಾದರು. ಸ್ವಭಾವತಃ ಅವರು ಲಜ್ಜಾ ಮತ್ತು ಸೌಮ್ಯ ಪ್ರಕೃತಿಯವರು. ಆಗ ಭಯಂಕರ ರೂಪುತಾಳಿ ಓಡಿ ಹೋಗುವುದನ್ನು ನಿಲ್ಲಿಸಿ ಹಿಂತಿರುಗಿ ಅವನಮೇಲೆ ಬಿದ್ದು ನೆಲಕ್ಕೆ ಅಪ್ಪಳಿಸಿದರು. ಅವನ ಎದೆಯಮೇಲೆ ಕುಳಿತು ನಾಲಿಗೆ ಹೊರಗೆಳೆದು ಕೆನ್ನೆಗೆ ಚೆನ್ನಾಗಿ ಪೆಟ್ಟು ಕೊಟ್ಟರು. ಆತ ಮಾರನೆಯ ದಿನದಿಂದ ಪಶ್ಚಾತ್ತಾಪಗೊಂಡು ತನ್ನ ಹೀನ ಗುಣಕ್ಕೆ ತಾನೇ ನಾಚಿಕೊಂಡನು.

ಅವರು ಪಡುತ್ತಿದ್ದ ಕಷ್ಟ ಊರ ಹೊರಗೆ ಹೋಗದೇ ಇದ್ದುದಕ್ಕೆ ಇವರು ಯಾರಿಗೂ ಹೇಳದೆ ಇದ್ದುದು ಒಂದು ಕಾರಣ, ಮತ್ತು ಜತೆಗೆ ಯಾರು ಇಲ್ಲದಿದ್ದುದೂ ಮತ್ತೊಂದು ಕಾರಣ. ಈ ಏಕಾಂಗಿಯಾದ ಜೀವನದ ಜತೆಗೆ ಬಡತನ ಬೆರೆತು ತಮ್ಮ ಜೀವನದ ಗತಿ ಏನು ಎಂಬ ಶಂಕೆ ಕೆಲವು ವೇಳೆ ಏಳುತ್ತಿತ್ತು. ಮಕ್ಕಳಿಲ್ಲ; ನನ್ನವರು ಎಂದು ಕರೆಯುವ ಬಂಧುಗಳಿಲ್ಲ; ಮುಂದೆ ಗತಿಯಾರು ಎಂದು ದುಃಖಿಸುವರು. ಹೀಗೆ ದುಃಖಿಸುತ್ತಿದ್ದಾಗ, ಅವರಿಗೆ ಒಂದುದಿನ ಶ್ರೀರಾಮಕೃಷ್ಣರು ಕಂಡಂತೆ ಆಗಿ, " ಏನು ನಿನಗೆ ಮಕ್ಕಳು ಬೇಕೆ? ಅನೇಕ ಪುತ್ರರನ್ನು ಕೊಟ್ಟಿರುವೆನಲ್ಲ. ಇನ್ನು ಕೆಲವು ದಿನಗಳಾಗಲಿ, ಎಷ್ಟು ಮಂದಿ ನಿನ್ನನ್ನು ಅಮ್ಮಾ ಅಮ್ಮಾ ಎಂದು ಕೂಗುತ್ತಾ ಬರುತ್ತಾರೆ" ಎಂದರಂತೆ. ಹೀಗೆ ದುಃಖದಲ್ಲಿ ತೊಳಲುತ್ತಿದ್ದಾಗ ಶ್ರೀರಾಮಕೃಷ್ಣರ ನೆನಪು ಒಂದು ಊರುಗೋಲಿನಂತೆ ಆಗಿ, ಹೊತ್ತ ದುಃಖದ ಭಾರದಿಂದ ಬೀಳದಂತೆ ಮಾಡಿ, ಮುಂದೆ ನಡೆಯಲು ಶಕ್ತಿ ಕೊಡುತ್ತಿತ್ತು. ಮುಂದೆ ಶ್ರೀರಾಮಕೃಷ್ಣರು ಜಗತ್ತಿಗೆ ಯಾವ ಕಾರ್ಯಕ್ಕಾಗಿ ಬಂದರೊ ಅದನ್ನು ತಾವು ಮಾಡಬೇಕಾಗಿದೆಯೆಂದು ತಮ್ಮ ಕಾಲವನ್ನು ನೂಕುತ್ತಿದ್ದರು. ಅನ್ನದೊಂದಿಗೆ ಬೆರೆಸಲು ಉಪ್ಪೇ ಇಲ್ಲ, ಕತ್ತಲನ್ನು ತಗ್ಗಿಸಲು ದೀಪ ಉರಿಸುವುದಕ್ಕೆ ಎಣ್ಣೆ ಎಲ್ಲಿಂದ ಬರಬೇಕು! ಹಗಲೇ ಅವರ ತೈಲ, ರವಿಯೇ ಅವರ ಬೆಳಕು. ಸೂರ್ಯ ಮುಳುಗುವ ಹೊತ್ತಿಗೆ ತಮ್ಮ ಕೆಲಸವನ್ನು ಪೂರೈಸುವರು. ಸುತ್ತಲೂ ಕತ್ತಲಾವರಿಸಿ ತಾರಾಗಣಗಳು ಮೇಲೇರುವುವು. ಕತ್ತಲೆಯ ಕಡಲಿನಲ್ಲಿ ತೇಲುವ ಕೋಣೆಯಲ್ಲಿ ಕುಳಿತು ಪತಿದೇವರು ಹೇಳಿದಂತೆ ಹರಿನಾಮ ಸ್ಮರಣೆ ಮಾಡುವರು. ಅನಂತರ ನಿದ್ರಾಪರವಶರಾಗುವರು. ಗತಿವಿಹೀನರಿಗೆ ಗತಿಯಲ್ಲವೇ ದೇವರು. ಯಾರು ದೂರವಾದರೇನು? ಹತ್ತಿರಕ್ಕಿಂತ ಹತ್ತಿರವಲ್ಲವೆ ಅವನು! ತನ್ನನ್ನು ನಂಬಿದವರನ್ನು ಕೈಬಿಡುವನೆ?

———

## ೧೪. ಬಿಡುಗಡೆ

ಶ್ರೀ ಶಾರದಾದೇವಿಯವರು ದುಃಖದಲ್ಲಿ ಬಹುಕಾಲ ತೊಳಲ ಬೇಕಾಗಿರಲಿಲ್ಲ. ಇವರು ತಮ್ಮ ದುಃಸ್ಥಿತಿಯ ವಿಚಾರವಾಗಿ ಯಾರಿಗೂ ಹೇಳದೇ ಇದ್ದರೂ, ಯಾರಿಂದಲೋ ಇವರ ಕಾರ್ಪಣ್ಯದ ಜೀವನ ಕಲ್ಕತ್ತೆಯಲ್ಲಿದ್ದ ಶ್ರೀರಾಮಕೃಷ್ಣರ ಭಕ್ತರಿಗೆ ಮುಟ್ಟುವಂತೆ ಮಾಡಿತು. ಇವರು ಪ್ರಸನ್ನಮಯಿ ಎಂಬ ನೆರೆಮನೆಯ ಗೃಹಿಣಿಗೆ ತನ್ನೊಂದಿಗೆ ರಾತ್ರಿ ಹೊತ್ತು ಮಲಗಲು ಒಬ್ಬ ವೃದ್ಧ ಪರಿಚಾರಕಳನ್ನು ಕಳುಹಿಸೆಂದು ಕೇಳಿ ಕೊಂಡರು. ಅದರಂತೆ ಪ್ರಸನ್ನಮಯಿ ಕಳುಹಿಸಲು, ಆ ಪರಿಚಾರಕಳು ಶ್ರೀ ಶಾರದಾದೇವಿಯವರು ಜೀವಿಸುತ್ತಿದ್ದ ರೀತಿಯನ್ನು ಜಯರಾಮವಟಿ ಯಲ್ಲಿದ್ದ ತಾಯಿ ಶ್ಯಾಮಸುಂದರೀ ದೇವಿಯವರಿಗೆ ಹೇಳಿದಳು. ಅವರು ಕಲ್ಕತ್ತೆಯಲ್ಲಿ ಪೌರೋಹಿತ್ಯ ಮಾಡುತ್ತಿದ್ದ ಪ್ರಸನ್ನಕುಮಾರನೆಂಬ ತಮ್ಮ ಮಗನಿಗೆ ಹೇಳಿಕಳುಹಿಸಿದರು. ಶ್ರೀರಾಮಕೃಷ್ಣರ ಮನೆಗೆ ಆಗ ಯಜಮಾನ ನಾದ ರಾಮಲಾಲನೆಂಬುವನು ದಕ್ಷಿಣೇಶ್ವರದ ಕಾಳಿಕಾದೇವಾಲಯದಲ್ಲಿ ಪೂಜಾರಿಯಾಗಿದ್ದನು. ಅಲ್ಲಿಗೆ ಪ್ರಸನ್ನಕುಮಾರನು ಹೋಗಿ, ಹೇಗೆ ಅವರೆಲ್ಲ ತನ್ನ ಅಕ್ಕ ಶಾರದಾದೇವಿಯನ್ನು ಮರೆತುಬಿಟ್ಟು ಇರುವರೆಂದು ದೂರು ಹೇಳಿದನು. ಶ್ರೀ ಶಾರದಾದೇವಿಯವರ ಸ್ನೇಹಿತಳಾದ ಗುಲಾಬ್ ಮಾವಿಗೂ ಈ ಸುದ್ದಿ ತಲಪಿತು. ಶ್ರೀರಾಮಕೃಷ್ಣರ ಭಕ್ತರು ಬದುಕಿರು ವಾಗಲೇ ಅವರ ಸತಿ ಶ್ರೀ ಶಾರದಾದೇವಿ ಎಂತಹ ಬಡತನದಲ್ಲಿ ನರಳು ತ್ತಿರುವರು ಎಂದು ಎಲ್ಲರಿಗೂ ಹೋಗಿ ಹೇಳಿದಳು. ಈ ವಿಷಯದಲ್ಲಿ ಆಸಕ್ತಿ ವಹಿಸಿ ಶ್ರೀರಾಮಕೃಷ್ಣರ ಗೃಹಸ್ಥ ಭಕ್ತರಿಂದ ಚಂದಾ ಎತ್ತಿ ಶ್ರೀ ಶಾರದಾದೇವಿಯವರು ಕಲ್ಕತ್ತೆಗೆ ಬರಬೇಕೆಂದು ಭಕ್ತರ ಪರವಾಗಿ ಕಾಗದ ಬರೆದರು.

ಕಲ್ಕತ್ತೆಗೆ ಹೋಗಿ ಭಕ್ತರ ಮನೆಯಲ್ಲಿ ವಾಸಿಸುವುದಕ್ಕೆ ನಿಮಂತ್ರಣ ವೇನೋ ಬಂದಿತು. ಅದರೆ ಅದರಂತೆ ಹೇಗೆ ನಡೆದುಕೊಳ್ಳುವುದು ಎಂಬ ಸಂದೇಹ ತಲೆದೋರಿತು. ಆಗಲೇ ಆ ಹಳ್ಳಿಯ ಜನರು ಇವರ ವಿಚಾರ ವಾಗಿ ಆಡಿಕೊಳ್ಳುತ್ತಿದ್ದರು. ಇದನ್ನು ಕೇಳಿದರೆ ಮತ್ತಷ್ಟು ನಿಂದಿಸು ವುದು ಜಾಸ್ತಿಯಾಗುವುದೆಂದು ತಿಳಿದು ಹಳ್ಳಿಯ ಪ್ರಮುಖರ ಅಭಿಮತ ವನ್ನು ಕೇಳಿದರು. ಪೂರ್ವಾಚಾರ ಪಂಜರದಲ್ಲಿ ಸಿಕ್ಕಿಬಿದ್ದು ನರಳುತ್ತಿರು ವವರು ಏನು ಉತ್ತರ ಕೊಡಬಲ್ಲರು? ನಂಟರಲ್ಲದ ಪರಗಂಡಸರ ಮನೆಗೆ ಹೋಗಿ ಹೆಂಗಸು ಇರುವುದು ಸರಿಯಲ್ಲವೆಂದು ತಮ್ಮ ಅಭಿಪ್ರಾಯವನ್ನು

ಕೊಟ್ಟರು. ಆದರೆ ಪ್ರಸನ್ನಮಯಿದೇವಿ ಬಂದು, " ಭಕ್ತರು ಪರಕೀಯ ಗಂಡಸರಲ್ಲ. ಅವರೆಲ್ಲ ಇವರಿಗೆ ಮಕ್ಕಳ ಸಮಾನ. ತಾಯಿ ಮಕ್ಕಳ ಮನೆಯಲ್ಲಿರುವುದರಲ್ಲಿ ಏನೂ ಅಡ್ಡಿಯಿಲ್ಲ" ಎಂದರು. ಶ್ರೀ ಶಾರದಾದೇವಿಯವರಿಗೆ ಇದು ಸೂಕ್ತವಾಗಿ ತೋರಿತು. ಆದರೂ ತನ್ನ ತಾಯಿ ಏನು ಹೇಳುತ್ತಾರೊ ಅವರ ಮತವನ್ನು ತಿಳಿದುಬರುವ ಎಂದು ಜಯರಾಮವಟಿಗೆ ಹೋಗಿ ತಾಯಿಯನ್ನು ಕೇಳಿದಾಗ, ಅವರು ಮೊದಲು ಇದಕ್ಕೆ ಒಪ್ಪಿಗೆ ಕೊಡದೇ ಇದ್ದರೂ ಕ್ರಮೇಣ ಆಲೋಚಿಸಿ, ಸಂತೋಷದಿಂದ ಹೋಗಲು ಅಪ್ಪಣೆ ಕೊಟ್ಟರು.

ಒಂದು ವರ್ಷ ದುಃಖದ ಬಡತನದ ಕುಲುಮೆಯಲ್ಲಿ ಬೆಂದು ಕಲ್ಕತ್ತೆಗೆ ಬಂದರು. ಇವರು ಬಂದ ಸುದ್ದಿ ಶ್ರೀರಾಮಕೃಷ್ಣರ ಭಕ್ತರೆಲ್ಲರಿಗೂ ಆನಂದದಾಯಕವಾಯಿತು. ಸ್ತ್ರೀಭಕ್ತರ ಸಂತೋಷಕ್ಕಂತೂ ಪಾರವೇ ಇರಲಿಲ್ಲ. ಅಧ್ಯಾತ್ಮಿಕ ಜೀವನದಲ್ಲಿ ಸಲಹೆಕೊಟ್ಟು ಮುಂದುವರಿಯುವಂತೆ ಪ್ರೋತ್ಸಾಹಿಸುವವರು ಒಬ್ಬರು ಬೇಕಾಗಿತ್ತು. ಶ್ರೀ ಶಾರದಾದೇವಿಯವರ ಬರವು ಇವರ ಬೇಡಿಕೆಯನ್ನು ಸಲ್ಲಿಸಿತು.

ಶ್ರೀ ಶಾರದಾದೇವಿಯವರನ್ನು ಕಲ್ಕತ್ತೆಯಲ್ಲಿ ಪೋಷಿಸುವ ಭಾರವೆಲ್ಲ ಶ್ರೀರಾಮಕೃಷ್ಣರ ಭಕ್ತರಮೇಲೆ ಬಿತ್ತು. ಆದರೆ ಶ್ರೀರಾಮಕೃಷ್ಣರ ಭಕ್ತರೆಲ್ಲರೂ ಒಂದೇ ವಿಧವಾದ ಗೌರವವನ್ನು ಶ್ರೀ ಶಾರದಾದೇವಿಯವರ ಮೇಲೆ ಇಟ್ಟಿರಲಿಲ್ಲ. ಕೆಲವರು ಆಕೆ ಎಲ್ಲರ ಮನೆಯಲ್ಲಿರುವ ಅನೇಕರಂತೆ ಸಾಧಾರಣ ಹೆಂಗಸೆಂದು ತಿಳಿದಿದ್ದರು. ಪುರುಷರು ಸ್ತ್ರೀಗೆ ಮಹಾತ್ಮಳ ಪಟ್ಟವನ್ನು ಸುಲಭವಾಗಿ ಕೊಡುವರೆ? ಸ್ವಲ್ಪ ಚೌಕಾಶಿಯನ್ನು ಮಾಡಿಯೇ ಮಾಡುವರು. " ನನಗೆ ಶ್ರೀರಾಮಕೃಷ್ಣರೇನೋ ಗೊತ್ತು. ಅವರು ಮಹಾತ್ಮರೆಂಬುದನ್ನು ನೋಡಿ ತಿಳಿದಿರುವೆನು. ಆದರೆ ಶಾರದಾದೇವಿಯವರ ವಿಚಾರ ನನಗೇನೂ ಗೊತ್ತಿಲ್ಲ" ಎಂದರು ಕೆಲವರು. ಆದರೆ ಅವರ ಜತೆಯಲ್ಲಿದ್ದ ಯೋಗಾನಂದ, ಗುಲಾಬ್‌ಮಾ, ಇವರು ಶ್ರೀರಾಮಕೃಷ್ಣರು ತಮ್ಮ ತಪಸ್ಸಿನ ಸಾಧನೆಯಿಂದ ಏರಿದ ಎತ್ತರಕ್ಕೆ ಶ್ರೀ ಶಾರದಾದೇವಿಯವರು ಅವರನ್ನು ಪೂಜಿಸಿ, ಸೇವಿಸಿ, ಏರಿರುವರು ಎಂಬುದಕ್ಕೆ ಸಾಕಾದಷ್ಟು ನಿದರ್ಶನಗಳನ್ನು ಕೊಟ್ಟು ಒಪ್ಪಿಸಿದರು. ಸನ್ಯಾಸಿ ಭಕ್ತರಲ್ಲಿ ಶ್ರೀಶಾರದಾದೇವಿಯವರ ಮೇಲಿನ ವಿಚಾರಣೆಯನ್ನು ಯೋಗಾನಂದರು ವಹಿಸಿದರು. ಇವರ ತರುವಾಯ ಶಾರದಾನಂದರು ಇವರ ಮೇಲ್ವಿಚಾರಣೆಯನ್ನು ವಹಿಸಿ ಎಲ್ಲ ವಿಧದಲ್ಲಿಯೂ ಅನುಕೂಲ ಮಾಡಿಕೊಟ್ಟರು.

ಕ್ರಿ. ಶ. ೧೮೮೮ ರಿಂದ ಅವರ ಮಹಾಸಮಾಧಿಯವರಿವಿಗೆ ಎಂದರೆ ೧೯೨೦ನೇ ಜುಲೈ ತಿಂಗಳವರೆವಿಗೆ ಶ್ರೀಶಾರದಾದೇವಿಯವರು ಸಾಮಾನ್ಯವಾಗಿ ಅರ್ಧ ಕಾಲವನ್ನು ಕಲ್ಕತ್ತೆಯಲ್ಲಿ ಉಳಿದ ಅರ್ಧ ಕಾಲವನ್ನು ಜಯರಾಮವಟಿಯಲ್ಲಿ ಕಳೆದರು. ಕ್ರಿ. ಶ. ೧೯೦೯ ರಲ್ಲಿ " ಉದ್ಬೋಧನ" ಎಂಬ ಶ್ರೀರಾಮಕೃಷ್ಣಸಂಘದ ಮಾಸಿಕ ಪತ್ರಿಕೆಯ ಕಛೇರಿಯನ್ನು ತೆರೆದರು. ಅಲ್ಲಿ ಸ್ವಾಮಿ ಶಾರದಾನಂದರು ಶ್ರೀಶಾರದಾದೇವಿಯವರಿಗೆ ಇಳಿದುಕೊಳ್ಳುವುದಕ್ಕೆ ಬೇಕಾದ ವಸತಿಗೃಹವನ್ನು ಏರ್ಪಡಿಸಿದರು. ಇದಕ್ಕೆ ಮುಂಚೆ ಅವರು ಬಂದಾಗ ಸ್ವಲ್ಪಕಾಲ ಇರಬೇಕಾದರೆ ಮಾಸ್ಟರ್ ಮಹಾಶಯ, ಇಲ್ಲದಿದ್ದರೆ ಬಲರಾಮವಸು, ಇವರುಗಳ ಮನೆಯಲ್ಲಿ ಇರುತ್ತಿದ್ದರು. ದೀರ್ಘಕಾಲ ಇರಬೇಕಾದರೆ ಅವರಿಗಾಗಿ ಭಕ್ತರು ಒಂದು ಬಾಡಿಗೆ ಮನೆಯನ್ನು ಮಾಡುತ್ತಿದ್ದರು. ಇಂತಹ ಒಂದು ಸಮಯದಲ್ಲಿಯೆ ೧೮೯೩ರಲ್ಲಿ ಶ್ರೀಶಾರದಾದೇವಿಯವರು ಲೀಲಾಂಬರಮುಖರ್ಜಿಯ ಮನೆಯಲ್ಲಿದ್ದಾಗ ಪಂಚತಪವನ್ನು ಮಾಡಿದರು. ಶ್ರೀಶಾರದಾದೇವಿಯವರು ಕಮಾರಪುಕುರದಲ್ಲಿ ಇದ್ದ ದಿವಸಗಳಿಂದಲೂ ಸುಮಾರು ಹನ್ನೊಂದು ವರ್ಷದ ಸುಂದರ ಹುಡುಗಿಯೊಬ್ಬಳು ಇವರ ಜತೆಯಲ್ಲಿ ಇರುತ್ತಿದ್ದಂತೆ ತೋರುತ್ತಿತ್ತು. ಕೆಲವು ವೇಳೆ ಅದು ಅದೃಶ್ಯವಾಗಿ ಜಟಾಧಾರಿಯಾದ ಸನ್ಯಾಸಿಯಾಗಿ ಕಾಣಿಸಿಕೊಳ್ಳುತ್ತಿದ್ದಿತು. ಮೊದಮೊದಲು ಇದಕ್ಕೆ ಅಷ್ಟು ಗಮನ ಕೊಡದೇ ಇದ್ದರೂ ಕಲ್ಕತ್ತೆಗೆ ಬಂದಮೇಲೆ ಯೋಗಿನ್‌ಮಾ ಎಂಬಾಕೆಯ ಸಲಹೆ ತೆಗೆದುಕೊಂಡು ಪಂಚತಪವನ್ನು ಮಾಡಲು ಒಪ್ಪಿಕೊಂಡರು. ಪಂಚತಪವೆಂದರೆ ಐದು ಬೆಂಕಿಗಳ ಮಧ್ಯೆ ತಪಸ್ಸನ್ನು ಮಾಡುವುದು. ಬೇಸಿಗೆಯ ಬಿಸಲಿನ ಕೆಳಗೆ ನಾಲ್ಕು ದಿಕ್ಕಿನಲ್ಲಿಯೂ ಬೆಂಕಿ ಹಾಕಿ ಅದರ ಮಧ್ಯೆ ಕುಳಿತು ಸೂರ್ಯೋದಯದಿಂದ ಸೂರ್ಯಾಸ್ತಮಯದವರೆಗೆ ತಪಸ್ಸನ್ನು ಮಾಡುವುದು. ಅದರಂತೆ ಶ್ರೀಶಾರದಾದೇವಿಯವರು ಬೆಳಿಗ್ಗೆ ಗಂಗಾನದಿಯಲ್ಲಿ ಸ್ನಾನಮಾಡಿ ಮಡಿಬಟ್ಟೆ ಉಟ್ಟು ಬೆಂಕಿಯ ಮಧ್ಯದಲ್ಲಿ ಕುಳಿತು ಸಾಯಂಕಾಲದವರೆವಿಗೂ ತಪಸ್ಸನ್ನು ಮಾಡಿದರು. ಮೊದಲು ಇವರಿಗೆ ನಾನು ಹೇಗೆ ಇದನ್ನು ಮಾಡಬಲ್ಲೆನೆಂಬ ಅಧೈರ್ಯವಿದ್ದರೂ, ಅಲ್ಲಿ ಕುಳಿತು ದೇವರ ಹೆಸರನ್ನು ಉಚ್ಚರಿಸುತ್ತ ಜಪಮಾಡಲು ಮೊದಲು ಮಾಡಿದಮೇಲೆ, ಸುತ್ತಲಿರುವ ಬೆಂಕಿಯ ಶಾಖವಾಗಲೀ, ಬಿಸಲಿನ ಝಳವಾಗಲೀ ತೋರುತ್ತಿರಲಿಲ್ಲ. ಹೀಗೆ ಏಳು ದಿನಗಳು ಮಾಡಿದಮೇಲೆ ಹಿಂದೆ ಅವರ ಕಣ್ಣಿಗೆ ಕಾಣಿಸಿಕೊಳ್ಳುತ್ತಿದ್ದ

ವ್ಯಕ್ತಿ ಮಾಯವಾಯಿತು. ಹೊಗೆ ಮತ್ತು ಬೆಂಕಿಯ ಮಧ್ಯೆ ಅವರು ಏಳು ದಿನಗಳು ಬೆಂದಾದ ಮೇಲೆ ದೇಹ ಕಾಡಿಗೆಯಂತೆ ಕಪ್ಪಾಗಿತ್ತಂತೆ.

ಕಮಾರಪುಕುರುದಲ್ಲಿ ಪ್ರತ್ಯಕ್ಷ ಬಡತನದಲ್ಲಿ ನರಳುತ್ತಿದ್ದುದರಿಂದ ಅವರಿಗೆ ಉಳಿದವರು ಹೇಗೆ ಅದರಲ್ಲಿ ಸಿಕ್ಕಿ ನೋಯುತ್ತಿರುವರು ಎಂದು ತಿಳಿದು ಅವರಿಗೆ ಸಹಾನುಭೂತಿಯನ್ನು ತೋರಲು ಸಹಾಯ ಮಾಡಿತು. ಇವರು ಎಂತಹ ಸಾಧ್ವಿಯಾಗಿದ್ದರೂ, ಪತಿವ್ರತಾ ಶಿರೋಮಣಿಯಾಗಿದ್ದರೂ, ಜನರು ಇವರನ್ನು ನಿಂದೆ ಎಂಬ ಬಾಣದಿಂದ ನೋಯಿಸುತ್ತಿದ್ದರು ಎನ್ನುವುದು ಇವರಿಗೆ ಅನುಭವವಾಯಿತು. ದೇಹಾಭಿಮಾನ ತೊರೆದು, ಶ್ರೀರಾಮಕೃಷ್ಣರ ಪದತಲದಲ್ಲಿ ತನು, ಮನ, ಧನವನ್ನು ಧಾರೆಯೆರೆದಿದ್ದರು. ಜನರು ಅವರನ್ನೇ ನಿಂದಿಸುತ್ತಿದ್ದರು. ಇದರಿಂದ ಅವರಿಗೆ ಕಡಿಮೆ ವ್ಯಥೆಯಾಗುತ್ತಿರಲಿಲ್ಲ. ಆಧ್ಯಾತ್ಮಿಕ ತಳಹದಿ ಏನೂ ಇಲ್ಲದೆ ದಾರಿ ತಪ್ಪಿದ ಅಬಲೆಯನ್ನು ಜನರು ದೂರಿದರೆ ಅದನ್ನು ಸೈರಿಸಲು ಶಕ್ತಿ ಎಲ್ಲಿ ಬರಬೇಕು. ಇದನ್ನು ತಿಳಿದು ಸಮಾಜ ಯಾರನ್ನು ಪಾಪಿ ಭ್ರಷ್ಟೆ ಎಂದು ಹಳಿಯುವುದೋ ಅವರಿಗೆಲ್ಲ ಸಹಾನುಭೂತಿ ಮತ್ತು ಪ್ರೇಮವನ್ನು ಬೀರಿ ಸಂತೋಷಪಡಿಸುತ್ತಿದ್ದರು. ಇವರು ಕಲ್ಕತ್ತೆಗೆ ಬಂದಮೇಲೆ ಮನಸ್ಸು ಯಾವಾಗಲೂ ಅಂತರ್ಮುಖವಾಗಿತ್ತು. ದೇಹದಲ್ಲಿ ಒಂದು ಅನಿರ್ವಚನೀಯವಾದ ದೈವೀ ತೇಜಸ್ಸು ಹೊಳೆಯುತ್ತಿತ್ತು. ಒಂದು ದಿನ ಬಲರಾಮಬಾಬುವಿನ ಮನೆಯ ಮೇಲೆ ಧ್ಯಾನಮಾಡುತ್ತಿದ್ದಾಗ ಅವರು ಸಂಪೂರ್ಣವಾಗಿ ಬಾಹ್ಯ ಪ್ರಜ್ಞಾಶೂನ್ಯರಾದರಂತೆ. ಬಹಳ ಹೊತ್ತಾದಮೇಲೆ ಪ್ರಜ್ಞೆ ಬಂತು. ಹತ್ತಿರಿದ್ದ ಯೋಗಿನ್‌ಮಾ ಕುರಿತು "ನಾನು ಆ ಸ್ಥಿತಿಯಲ್ಲಿ ಬಹಳ ದೂರ ಪ್ರಯಾಣ ಮಾಡಿದೆ. ಅಲ್ಲಿರುವ ಜನರೆಲ್ಲರೂ ನನ್ನನ್ನು ಅತ್ಯಂತ ಆದರದಿಂದ ಪ್ರೀತಿಸುವಂತೆ ಇತ್ತು: ನನ್ನ ಸೌಂದರ್ಯ ವರ್ಣನಾತೀತವಾಗಿತ್ತು. ಶ್ರೀರಾಮಕೃಷ್ಣರು ಅಲ್ಲಿದ್ದರು. ಬಹಳ ವಿಶ್ವಾಸದಿಂದ ನನ್ನನ್ನು ಅವರ ಪಕ್ಕದಲ್ಲಿ ಕುಳಿತುಕೊಳ್ಳುವಂತೆ ಮಾಡಿದರು. ಆ ಆನಂದವನ್ನು ನಾನು ನಿಮಗೆ ಮಾತಿನಲ್ಲಿ ವರ್ಣಿಸುವುದಕ್ಕೆ ಆಗುವುದಿಲ್ಲ" ಎಂದು ಹೇಳಿದರು.

ಮತ್ತೊಂದು ದಿನ ಬಹಳ ಕಾಲ ಧ್ಯಾನಾಸಕ್ತರಾಗಿದ್ದು ಮನಸ್ಸು ಕೆಳಗೆ ಬಂದಮೇಲೆ "ನನ್ನ ಕಾಲುಗಳೆಲ್ಲಿ, ಕೈಗಳೆಲ್ಲಿ" ಎಂದು ಕೇಳಲು, ಹತ್ತಿರಿದ್ದವರು ಇವರ ದೇಹವನ್ನು ಮುಟ್ಟಿ ದೇವರ ಹೆಸರು ಹೇಳಿದಾಗ ಶರೀರದ ಮೇಲೆ ಪೂರ್ಣ ಪ್ರಜ್ಞೆ ಬಂದಿತು. ಇದನ್ನು ಸಾಧನೆಯಲ್ಲಿ

ನಿರ್ವಿಕಲ್ಪ ಸಮಾಧಿ ಎನ್ನುತ್ತಾರೆ. ಇಲ್ಲಿ ಜೀವ ಕಾಲದೇಶಾತೀತವಾಗಿ ಅದ್ವೈತದ ಆನಂದದಲ್ಲಿ ಮುಳುಗಿ ಅದರೊಂದಿಗೆ ಒಂದಾಗುತ್ತದೆ. ಇದೇ ಸಾಧನೆಯ ಶಿಖರ. ಶ್ರೀರಾಮಕೃಷ್ಣರು ತೋತಾಪುರಿಯಿಂದ ಅದ್ವೈತ ದೀಕ್ಷೆ ಹೊಂದಿ ಪಡೆದ ಆಧ್ಯಾತ್ಮಿಕ ಜೀವನದ ಚರಮ ಅನುಭವ. ದೇಹ ವೆಂಬ ಪಂಜರದಲ್ಲಿ ಸಾಧಾರಣ ಮಾನವನ ಮನಸ್ಸು ಸಿಕ್ಕಿ ನರಳುತ್ತಿರು ವುದು. ಇವರಿಗೆ ದೇಹವೆಂಬುದು ಹಕ್ಕಿಯನ್ನು ಕೂಡಿಟ್ಟ ಪಂಜರದಂತೆ ಇರಲಿಲ್ಲ. ಅದು ಅವರಿಗೆ ಹಕ್ಕಿ ತಾನು ಬೇಕಾದಾಗ ಹಾರಿಹೋಗಿ ಬರಬಲ್ಲ ಗೂಡಿನಂತೆ ಇತ್ತು.

ಅದೇ ಕಾಲದಲ್ಲಿ ಶಾರದಾದೇವಿಯವರಿಗೆ ಮತ್ತೊಂದು ಅನುಭವ ಭವಿಷ್ಯದಲ್ಲಿ ಆಗುವ ಚಿತ್ರವನ್ನು ಕೊಟ್ಟಿತು. ಒಂದು ದೃಶ್ಯದಲ್ಲಿ ಶ್ರೀ ರಾಮಕೃಷ್ಣರು ಗಂಗಾನದಿಯಲ್ಲಿ ಇಳಿಯುತ್ತಿರುವಾಗ ಸಂಪೂರ್ಣವಾಗಿ ಅವರ ದೇಹವೆಲ್ಲ ಅದರಲ್ಲಿ ಕರಗಿಹೋಯಿತು. ಸ್ವಾಮಿ ವಿವೇಕಾನಂದರು ಆ ನೀರನ್ನು ತೆಗೆದುಕೊಂಡು ಜನರ ಮೇಲೆಲ್ಲ ಶ್ರೀ ರಾಮಕೃಷ್ಣರಿಗೆ ಜಯವಾಗಲಿ ಎಂದು ಪ್ರೋಕ್ಷಿಸುತ್ತಿದ್ದರು. ಇದರಿಂದ ಶ್ರೀಶಾರದಾದೇವಿ ಯವರಿಗೆ ಮುಂದೆ ಸ್ವಾಮಿ ವಿವೇಕಾನಂದರು ಶ್ರೀರಾಮಕೃಷ್ಣರ ಉಪ ದೇಶವನ್ನು ಜಗದ ಕಲ್ಯಾಣಕ್ಕಾಗಿ ಹರಡುವರೆಂದು ಗೊತ್ತಾಯಿತು. ಸ್ವಾಮಿ ವಿವೇಕಾನಂದರ ಬೋಧನೆ ಮೊದಲಾದಂದಿನಿಂದ ಶಾರದಾದೇವಿ ಯವರ ಸಮೀಪಕ್ಕೆ ಅನೇಕ ಭಕ್ತರು ಬರುತ್ತಿದ್ದರು. ಅಂದಿನಿಂದ ಇವರೂ ಕೂಡ ತಮ್ಮದೇ ಒಂದು ರೀತಿಯಲ್ಲಿ ಬಂದ ಮಹಿಳಾ ಭಕ್ತರಿಗೆಲ್ಲ ಶ್ರೀ ರಾಮಕೃಷ್ಣರ ಜೀವನ ಮತ್ತು ಉಪದೇಶವನ್ನು ಹರಡುತ್ತಿದ್ದರು. ಇವರು ಸ್ವಾಮಿ ವಿವೇಕಾನಂದರಂತೆ ವೇದಿಕೆಯ ಮೇಲೆ ನಿಂತು ಸಿಂಹವಾಣಿ ಯಿಂದ ಉಪನ್ಯಾಸ ಮಾಡಿ ಜಗತ್ಪ್ರಸಿದ್ಧರಾಗಲಿಲ್ಲ. ಇವರ ಉಪದೇಶ ಸೌಮ್ಯರೀತಿಯದು, ಶಾಂತವಾದುದು. ಇವರ ಜೀವನದಲ್ಲಿ ಮಾತಿಗಿಂತ ಹೆಚ್ಚಾಗಿ ಶ್ರೀರಾಮಕೃಷ್ಣರ ಸಂದೇಶದ ಹಣತೆ ಉರಿಯುತ್ತಿತ್ತು. ನಿರಾ ಶರಾದವರು, ದುಃಖಿಗಳು, ಪಾಪಿಗಳು ಬಂದರೆ ಅವರನ್ನು ಬಾಚಿ ತಬ್ಬಿ ಸಸ್ನೇಹವಾಣಿಯಿಂದ ತಮ್ಮ ಜೀವನದ ಶಾಂತಿಯನ್ನು ಅವರಿಗೂ ದಾನ ಮಾಡುತ್ತಿದ್ದರು. ಅವರ ಸಹಾನುಭೂತಿ, ಕರುಣೆಯ ಮಾತು, ಪ್ರೀತಿಯ ಆಶೀರ್ವಾದಗಳು ಅನೇಕ ಜನರನ್ನು ಉದ್ಧರಿಸಿವೆ.

—o—

## ೧೫. ತಾವರೆಯಂತೆ

ಶ್ರೀ ಶಾರದಾದೇವಿಯವರು ಮನೆಯನ್ನು ತೊರೆಯದೆ ತಾವು ಇದ್ದ ವಾತಾವರಣದಲ್ಲಿ ಬೆಳೆದರು. ಸುತ್ತಲೂ ಅಜ್ಞಾನದಲ್ಲಿ ತೊಳಲುವ ನಂಟರ ಪಂಕದಲ್ಲಿ ಅವರ ಜೀವನದ ಬೇರಿದ್ದರೂ, ಮನಸ್ಸು ಅದನ್ನು ಮೀರಿದ ಕಮಲದಂತೆ ಮೇಲೆದ್ದು ಅನವರತವೂ ದೇವರ ಆರಾಧನೆಗೆ ಸಿದ್ಧವಾಗಿತ್ತು. ಶ್ರೀರಾಮಕೃಷ್ಣರಾಗಲೀ, ಶ್ರೀಶಾರದಾದೇವಿಯವರಾಗಲೀ ಬಾಹ್ಯರೂಪದ ಸನ್ಯಾಸಿ ಅಥವಾ ಸನ್ಯಾಸಿನಿಗಳಾಗಲಿಲ್ಲ. ಅವರು ಅವತಾರವೆತ್ತಿದ್ದು ಸರ್ವ ಜೀವರ ಮೇಲ್ಮೆಗಾಗಿ. ಎಲ್ಲರಿಗೂ ಆದರ್ಶವಾದಂತಹ ಜೀವನವನ್ನು ಅವರಲ್ಲಿ ನೋಡಬಹುದು. ಇವರ ಜೀವನ ಸನ್ಯಾಸ ಗೃಹಸ್ಥಾಶ್ರಮಗಳನ್ನು ಮೀರಿರುವುದರಿಂದ ಎರಡು ಆಶ್ರಮಗಳವರಿಗೂ ಇದು ಆದರ್ಶವಾಗಿದೆ.

ಒಬ್ಬ ಮಹಾಪುರುಷನು ತನ್ನ ಭಕ್ತರ ಮಧ್ಯದಲ್ಲಿ ಶಾಂತವಾಗಿ ಬಾಳಿ ಬದುಕುವುದು ಸುಲಭ. ಅದರಿಂದ ಮಾತ್ರ ಅವನ ಉತ್ತಮತೆ ಹೊರಗೆ ಬರುವುದಿಲ್ಲ. ತಮ್ಮನ್ನು ಕಂಡರೆ ಆಗದವರೊಂದಿಗೆ, ತುಂಟರೊಂದಿಗೆ, ಇದ್ದಾಗಲೂ ಅವರ ಮನಸ್ಸು ಎಷ್ಟು ಶಾಂತವಾಗಿರುತ್ತದೆ ಎಂಬುದು ಅವರು ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿದಿರುವರು ಎಂಬುದಕ್ಕೆ ಕುರುಹು. ಒಮ್ಮೆ ಗ್ರೀಕ್ ದೇಶದ ಜ್ಞಾನಿಯಾದ ಸಾಕ್ರಟೀಸನು ದಾರಿಯಲ್ಲಿ ಹೋಗುತ್ತಿದ್ದಾಗ ಇವನ ಹೆಂಡತಿ ಬಂದು ಜಗಳವಾಡಿ ತಲೆಯಮೇಲೆ ನೀರು ಸುರಿದು ಹೋದಳಂತೆ. ಹತ್ತಿರ ಇದ್ದ ಶಿಷ್ಯನು ನೀವು ಇಷ್ಟು ದೊಡ್ಡ ಜ್ಞಾನಿಗಳಾಗಿ ಇಂತಹ ಚಂಡಿ ಹೆಂಡತಿಯನ್ನು ಕಟ್ಟಿಕೊಂಡು ವ್ಯಥೆ ಪಡಬೇಕಲ್ಲ ಎಂದನು. ಅದಕ್ಕೆ ಸಾಕ್ರಟೀಸನು ಯಾರು ತುಂಟು ಕುದುರೆಯನ್ನು ಏರಿ ಸವಾರಿ ಮಾಡಬಲ್ಲರೋ ಅವರೇ ನಿಜವಾದ ಸವಾರರು. ಪಳಗಿದ ಕುದುರೆಮೇಲೆ ಯಾರು ಬೇಕಾದರೂ ಸವಾರಿ ಮಾಡಬಹುದು. ಹಾಗೆಯೇ ಯಾವಾಗಲೂ ಕಿರುಕುಳ ಕೊಡುವ ಹೆಂಡತಿಯೊಂದಿಗೆ ನಾನು ಜಗಳಕಾಯದೆ ಶಾಂತವಾಗಿರುವುದು ನನ್ನ ಜ್ಞಾನಕ್ಕೆ ಕುರುಹು ಎಂದನು. ಅದರಂತೆ ಶ್ರೀಶಾರದಾದೇವಿಯವರ ತಮ್ಮಂದಿರು ಮತ್ತು ಅವರಿಗೆ ಸಂಬಂಧಪಟ್ಟ ನಂಟರು ಯಾವಾಗಲೂ ಇವರನ್ನು ಸುತ್ತುಗಟ್ಟಿದ್ದರು. ಅವರಿಗೆ ಶ್ರೀಶಾರದಾದೇವಿ, ಶ್ರೀರಾಮಕೃಷ್ಣರಂತಹ ಮಹಾತಪೋಧನರನ್ನು ಕೈಹಿಡಿದ ತಪಸ್ವಿನಿಯಾಗಿ ಕಾಣಲಿಲ್ಲ; ಧನಪಿಶಾಚಿ ಹಿಡಿದಿದ್ದ ಅವರಿಗೆ ಶ್ರೀಶಾರದಾದೇವಿಯವರು

ಒಂದು ಹಣದ ಮರದಂತೆ ಕಂಡರು. ಅವರ ಹತ್ತಿರ ಮಧ್ಯೆ ಮಧ್ಯೆ ಹೋಗಿ ಹಣಕ್ಕಾಗಿ ಕಾಡುವುದಲ್ಲದೆ, ಒಂದು ಬಾರಿಯಾದರೂ ಬಾಯಿ ತಪ್ಪಿ ಕೂಡ, ಭಕ್ತಿ ವೈರಾಗ್ಯವನ್ನು ಕೊಡೆಂದು ಬೇಡಿಕೊಂಡವರಲ್ಲ. ಅನೇಕರು ಬಂದು ಶ್ರೀಶಾರದಾದೇವಿಯವರ ಹತ್ತಿರ ದೀಕ್ಷೆ ತೆಗೆದು ಕೊಂಡು ಸತ್ಪುರುಷರಾಗಿ ಹಿಂತಿರುಗಿ ಹೋಗುತ್ತಿದ್ದರು. ಆದರೆ ಇವರು ಮಾತ್ರ ತಮ್ಮ ದೈಹಿಕ ಸುಖದಲ್ಲಿಯೇ ತೃಪ್ತರಾಗಿ, ಕಲ್ಪವೃಕ್ಷದ ಕೆಳಗೆ ಕೂತಿದ್ದರೂ ಹೀನ ವಿಷಯಗಳನ್ನು ಕೇಳಿ ಅದರಿಂದ ತೃಪ್ತಿ ಪಡೆಯುವ ನಿರ್ಭಾಗ್ಯರ ಗುಂಪಿಗೆ ಸೇರಿದವರು. ಇದರಿಂದ ಶ್ರೀಶಾರದಾದೇವಿಯವರ ಸಹನ ಶಕ್ತಿ ಎಷ್ಟು, ಪ್ರೀತಿ ಎಷ್ಟು, ತಾಳ್ಮೆ ಎಷ್ಟು, ಎನ್ನುವುದು ತಿಳಿಯುವುದು.

ಶ್ರೀಶಾರದಾದೇವಿಯವರು ತಮ್ಮ ಮಹಾ ಸಮಾಧಿವರೆವಿಗೂ ಅರ್ಧ ಕಾಲವನ್ನು ಕಲ್ಕತ್ತೆಯಲ್ಲಿಯೂ, ಉಳಿದರ್ಧ ಕಾಲವನ್ನು ಜಯರಾಮ ವಟಿಯಲ್ಲಿಯೂ ಕಳೆದರು. ಕಮಾರಪುಕುರಕ್ಕೆ ನಂತರ ಅವರು ಹೋಗ ಲಿಲ್ಲ. ಆದರೂ ಕಮಾರಪುಕುರದಲ್ಲಿ ಶ್ರೀರಾಮಕೃಷ್ಣರಿಗೆ ಸೇರಿದ ಒಂದು ಸಣ್ಣ ಗುಡಿಸಲನ್ನು ಸರಿಮಾಡುವುದಕ್ಕೆ ಅವರು ದುಡ್ಡು ಕೊಡುತ್ತಿದ್ದರು. ಆ ಊರನ್ನು ಬಹಳ ಗೌರವದಲ್ಲಿ ಕಾಣುತ್ತಿದ್ದರು. ಜಯರಾಮವಟಿಗೆ ಹೋದಾಗಲೆಲ್ಲಾ ತಮ್ಮ ತಾಯಿಯ ಹಳೆಯ ಮನೆಯಲ್ಲಿರುತ್ತಿದ್ದರು. ಅವರಿಗೆ ಪ್ರಸನ್ನಕುಮಾರ, ವರದಪ್ರಸಾದ್, ಕಾಲೀಕುಮಾರ, ಅಭಯ ಚರಣ ಎಂಬ ನಾಲ್ಕು ಜನ ತಮ್ಮಂದಿರಿದ್ದರು. ಇವರಲ್ಲಿ ಕೊನೆಯವನು ವಿನಃ ಉಳಿದವರು ಯಾರೂ ವಿದ್ಯಾವಂತರಾಗಿ, ಉತ್ತಮ ಕೆಲಸಕ್ಕೆ ಸೇರಿ, ಸೌಖ್ಯದಿಂದ ಬಾಳುವ ಅದೃಷ್ಟ ಪಡೆಯಲಿಲ್ಲ. ತಾವು ಮನೆಯಲ್ಲಿರುವ ತನಕ ವಯಸ್ಸಾದ ತಾಯಿಗಾಗಲೀ ಇನ್ನೂ ಕಿರಿಯ ವಯಸ್ಸಿನ ತಮ್ಮಂದಿರ ಹೆಂಡತಿಯರಿಗಾಗಲೀ ಕಷ್ಟ ಕೊಡದೆ ಮನೆಯ ಕೆಲಸವನ್ನು ತಾವೇ ಮಾಡುತ್ತಿದ್ದರು. ಅಕ್ಕನನ್ನು ಎಲ್ಲರೂ ಪ್ರೀತಿಸುತ್ತಿದ್ದರೂ ಅದು ನಿಜ ವಾದ ಪ್ರೀತಿಯಲ್ಲ. ಇವರ ಸಂಸಾರ ತಾಪತ್ರಯಕ್ಕೆ ಶ್ರೀಶಾರದಾದೇವಿ ಯವರಿಂದ ಹೇಗಾದರೂ ದುಡ್ಡು ವಸೂಲಿ ಮಾಡುತ್ತಿದ್ದ ಆಷಾಢಭೂತಿತನ

ಶ್ರೀಶಾರದಾದೇವಿಯವರ ತಾಯಿ ಶ್ಯಾಮಸುಂದರೀದೇವಿ ೧೯೦೬ನೇ ಡಿಸೆಂಬರಿನಲ್ಲಿ ಕಾಲವಾದಮೇಲೆ ಮಕ್ಕಳೆಲ್ಲ ಮನೆ ಮತ್ತು ಆಸ್ತಿಗೆ ವ್ಯಾಜ್ಯ ವಾಡತೊಡಗಿದರು. ಇದನ್ನು ನೋಡಿ ತಮ್ಮ ಶಿಷ್ಯರಾದ ಶಾರದಾನಂದ ರನ್ನು ಕರೆಸಿ ಎಲ್ಲರಿಗೂ ಸರಿಯಾಗಿ ಪಾಲುಮಾಡಿಸಿ ಕೊಟ್ಟರು. ನಂತರ

ಇವರು ಜಯರಾಮವಟಿಗೆ ಬಂದಾಗ ಮೊದಲನೇ ತಮ್ಮ ಪ್ರಸನ್ನಕುಮಾರನ ಮನೆಯಲ್ಲಿ ೧೯೧೫ನೆಯ ಇಸವಿವರೆಗೆ ಇರುತ್ತಿದ್ದರು. ಆತನಿಗೆ ಮೊದಲನೇ ಹೆಂಡತಿ ಕಾಲವಾಗಿ ನಲಿನಿ ಮತ್ತು ಮುಕು ಎಂಬ ಸಣ್ಣ ಮಕ್ಕಳನ್ನು ಬಿಟ್ಟು ಹೋಗಿದ್ದಳು. ಅನಾಥಮಕ್ಕಳನ್ನು ಇವರು ತಮ್ಮ ರಕ್ಷಣೆಗೆ ತೆಗೆದುಕೊಂಡರು.

ಪಾಲಾದರೂ ಜಗಳ ಮಾತ್ರ ಕೊನೆಗಾಣಲಿಲ್ಲ. ಎಲ್ಲರಿಗೂ ಸೇರಿದ, ಪಾಲುಮಾಡಲು ಆಗದ, ಒಂದು ವಸ್ತು ಇತ್ತು. ಅದೇ ಅವರ ಅಕ್ಕ ಶ್ರೀಶಾರದಾದೇವಿಯವರು. ಪ್ರತಿಯೊಬ್ಬನೂ ನಾನು ತಾನೆಂದು ಅವರ ಹತ್ತಿರ ಬಂದು ತಮಗೆ ಬೇಕಾದುದನ್ನು ಕೇಳಿ ತೆಗೆದುಕೊಂಡು ಹೋಗುವರು. ಒಬ್ಬ ತಮ್ಮ ಶ್ರೀಶಾರದಾದೇವಿಯವರ ಹತ್ತಿರಿದ್ದಾಗ, ಇನ್ನೊಬ್ಬ ಬಂದರೆ ಆಗಲೇ ಇಬ್ಬರಿಗೂ ವ್ಯಾಜ್ಯವಾಗುತ್ತಿತ್ತು. ತನಗೆ ಕಾಣದೆ ಮೊದಲನೆಯವನು ಏನೇನೋ ಕೇಳಿ ತೆಗೆದುಕೊಂಡು ಹೋಗುತ್ತಿರುವನು ಎಂಬ ಅನುಮಾನ. ಒಂದುಸಲ ಶ್ರೀಶಾರದಾದೇವಿಯವರು ಕಲ್ಕತ್ತೆಯಿಂದ ಬರುತ್ತಾರೆ ಎಂದು ನಾಲ್ಕು ಜನ ತಮ್ಮಂದಿರಿಗೂ ಗೊತ್ತಿದ್ದರೂ, ಇವರನ್ನು ನೋಡಲು ಊರ ಹೊರಗೆ ಯಾರೂ ಬರಲಿಲ್ಲ. ಒಬ್ಬನು ಇವರನ್ನು ನೋಡುವುದಕ್ಕೆ ಹೋದರೆ, ಇನ್ನೊಬ್ಬನು ಎಲ್ಲಿ ಅವನೊಂದಿಗೆ ಜಗಳಕಾಯುವನೋ ಎಂದು ಎಲ್ಲರೂ ಮತ್ತೊಬ್ಬನಿಗೆ ಅಂಜಿ ನಿಂತರು. ಶ್ರೀಶಾರದಾದೇವಿಯವರು ಮನೆಗೆ ಬಂದಮೇಲೆ "ಏನು, ಒಬ್ಬರೂ ನನ್ನನ್ನು ನೋಡಲು ಬರಲಿಲ್ಲ" ಎಂದರು. ಆಗ ಒಬ್ಬನು "ನಾನು ಬಂದರೆ ಇನ್ನೊಬ್ಬ ನನ್ನನ್ನು ನೋಡಿ ಜಗಳ ಕಾಯುತ್ತಾನೆ. ಅದಕ್ಕೆ ಬರಲಿಲ್ಲ. ಆದರೆ ನನಗೆ ನಿಮ್ಮಮೇಲೆ ಏನೂ ವಿಶ್ವಾಸವಿಲ್ಲವೇ ? ಪ್ರತಿಯೊಂದು ಜನ್ಮದಲ್ಲಿಯೂ ನನಗೆ ನೀನೇ ಅಕ್ಕನಾಗುವಂತೆ ಹರಸು" ಎಂದನು. ಆಗ ಶ್ರೀಶಾರದಾದೇವಿಯವರು "ಏನು, ಇನ್ನೊಂದು ಸಾರಿ ಈ ಮನೆಯಲ್ಲಿ ನಿಮ್ಮಂತಹ ತಮ್ಮಂದಿರ ಒಡನೆ ಹುಟ್ಟುತ್ತೇನೆ ಎಂದು ತಿಳಿದುಕೊಂಡಿರ! ನನ್ನ ತಾಯಿ ತಂದೆಯರು ಭಕ್ತಪರಾಯಣರಾಗಿದ್ದರು. ಅದಕ್ಕೆ ಇಲ್ಲಿ ಹುಟ್ಟಿದೆನಲ್ಲವೆ ನಿಮ್ಮಂತಹ ತಮ್ಮಂದಿರ ಪ್ರೀತಿ ಸವಿಯಲು ಹುಟ್ಟಲಿಲ್ಲ" ಎಂದರು. ಇವರು ಜಯರಾಮವಟ್ಟಿಯಲ್ಲಿ ಇರುವತನಕ ತಮ್ಮಂದಿರಿಗೆ ವ್ಯಾಜ್ಯವಾಗದ ದಿನವೇ ಇರಲಿಲ್ಲ. ಒಬ್ಬನು ತನಗೆ ಕಾಣದೆ ಶಾರದಾದೇವಿಯವರಲ್ಲಿಗೆ ಹೋಗಿ ಆಗಲೇ ಏನೋ ತೆಗೆದುಕೊಂಡು ಬಂದನೆಂಬುದೇ ಕಾರಣ. ಶ್ರೀಶಾರದಾದೇವಿಯವರಿಗೆ ಇದೆಲ್ಲ ತಿಳಿದಿತ್ತು.

ತುಂಬ ಮಿತಿಮೀರಿದಾಗ ಇವರಿಗೆ ಬುದ್ಧಿ ಹೇಳುತ್ತಿದ್ದರು. ಆದರೂ ಅವರು ನಿಲ್ಲಿಸುತ್ತಿರಲಿಲ್ಲ. ಹೊರಗಿನಿಂದ ಒಳಗೆ ಹೋಗಿ ಪುನಃ ಒಬ್ಬರನ್ನು ಇನ್ನೊಬ್ಬರು ಬಯ್ಯುವರು. "ಅಯ್ಯೋ ಹಣದ ಮಾಯೆಯಲ್ಲಿ ಇವರು ಸಿಕ್ಕಿ ನರಳುವರಲ್ಲ" ಎಂದು ಪಶ್ಚಾತ್ತಾಪ ಪಡುತ್ತಿದ್ದರು. "ಯಾವಾಗಲೂ ಅವರು ನನ್ನನ್ನು ಕೇಳುವುದು ದುಡ್ಡನ್ನೇ. ಒಂದು ಬಾರಿಯಾದರೂ ಬಾಯಿತಪ್ಪಿಯಾದರೂ ಭಕ್ತಿ ಜ್ಞಾನಗಳನ್ನು ಕೊಡು ಎಂದು ಬೇಡುವುದಿಲ್ಲವಲ್ಲ" ಎಂದು ಮರುಗುತ್ತಿದ್ದರು.

ಶ್ರೀಶಾರದಾದೇವಿಯವರ ತಮ್ಮಂದಿರಲ್ಲಿ ಬುದ್ಧಿವಂತನೆಂದರೆ ಕಿರಿಯವನಾದ ಅಭಯಚರಣನೆಂಬುವನು. ಈತನು ಕಲ್ಕತ್ತೆಯ ಮೆಡಿಕಲ್ ಕಾಲೇಜಿನಲ್ಲಿ ಓದಿ ವೈದ್ಯನಾದನು. ೧೮೯೯ನೆಯ ಇಸವಿಯಲ್ಲಿ ಬಂದ ಕಾಲರಾ ಜಾಡ್ಯಕ್ಕೆ ತುತ್ತಾದನು. ಆಗ ಇವನ ಹೆಂಡತಿ ಸೌರಬಾಲಾ ಎಂಬುವಳು ಗರ್ಭಿಣಿಯಾಗಿದ್ದಳು. ಸಾಯುವ ಸಮಯದಲ್ಲಿ ಶ್ರೀ ಶಾರದಾದೇವಿಯವರನ್ನು ಕರೆದು, ಇವನ ಹೆಂಡತಿಯನ್ನೂ ಮುಂದೆ ಬರುವ ಸಂತಾನವನ್ನೂ ಕಾಪಾಡಬೇಕೆಂದು ಬೇಡಿಕೊಂಡು ಪ್ರಾಣ ಬಿಟ್ಟನು. ಕೆಲವು ದಿನಗಳಮೇಲೆ ಸೌರಬಾಲೆ ಹೆತ್ತಳು. ಗಂಡನ ಅಕಾಲಮರಣದ ದುಃಖದ ಜತೆಗೆ ಬಾಣಂತಿಯ ನಿಶ್ಶಕ್ತಿಯೂ ಸೇರಿ ಅವಳ ಮನಸ್ಸಿನ ಸ್ಥಿತಿ ಕೆಟ್ಟಿತು. ಮಗುವಿಗೆ ರಾಧಾರಾಣಿ ಎಂದು ನಾಮಕರಣ ಮಾಡಿದರು. ತಾಯಿಗೆ ತನ್ನನ್ನೇ ನೋಡಿಕೊಳ್ಳಲು ಆಗುತ್ತಿರಲಿಲ್ಲ. ಜೊತೆಗೆ ಮಗುವನ್ನು ಹೇಗೆ ನೋಡಿಕೊಳ್ಳುವಳು? ಶ್ರೀಶಾರದಾದೇವಿಯವರು ಇವಳನ್ನು ಮತ್ತು ಮಗುವನ್ನು ನೋಡಿಕೊಳ್ಳುವುದಕ್ಕೆ ದಾದಿಯನ್ನು ಗೊತ್ತುಮಾಡಿ ಕಲ್ಕತ್ತಾಕ್ಕೆ ಹಿಂತಿರುಗಿದರು. ಆಗ ತಾನೇ ಜಗತ್ತಿಗೆ ಕಾಲಿಟ್ಟ ಅನಾಥ ಮಗುವಿನ ಹೀನಸ್ಥಿತಿ ಇವರೆದೆಯನ್ನು ಕರಗಿಸಿತು. ತಾವು ಅದನ್ನು ನೋಡಿಕೊಳ್ಳದೇ ಇದ್ದರೆ ಯಾರೂ ಅದಕ್ಕೆ ದಿಕ್ಕಿಲ್ಲವೆಂದು ತಿಳಿದು, ಜಯರಾಮವಟಿಗೆ ಹೋಗಿ ಮಗುವನ್ನು ಕರೆದುಕೊಂಡುಬಂದು ತಾವು ಕಾಲವಾಗುವವರೆವಿಗೂ ಅದನ್ನು ತಮ್ಮ ಸಮೀಪದಲ್ಲಿ ಇಟ್ಟುಕೊಂಡಿದ್ದರು. ರಾಧೆ ತನ್ನ ಸೋದರತ್ತೆಯನ್ನು ತನ್ನ ತಾಯಿಗಿಂತ ಹೆಚ್ಚು ಪ್ರೀತಿಸುತ್ತ ಅವರನ್ನು ನೇರಿಮಾ ಎಂದು ಕರೆಯುತ್ತಿದ್ದಳು.

ಸೌರಬಾಲ ಮತ್ತು ಇವರ ಮಗಳು ರಾಧೆ, ಶ್ರೀಶಾರದಾದೇವಿಯವರಿಗೆ ತಡೆಯಲಾರದಷ್ಟು ಕಷ್ಟವನ್ನು ಕೊಡುತ್ತಿದ್ದರು. ಆದರೂ ಒಮ್ಮೆಯೂ

ಕೋಪಗೊಳ್ಳದೆ ತಮ್ಮ ಸಹಜವಾದ ತಾಳ್ಮೆಯ ಗುಣದಿಂದ ಅವರ ತಪ್ಪನ್ನೆಲ್ಲ ಮನ್ನಿಸುತ್ತಿದ್ದರು. ಸೌರಬಾಲೆಗೆ ಕ್ರಮೇಣ ಶ್ರೀಶಾರದಾದೇವಿಯವರ ಮೇಲೆ ಅಸೂಯೆ ಉಂಟಾಯಿತು. ತನ್ನ ಮಗಳು ರಾಧೆ ತನ್ನ ಹತ್ತಿರ ಬಂದು ಆಡಿ, ಸಂತೋಷಪಡಿಸುವ ಬದಲು ಯಾವಾಗಲೂ ಶ್ರೀಶಾರದಾದೇವಿಯವರ ಹತ್ತಿರ ಹೋಗುತ್ತಿದ್ದಳು. ಸಾಧಾರಣವಾಗಿ ಹೆತ್ತ ತಾಯಿಗೆ ಇರುವ ಅಸೂಯೆ ಇದು. ಜತೆಗೆ ಇವರ ಬುದ್ಧಿ ದೌರ್ಬಲ್ಯವೂ ಸೇರಿ ಇದನ್ನು ಹೆಚ್ಚಿಸಿತು. ರಾಧೆಗೆ ಮೈಸರಿ ಇಲ್ಲದಾಗ ವೈದ್ಯರನ್ನು ಕರೆದು ಔಷಧೋಪಚಾರವನ್ನು ಮಾಡಿಸಿದರೆ, ತನ್ನ ಮಗಳಿಗೆ ವಿಷಹಾಕಿ ಕೊಲ್ಲಿಸುತ್ತಿರುವರು ಎಂದು ಭೀತಿಪಡುವಳು. ಒಮ್ಮೆ ಶಾರದಾದೇವಿಯವರನ್ನು ಕೋಪಗೊಂಡು ಉರಿಯುತ್ತಿರುವ ಕೊಳ್ಳಿಯಿಂದ ಹೊಡೆದಳು. ರಾಧೆಗೆ ಮದುವೆಯಾದಮೇಲೆ, ಒಂದು ದಿನ ಅವಳ ಗಂಡ ಸತ್ತುಹೋದನೆಂಬ ಸುಳ್ಳು ಸುದ್ದಿಯನ್ನು ಹುಟ್ಟಿಸಿ ದೊಡ್ಡ ಗಲಾಟೆ ಎಬ್ಬಿಸಿದಳು. ಮತ್ತೊಂದುವೇಳೆ ಇವರೊಂದಿಗೆ ವ್ಯಾಜ್ಯವಾಡಿ ತನ್ನ ಒಡವೆ ಸೀರೆಗಳನ್ನೆಲ್ಲ ತೆಗೆದುಕೊಂಡು ಯಾರದೋ ನಂಟರಮನೆಗೆ ಹೋದಳು. ಅವರು ಇವಳ ಹತ್ತಿರಿದ್ದ ಒಡವೆಗಳನ್ನು ನೋಡಿ ಪ್ರೀತಿಯಿಂದ ಬರಮಾಡಿಕೊಂಡು, ಆದರಿಸಿ, ತಂದ ಆಭರಣಗಳನ್ನೆಲ್ಲ ಉಪಾಯದಿಂದ ಕಸಿದುಕೊಂಡರು. ಪುನಃ ಸೌರಬಾಲೆ ಶ್ರೀಶಾರದಾದೇವಿಯವರಲ್ಲಿಗೆ ಬಂದು ತನ್ನ ಒಡವೆಗಳನ್ನು ನಂಟರು ಬಲಾತ್ಕರಿಸಿ ಕಿತ್ತುಕೊಂಡರೆಂದೂ, ಅದನ್ನು ಕೊಡಿಸಬೇಕೆಂದೂ ಹಠಹಿಡಿದಳು. ಇವನ್ನು ಪುನಃ ಕೊಡಿಸಬೇಕಾದರೆ ಶ್ರೀಶಾರದಾದೇವಿಯವರು ತುಂಬ ಶ್ರಮವಹಿಸಬೇಕಾಯಿತು. ಕೆಲವುಸಾರಿ ಇವರು ಕೊಡುವ ತೊಂದರೆಗಳೆಲ್ಲವನ್ನೂ ಸಹಿಸಿ ಬೇಸತ್ತಾಗ, ನಿಟ್ಟುಸಿರು ಬಿಟ್ಟು, "ಏನೋ ನಾನು ಶಿವನನ್ನು ಮುಳ್ಳಿನ ಬಿಲ್ವಪತ್ರೆಯಿಂದ ಪೂಜಿಸಿರಬೇಕು. ಅದಕ್ಕೆ ಈ ಮುಳ್ಳನ್ನು ಜೀವನದಲ್ಲಿ ಕೊಟ್ಟಿರುವನು" ಎನ್ನುತ್ತಿದ್ದರು.

ಸೌರಬಾಲೆ ಬೇರೆ ವಿಷಯಗಳಲ್ಲಿ ಬುದ್ಧಿ ಸ್ಥಿಮಿತವಿಲ್ಲದವಳಂತೆ ಕಂಡರೂ, ಒಂದು ವಿಷಯದಲ್ಲಿ ಮಾತ್ರ ಬಹಳ ಬುದ್ಧಿವಂತಿಕೆಯಿಂದ, ಮುಂದಾಲೋಚನೆಯಿಂದ ವರ್ತಿಸುತ್ತಿದ್ದಳು. ರಾಧೆಯನ್ನು ಶ್ರೀಶಾರದಾದೇವಿಯವರು ನೋಡಿಕೊಳ್ಳುತ್ತಿರುವುದರಿಂದ ಮುಂದೆ ಅವರಿಗೆ ಏನೇನು ಇದೆಯೋ ಅದೆಲ್ಲವೂ ತನ್ನ ಮಗಳಿಗೆ ಬರುತ್ತದೆ ಎಂಬ ಆಸೆ ಬೇರೂರಿತ್ತು. ಉದ್ಬೋಧನವೆಂಬ ಶ್ರೀರಾಮಕೃಷ್ಣಸಂಘದ, ಮಾಸಪತ್ರಿಕೆ ಕಛೇರಿಯ

ಕಟ್ಟಡವನ್ನು ಕಟ್ಟಿಸಿ ಅಲ್ಲಿ ಶ್ರೀಶಾರದಾದೇವಿಯವರಿಗೆ ಇಳಿದುಕೊಳ್ಳಲು ಸ್ಥಳ ಮಾಡಿದಾಗ, ಸೌರಬಾಲೆಗೆ ಆನಂದವಾಯಿತು. ಈ ಕಟ್ಟಡವೆಲ್ಲ ಮುಂದೆ ತನ್ನ ಮಗಳು ಮತ್ತು ಅಳಿಯನ ಪಾಲಿಗೆ ಬರುತ್ತದೆ ಎಂದು ಅವರ ಅಭಿಪ್ರಾಯ ಶ್ರೀಶಾರದಾದೇವಿಯವರು ತನಗಲ್ಲದೆ ಉಳಿದವರಿಗೆ ಏನಾದರು ಕೊಟ್ಟರೆ ಮಾತ್ರ ಸಿಟ್ಟಾಗುವಳು. ಏಕೆಂದರೆ ಅದು ಮುಂದೆ ತನ್ನ ಮಗಳಿಗೆ ಇಲ್ಲದೇ ಹೋಗುವುದಲ್ಲ ಎಂಬ ದುಃಖದಿಂದ. ಒಮ್ಮೆ ಕಾಶಿಗೆ ಹೋದಾಗ ಶ್ರೀಶಾರದಾದೇವಿಯವರು ಯಾರಿಗೋ ಏನನ್ನೋ ದಾನಮಾಡಿದರು. ನೀನು ಅವರಿಗೆಲ್ಲ ಯಾತಕ್ಕೆ ಕೊಡುವುದು ಎಂದು ಸೌರಬಾಲೆ ಅವರನ್ನು ಗದರಿಸಿದಳು. ನೀನಾರು ಕೇಳುವುದಕ್ಕೆ ಎನ್ನು ವುದು ಸಾಧಾರಣ ಮನುಷ್ಯನು ಕೊಡುವ ಉತ್ತರ. ಆದರೆ ಆ ಸಂದರ್ಭ ದಲ್ಲಿ ಶ್ರೀಶಾರದಾದೇವಿಯವರು ಕೊಟ್ಟ ಉತ್ತರವೇ ಬೇರೆ ರೀತಿಯದು. "ಏನು ಮಾಡುವುದು, ಬಂದು ಕೇಳಿದವರಿಗೆ ನನ್ನ ಹತ್ತಿರ ಇದ್ದರೆ ಕೊಡು ವುದು ನನ್ನ ಸ್ವಭಾವ. ಈಗ ಅಭ್ಯಾಸವನ್ನು ತಿದ್ದುವುದಕ್ಕೆ ಆಗುವುದಿಲ್ಲ" ಎಂದರು. ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ.

ಸೌರಬಾಲೆ ಶ್ರೀಶಾರದಾದೇವಿಯವರ ಜೀವನದಲ್ಲಿ ಒಂದು ಮುಳ್ಳಿ ನಂತೆ ಆದಳು. ರಾಧೆ ಬೆಳೆದ ಹಾಗೆಲ್ಲ ತಾಯಿಯಂತೆ ಮತ್ತೊಂದು ಮುಳ್ಳಾದಳು. ಇವಳ ದೇಹ ಬೆಳೆದಹಾಗೆಲ್ಲ ದುರ್ಬಲವಾಯಿತು. ಜಗಳ ಮಾಡುವುದು, ಚಂಡಿತನ, ಹೇಳಿದ ಮಾತನ್ನು ಕೇಳದೇ ಇರುವುದು ಇವುಗಳೇ ಅವಳಲ್ಲಿ ಇದ್ದ ಬಹು ಮುಖ್ಯ ಗುಣಗಳಲ್ಲಿ ಕೆಲವು. ಆಕೆಯ ಲ್ಲಿದ್ದ ಒಂದು ಒಳ್ಳೆಯ ಗುಣ ಸರಳತೆ. ಆದರೇನು ಅನೇಕ ದುರ್ಗುಣ ಗಳು ಮನೆ ಮಾಡಿಕೊಂಡಿದ್ದುದ್ದರಿಂದ ಆ ಒಂದು ಸಣ್ಣ ಗುಣ ಅವಳ ಸಹಾಯಕ್ಕೆ ಬರಲಿಲ್ಲ. ಶ್ರೀಶಾರದಾದೇವಿಯವರು ರಾಧೆಯೊಡನೆ ಬಹಳ ಸಹನೆಯಿಂದ ವರ್ತಿಸುತ್ತಿದ್ದರು. ಆದರೇನು ಅದನ್ನು ಒಳ್ಳೆಯದಕ್ಕೆ ತಿರುಗಿಸಿಕೊಳ್ಳಲಿಲ್ಲ. ಇದರಿಂದ ಅವರಲ್ಲಿ ಹೆಚ್ಚು ಸ್ವಾತಂತ್ರ್ಯ ತೆಗೆದು ಕೊಂಡು, ಅವರನ್ನು ನಿಂದಿಸುವುದು, ಅವರೊಂದಿಗೆ ಜಗಳ ಕಾಯುವುದು, ಅವರು ಹೇಳಿದ ಮಾತನ್ನು ಕೇಳದೇ ಇರುವುದು, ಇದರಲ್ಲೇ ತೋರಿಸು ತ್ತಿದ್ದಳು. ಶ್ರೀಶಾರದಾದೇವಿಯವರು ಅವಳನ್ನು ತಿದ್ದಲು ಎಷ್ಟೋ ಪ್ರಯತ್ನ ಪಟ್ಟರು. ಆದರೇನು ಅವರು ಇವಳ ಮೇಲೆ ತೋರಿಸಿದ ಪ್ರೀತಿ ಯೆಲ್ಲ ಬೇವಿನಗಿಡಕ್ಕೆ ಹಾಲು, ಸಕ್ಕರೆ, ಗೊಬ್ಬರವನ್ನು ಹಾಕಿ ಅದರ ಕಾಯಿಯನ್ನು ಸಿಹಿಮಾಡಲು ಪ್ರಯತ್ನಿಸಿದಂತೆ ಆಯಿತು.

ಕ್ರಿ. ಶ. ೧೯೧೧ನೆಯ ಜೂನ್ ತಿಂಗಳಲ್ಲಿ ರಾಧೆಗೆ ಮದುವೆಯಾಯಿತು. ಮದುವೆಯಾಗಿ ಅನೇಕ ವರ್ಷಗಳಾದರೂ ಅವಳು ಗಂಡನ ಮನೆಗೆ ಹೋಗಲು ಒಪ್ಪಲಿಲ್ಲ. ಗಂಡನೇ ಇವಳ ಹತ್ತಿರ ಬಂದು ಇರಬೇಕಾಯಿತು. ಸ್ವಲ್ಪ ದಿನಗಳಲ್ಲಿ ಇವಳ ತಾಯಿ ತೀರಿಹೋದಳು. ಮೊದಲೇ ದೌರ್ಬಲ್ಯ; ಜೊತೆಗೆ ಮಗುವನ್ನು ಹೆತ್ತು ಆದಮೇಲೆ ಇವಳ ಆರೋಗ್ಯ ಮತ್ತಷ್ಟು ಹೀನಸ್ಥಿತಿಗೆ ಇಳಿಯಿತು. ರಾಧೆ ಈಗ ಬೆಳೆದಿದ್ದಳು, ಸತಿಯಾಗಿದ್ದಳು, ತಾಯಿಯೂ ಆದಳು. ಆದರೂ ಶ್ರೀಶಾರದಾದೇವಿಯವರೊಂದಿಗೆ ಹಿಂದಿನಂತೆಯೇ ಜಗಳ ಕಾಯುವುದರಲ್ಲೆ ನಿರತಳಾಗಿದ್ದಳು. ಒಂದುದಿನ ಶ್ರೀಶಾರದಾದೇವಿಯವರು ತರಕಾರಿ ಹೆಚ್ಚುತ್ತಿದ್ದಾಗ ಒಂದು ದೊಡ್ಡ ಬದನೆಕಾಯಿಯಿಂದ ಅವರ ಬೆನ್ನುಮೇಲೆ ಹೊಡೆದಳು. ಅದರಿಂದ ಬೋರೆ ಬಂದು ಅವರಿಗೆ ತುಂಬಾ ನೋವಾಯಿತು. ಆದರೂ ಕೋಪಗೊಳ್ಳದೆ ಕೋಣೆಯಲ್ಲಿದ್ದ ಶ್ರೀರಾಮಕೃಷ್ಣರ ಭಾವಚಿತ್ರದ ಕಡೆಗೆ ತಿರುಗಿ ಕೈಮುಗಿದು, "ಅವಳನ್ನು ದಯವಿಟ್ಟು ಕ್ಷಮಿಸಿ. ಅವಳಿಗೆ ಏನು ಮಾಡುತ್ತಿರುವೆನೆಂದು ಗೊತ್ತಿಲ್ಲ" ಎಂದು ಬೇಡಿದರು. ರಾಧೆಗೆ, "ರಾಧೆ, ನನ್ನ ಪತಿ ಈ ದೇಹವನ್ನು ಒಂದು ದಿನವಾದರೂ ಕಠಿಣ ಮಾತಿನಿಂದ ಬೈದವರಲ್ಲ. ನೀನು ಇದಕ್ಕೆ ಇಷ್ಟು ತೊಂದರೆ ಕೊಡುತ್ತೀಯಲ್ಲ. ನಾನು ಯಾರು? ನನ್ನ ಸ್ಥಳ ಎಲ್ಲಿದೆ ಎನ್ನುವುದು ನಿನಗೇನು ಗೊತ್ತು? ಯಾವಾಗಲೂ ನನ್ನ ಹತ್ತಿರ ಇರುವುದರಿಂದ ನನ್ನ ನಿಜವಾದ ಸ್ಥಿತಿ ನಿನಗೆ ತಿಳಿಯುದಿಲ್ಲ. ನಾನು ಒಬ್ಬ ಸಾಧಾರಣ ಹೆಂಗಸೆಂದು ತಿಳಿದಿರುವೆ" ಎಂದರು. ಈ ಮಾತೊಂದು ರಾಧೆಯ ಎದೆಗೆ ತಾಕಿತು. ಕಣ್ಣೀರು ಸುರಿಸಿ ಸ್ವಲ್ಪ ಅತ್ತಳು. ಆದರೇನು ಗಾಢಾಂಧಕಾರದಲ್ಲಿ ಬೆಳಗಿದ ಮಿಂಚಿನಂತೆ ಇವಳ ಪಶ್ಚಾತ್ತಾಪ. ಹೀನ ಪೂರ್ವಸಂಸ್ಕಾರಗಳ ಕತ್ತಲೆ ಪುತ್ತೆ ಆವರಿಸಿತು.

ಮಗುವನ್ನು ಹೆತ್ತು ಆರು ತಿಂಗಳಾದರೂ ರಾಧೆ ಹಾಸಿಗೆ ಬಿಟ್ಟು ಏಳುತ್ತಿರಲಿಲ್ಲ. ಯಾವ ಕೆಲಸ ಮಾಡುವುದಕ್ಕೂ ಬರುತ್ತಿರಲಿಲ್ಲ. ಜೊತೆಗೆ ಅಫೀಮು ಸೇವಿಸುವ ದುರಭ್ಯಾಸವನ್ನು ಕಲಿತಳು.

ನೌರಬಾಲ ಮತ್ತು ಅವಳ ಮಗಳು ರಾಧೆ ಯಾವಾಗಲೂ ಶ್ರೀ ಶಾರದಾದೇವಿಯರೊಂದಿಗೇ ಇರುತ್ತಿದ್ದರು. ಇವರ ತಮ್ಮನ ಇಬ್ಬರು ಹೆಣ್ಣು ಮಕ್ಕಳಲ್ಲಿ ನಳಿನೀ ಎಂಬುವಳಿಗೆ ಮದುವೆಯಾಗಿದ್ದರೂ, ಗಂಡನು ಕಾಲವಾಗಿದ್ದನು. ಮಾಕು ಎಂಬುವಳ ಗಂಡ ಬಹಳ ಬಡವನೆಂದು, ಅವಳೂ ಇವರ ಆಶ್ರಯದಲ್ಲಿ ಬೆಳೆದಳು. ಜೊತೆಗೆ ಅವರ ತಮ್ಮಂದಿರ

ಮಕ್ಕಳೆಲ್ಲ ಮನೆಗಿಂತ ಸೋದರತ್ತೆಯ ಹತ್ತಿರ ಇರುವುದೇ ಮೇಲೆಂದು ತಿಳಿದರು. ತಿನ್ನಲು ತಿಂಡಿ, ಉಡಲು ಬೇಕಾದ ಬಟ್ಟೆ, ಜತೆಗೆ ಬಂದು ಹೋಗುವ ಭಕ್ತರಿಂದ ಬೇಕಾದಷ್ಟು ಉಪಚಾರದ ಮಾತುಗಳು, ಇವು ಗಳೆಲ್ಲ ಅವರಿದ್ದ ಬಡವರ ಮನೆಯಲ್ಲಿ ಹೇಗೆ ಬರಬೇಕು. ಇವರ ಬಂಧು ಗಳೆಲ್ಲ ಇವರನ್ನು ಆಶ್ರಯಿಸಿದ್ದು ಹೊಟ್ಟೆಬಟ್ಟೆಗಾಗಿ ಅಲ್ಲದೆ ಜ್ಞಾನಭಕ್ತಿ ಗಳನ್ನು ಅರ್ಜಿಸಿ ಸಂಸಾರದಲ್ಲಿ ನಿಸ್ಸಂಗರಾಗಿ ಇರಬೇಕೆಂದು ಬಯಸಲಿಲ್ಲ. ಶ್ರೀಶಾರದಾದೇವಿಯರಂತಹ ಒಂದು ದೊಡ್ಡ ತಪೋಜ್ಯೋತಿ ಯಾವಾಗಲೂ ಇವರ ಹತ್ತಿರವೇ ಉರಿಯುತ್ತಿತ್ತು. ಸಾವಿರಾರು ಮೈಲಿಗಳಿಂದ ಜನರು ಬಂದು ಇವರ ಉಪದೇಶವನ್ನು ಕೇಳಿ ಆಶೀರ್ವಾದ ಪಡೆದು ಧನ್ಯರಾಗಿ ಹಿಂತಿರುಗುತ್ತಿದ್ದರು. ಆದರೆ ಇವರ ಬಂಧುಗಳು ಮಾತ್ರ ಕೆಲವರು ದುಡ್ಡು ಸುಲಿಯುವುದರಲ್ಲಿ, ಕೆಲವರು ಇವರನ್ನು ನಿಂದಿಸುವುದರಲ್ಲಿ, ಮತ್ತೆ ಕೆಲವರು ಇವರೊಂದಿಗೆ ಜಗಳ ಕಾಯುವುದರಲ್ಲಿಯೇ ಧನ್ಯರಾಗುತ್ತಿದ್ದರು.

ಸಾಧಾರಣ ಸಿದ್ಧರಲ್ಲಿ ಕಾಣುವ ಸರ್ವಸಂಗ ಪರಿತ್ಯಾಗ ಶ್ರೀ ಶಾರದಾ ದೇವಿಯವರ ಜೀವನದಲ್ಲಿ ಹೊರಗೆ ಕಾಣುವುದಿಲ್ಲ. ಆತ್ಮಸಾಕ್ಷಾತ್ಕಾರ ಪಡೆ ದಿದ್ದರೂ, ಶ್ರೀ ಶಾರದಾದೇವಿಯವರು ತಮ್ಮ ಬಂಧುವರ್ಗದವರ ಮಧ್ಯ ದಲ್ಲಿದ್ದು ಅವರಿಗೆ ಸಾಧ್ಯವಾದಮಟ್ಟಿಗೆ ಉಪಕಾರಮಾಡಿ ಅವರನ್ನು ಮೇಲೆತ್ತಲು ಪ್ರಯತ್ನಿಸಿದರು. ಅದರಲ್ಲಿಯೂ ರಾಧೆಯಂತಹ ಪ್ರಾಪಂಚಿಕ ವಿಷಯದಲ್ಲಿ ನಿರತಳಾದ ಹುಡುಗಿಯೊಂದಿಗೆ ಅಷ್ಟು ಸಲಿಗೆಯಿಂದ ಏಕೆ ಇದ್ದರು ಎಂದು ಕೆಲವರು ಕೇಳಬಹುದು. ಯಾರು ಸನ್ಯಾಸಿಗಳೋ ಅವರು ಮಾತ್ರ ಸರ್ವಸಂಗ ಪರಿತ್ಯಾಗ ಮಾಡಬೇಕು. ಉಳಿದವರು ತಾವು ದೇವರನ್ನು ಕಂಡರೂ ಬಂಧುಮಿತ್ರ ವರ್ಗದಲ್ಲಿಯೇ ಇರುತ್ತಾರೆ. ಆದರೆ ನಿಸ್ಸಂಗರಾಗಿರುತ್ತಾರೆ. ಶ್ರೀ ಶಾರದಾದೇವಿಯವರು ತಮ್ಮ ಬಂಧು ವರ್ಗದವರನ್ನು ಪ್ರೀತಿಯಿಂದ ಕಾಣುತ್ತಿದ್ದರು. ರಾಧೆಯನ್ನು ಎಡಬಿಡದೆ ತಮ್ಮ ಹತ್ತಿರವೇ ಇಟ್ಟುಕೊಂಡಿದ್ದರು. ಆದರೂ ಅವರು ನಿಸ್ಸಂಗರಾಗಿದ್ದರು. ಒಮ್ಮೆ ಯಾರೋ ಒಬ್ಬ ಶಿಷ್ಯಳು, "ನೀವು ರಾಧೆಯನ್ನು ಕಂಡರೆ ಅಷ್ಟೊಂದು ಪ್ರೀತಿಸುತ್ತೀರಲ್ಲ, ಅದರಿಂದ ನೀವು ಅವಳಲ್ಲಿ ಆಸಕ್ತರಾಗು ವುದಿಲ್ಲವೆ?" ಎಂದು ಕೇಳಿದರು. ಅದಕ್ಕೆ ಶ್ರೀ ಶಾರದಾದೇವಿಯವರು "ಮಕ್ಕಳನ್ನು ಪ್ರೀತಿಸುವುದು ಹೆಂಗಸರ ಸ್ವಭಾವ" ಎಂದು ಸರಳವಾದ ಉತ್ತರವನ್ನು ಕೊಟ್ಟರು. ಯಾರು ಪರಮಾತ್ಮನ ಧ್ಯಾನದಲ್ಲಿಯೇ ನಿರತ ರಾಗುತ್ತಾರೆಯೋ ಅವರ ಮನಸ್ಸು ಬಹಳ ಶುದ್ಧವಾಗಿರುವುದು. ಶುದ

ವಾದ ಮನಸ್ಸಿನಿಂದ ಯಾವ ವಸ್ತುವನ್ನು ಪ್ರೀತಿಸಿದರೂ ಅದು ಪರಮಾಪ್ತ ವಾದ ವಸ್ತುವಿನಂತೆ ತೋರುತ್ತದೆ. ಅದನ್ನು ನೋಡಿದವರು ವಸ್ತು ಇವರಿಗೆ ಅತ್ಯಂತ ಪ್ರಿಯವಾಗಿರುವುದೆಂದು ಆರೋಪಿಸುವರು. ಅವರು ನಿಸ್ಸಂಗರಾಗಿದ್ದರು ಎನ್ನುವುದಕ್ಕೆ ಅನೇಕ ದೃಷ್ಟಾಂತಗಳಿವೆ. ಶ್ರೀರಾಮ ಕೃಷ್ಣರ ಭಕ್ತರು ಶ್ರೀ ಶಾರದಾದೇವಿಯವರನ್ನು ನೋಡಲು ಬಂದಾಗ ಅವರು ಸಾಧಾರಣ ಮನುಷ್ಯರಂತೆ ಸಂಸಾರದಲ್ಲಿ ಇರುತ್ತಿದ್ದಂತೆ ಕಾಣು ತ್ತಿದ್ದರು. ಆದರೆ ಯಾರು ಇವರನ್ನು ಪ್ರೀತಿಸಿ, ಸೇವಿಸುತ್ತಿದ್ದರೋ ಅವರೆಲ್ಲ ಪ್ರಾಪಂಚಿಕತೆಯಿಂದ ಪಾರಾಗುತ್ತಿದ್ದರು. ಸಂಸಾರದಲ್ಲಿರುವ ಸಂಗಸಹಿತ ವಾದ ಪ್ರೇಮಕ್ಕೂ, ನಿಸ್ಸಂಗ ಪ್ರೇಮಕ್ಕೂ ಒಂದು ವ್ಯತ್ಯಾಸವಿದೆ. ಯಾರು ಮೋಹಕ್ಕೆ ಒಳಗಾಗಿ ಒಂದು ವಸ್ತುವನ್ನು ಪ್ರೀತಿಸುವರೋ ಅವರು ಉಳಿದ ವಸ್ತುವನ್ನು ಅದೇ ಉತ್ಕಟಪ್ರೇಮದಿಂದ ಪ್ರೀತಿಸಲಾರರು. ತಾವು ಪ್ರೀತಿಸುವ ವಸ್ತುವಿನ ದೆಸೆಯಿಂದ ಅದಕ್ಕೆ ಬದ್ಧರಾಗಿ ಅದಕ್ಕೋಸ್ಕರ ಏನನ್ನು ಬೇಕಾದರೂ ಕೊಡಲು ಸಿದ್ಧರಾಗುತ್ತಾರೆ. ಅದೇ ಧಾರಾಳತನ ವನ್ನು ಇನ್ನು ಉಳಿದ ವಸ್ತುಗಳಮೇಲೆ ತೋರಲಾಗುವುದಿಲ್ಲ. ಆದರೆ ಶ್ರೀ ಶಾರದಾದೇವಿಯವರ ಜೀವನವನ್ನು ನೋಡಿದರೆ, ಅವರು ರಾಧೆಯನ್ನು ಎಷ್ಟು ಪ್ರೀತಿಸುತ್ತಿದ್ದರೋ, ಅದೇ ಪ್ರೀತಿಯನ್ನು ತಮ್ಮೆಡೆಗೆ ಬಂದ ಎಲ್ಲ ಭಕ್ತರಮೇಲೆಯೂ ತೋರುತ್ತಿದ್ದರು. ತಮ್ಮ ನಂಟರು ಬಂದು ಇವರನ್ನು ಏನು ಕೇಳಿದರೂ ಹೇಗೆ ಕೊಡುತ್ತಿದ್ದರೋ ಹಾಗೆ ಉಳಿದವರು ಏನು ಬಂದು ಕೇಳಿದರೂ ಕೊಡುತ್ತಿದ್ದರು. ಇದರಿಂದ ಅವರು ರಾಧೆಯಮೇಲೆ ಆಸಕ್ತರಾಗಿ ಅವಳನ್ನು ಪ್ರೀತಿಸುತ್ತಿದ್ದರು ಎಂದು ಹೇಳಲಾಗುವುದಿಲ್ಲ.

ಯಾರು ಒಂದು ವಸ್ತುವನ್ನು ಆಸಕ್ತಿಯಿಂದ ಪ್ರೀತಿಸುತ್ತಾರೋ ಅವರು ಅನಂತರ ಅದರಮೇಲೆ ಸುಲಭವಾಗಿ ಅನಾಸಕ್ತರಾಗಲಾರರು. ಎಲ್ಲಿ ಆಸಕ್ತಿ ಇದೆಯೋ ಅಲ್ಲಿ ಅನಾಸಕ್ತಿ ಇರುವುದಿಲ್ಲ. ಆದರೆ ನಿಜ ವಾಗಿಯೂ ಆಧ್ಯಾತ್ಮಿಕಜೀವನದಲ್ಲಿ ಮುಂದುವರಿದವರು ಆಸಕ್ತಿ ಅನಾಸಕ್ತಿ ಗಳೆರಡನ್ನೂ ತಮ್ಮ ದಾಸರನ್ನಾಗಿ ಮಾಡಿಕೊಳ್ಳುವರು. ಅವರು ಇಚ್ಛೆ ಪಟ್ಟರೆ ಒಂದು ವಸ್ತುವನ್ನು ಅತ್ಯಂತ ನಿಕಟವಾಗಿ ಪ್ರೀತಿಸಬಲ್ಲರು. ಅಥವಾ ಮರುಕ್ಷಣದಲ್ಲಿಯೇ ಪ್ರೀತಿಸುವ ವಸ್ತುವನ್ನು ಸಂಪೂರ್ಣ ಮರೆಯ ಬಲ್ಲರು. ಇಂತಹ ಮಾನಸಿಕ ಶಕ್ತಿ ಅವರಲ್ಲಿರುತ್ತದೆ. ಇದಕ್ಕೆ ಉದಾಹರಣೆ ಗಾಗಿ ಶ್ರೀ ಶಾರದಾದೇವಿಯವರ ಜೀವನದಲ್ಲಿಯೇ ಎರಡು ಪ್ರಸಂಗಗಳನ್ನು ಹೇಳಬಹುದು. ಇವರು ತಮ್ಮನ ಮಗುವನ್ನು ಬಹಳ ಪ್ರೀತಿಸುತ್ತಿದ್ದರು.

ಅದು ಒಂದು ದಿನ ಕಾಲವಾಯಿತು. ಈ ಸುದ್ದಿಯನ್ನು ಕೇಳಿ ಅವರು ದುಃಖಿತರಾದರು. ಇದನ್ನು ನೋಡಿ ಆ ಆಶ್ರಮದಲ್ಲಿದ್ದವರು ಸಂಜೆ ಮಂಗಳಾರತಿಯನ್ನು ಕೂಡ ಮಾಡಲಿಲ್ಲ. ಸ್ವಲ್ಪ ಹೊತ್ತಾದಮೇಲೆ ಶ್ರೀ ಶಾರದಾದೇವಿಯವರು ತಮ್ಮ ದುಃಖವನ್ನು ಮರೆತು ಮಂಗಳಾರತಿಯನ್ನು ಅವರೇ ಮಾಡಿ ಹಿಂದಿನ ದಿನದಂತೆ ಮಾತನಾಡತೊಡಗಿದರು. ಆಗ ನೋಡಿದವರು ಒಂದು ಘಂಟೆ ಹಿಂದೆ ಇವರು ಇಷ್ಟು ವ್ಯಸನಪಡುತ್ತಿದ್ದರು. ಈಗ ಎಲ್ಲವನ್ನೂ ಮರೆತವರಂತೆ ತೋರಿಸಿಕೊಳ್ಳುತ್ತಿರುವರಲ್ಲ ಎಂದು ಆಶ್ಚರ್ಯಪಟ್ಟರು.

ರಾಧೆಯ ಮಗು ಕೂಡ ಶ್ರೀ ಶಾರದಾದೇವಿಯವರ ಆಶ್ರಯದಲ್ಲಿ ಬೆಳೆಯುತ್ತಿತ್ತು. ಅದನ್ನು ಬೇಕಾದಷ್ಟು ಎತ್ತಿಕೊಂಡು ಮುದ್ದಿಸುತ್ತಿದ್ದರು. ತಮ್ಮ ಕೊನೆಯ ದಿನಗಳಲ್ಲಿ ಅದೇ ಮಗು ಅಳುತ್ತಾ ಇವರ ಹಾಸಿಗೆ ಹತ್ತಿರ ತೆವಳುತ್ತಿದ್ದರೆ ಅದನ್ನು ನೋಡದೆ, ಯಾರನ್ನಾದರೂ ಕೂಗಿ ಮಗುವನ್ನು ಎತ್ತಿಕೊಂಡು ಹೋಗುವಂತೆ ಹೇಳುತ್ತಿದ್ದರು. ಇವರು ಪ್ರೀತಿಸುವ ವಸ್ತುವಿಗೆ ದಾಸರಾಗಿರಲಿಲ್ಲ.

ಶ್ರೀ ಶಾರದಾದೇವಿಯವರ ಆಪ್ತ ಗೆಳತಿಯರಾದ ಯೋಗಿನ್‌ಮಾ ಶ್ರೀರಾಮಕೃಷ್ಣರನ್ನು ಕಂಡಿದ್ದರು. ಅವರ ಹತ್ತಿರ ಬಹಳ ಕಾಲ ವಾಸವಾಗಿದ್ದರು. ಅವರ ಜೀವನದೊಂದಿಗೆ ಇವರ ಜೀವನವನ್ನು ಹೋಲಿಸಿ ನೋಡಿ, ಇವರು ಯಾವಾಗಲೂ ನಂಟರು ಇಷ್ಟರು ಇವರ ಹತ್ತಿರದಲ್ಲೇ ವಾಸವಾಗಿರುವಾಗ ಶ್ರೀರಾಮಕೃಷ್ಣರಂತಹ ಉತ್ತಮ ಪದಕ್ಕೆ ಇವರು ಏರಿರಬಹುದೇ? ಎಂಬ ಸಂದೇಹದಿಂದ ಗಂಗಾನದಿಗೆ ಸ್ನಾನಕ್ಕೆ ಹೋಗಿ ಸ್ನಾನವಾದಮೇಲೆ ಕುಳಿತುಕೊಂಡು ಧ್ಯಾನಮಾಡುತ್ತಿದ್ದರು. ಆಗ ಅವರ ಮುಂದೆ ಗಂಗಾನದಿಯಲ್ಲಿ ಕೊಳೆತು ನಾರುವ ಮಗುವೊಂದು ತೇಲಿ ಹೋಗುತ್ತಿತ್ತು. ಇವರಿಗೆ ಶ್ರೀರಾಮಕೃಷ್ಣರು ಕಂಡಂತೆ ಆಗಿ, ಇವರನ್ನು "ಆ ಮಗುವಿನಿಂದ ಗಂಗೆ ಮಲಿನವಾಗಿರುವಳೆ?" ಎಂದು ಪ್ರಶ್ನೆ ಮಾಡಿದರು. "ಇಲ್ಲ" ಎಂದರು. "ಅದರಂತೆಯೇ ಅನೇಕ ಜನರು ಶಾರದಾದೇವಿಯವರ ಪ್ರೀತಿಯ ಗಂಗಾಜಲದಲ್ಲಿ ತೇಲುತ್ತಿರಬಹುದು. ಆದರೆ ಅದರಿಂದ ಅವಳ ಮನಸ್ಸು ಮಲಿನವಾಗುವುದಿಲ್ಲ" ಎಂದು ಹೇಳಿದರಂತೆ.

ಅಪ್ಪಟ ಚಿನ್ನದಿಂದ ಒಡವೆ ಮಾಡಲಾಗುವುದಿಲ್ಲ. ಅದಕ್ಕೆ ಸ್ವಲ್ಪ ತಾಮ್ರವನ್ನು ಬೆರಸಬೇಕು ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಮಾನವನು ಸಂಪೂರ್ಣ ಸಿದ್ಧನಾದರೆ, ಅವನು ದೇವರಲ್ಲದೆ ಬೇರೆ ವಸ್ತು

ವನ್ನೇ ನೋಡಲು ಆಗುವುದಿಲ್ಲ. ಆಗ ಇನ್ನೊಬ್ಬರಿಗೆ ಏನು ಉಪಕಾರ ವನ್ನು ಮಾಡಬಲ್ಲನು. ದೇವರೇ ಅನೇಕವೇಳೆ ಅಂತಹ ಮಹಾಪುರುಷರಲ್ಲಿ ಬಾಧಕವಲ್ಲದ ಸಣ್ಣ ಅಹಂಕಾರವನ್ನು ಸೇರಿಸಿ ಅವರನ್ನು ಪ್ರಪಂಚದಲ್ಲಿ ನಿಲ್ಲಿಸಿ ಅವರಿಂದ ತನ್ನ ಕೆಲಸವನ್ನು ಮಾಡಿಸುವನು. ಒಮ್ಮೆ ಸ್ವಾಮಿ ವಿವೇಕಾನಂದರೂ ಕೂಡ ತಾವು ಅನವರತವೂ ನಿರ್ವಿಕಲ್ಪ ಸಮಾಧಿ ಯಲ್ಲಿರಬೇಕೆಂದು ಆಶಿಸುತ್ತಿದ್ದರು, ಆಗ ಶ್ರೀರಾಮಕೃಷ್ಣರು ದೇವಿಗೆ ಅವನ ಮೇಲೆ ಮಾಯೆಯನ್ನು ಬೀರಬೇಕೆಂದು ಬೇಡಿಕೊಂಡರು. ಅದರಂತೆಯೇ ಶ್ರೀ ಶಾರದಾದೇವಿಯವರೂ ಕೂಡ ತಮ್ಮ ಪತಿಯ ಮಹಾ ಸಮಾಧಿಯಾದಮೇಲೆ ಯಾವಾಗಲೂ ನಿರ್ವಿಕಲ್ಪಸಮಾಧಿಯಲ್ಲಿ ಇರ ಬೇಕೆಂದು ಬಯಸಿದ್ದರು. ಆದರೆ ರಾಧೆ ಎಂಬ ಮಗುವಿನಮೇಲೆ ಇವರ ಮನಸ್ಸು ಹೋಗುವಂತೆಮಾಡಿ ಮಾಯೆಯನ್ನು ಬೀರಿ, ಇವರನ್ನು ಜಗದಲ್ಲಿರಿಸಿ ಲೋಕಕಲ್ಯಾಣಕ್ಕಾಗಿ ಇವರಿಂದ ಅನೇಕ ಕೆಲಸಗಳನ್ನು ಮಾಡಿಸಿದರು.



# ಭಕ್ತರ ಆರೈಕೆಯಲ್ಲಿ

ಹಿಂದಿನ ಅಧ್ಯಾಯದಲ್ಲಿ ನೆಂಟರು ಇವರ ಹತ್ತಿರ ಹೇಗಿದ್ದರು, ಅವರೊಂದಿಗೆ ಶ್ರೀಶಾರದಾದೇವಿಯವರ ನಡತೆ ಹೇಗಿತ್ತು ಎಂಬುದನ್ನು ನೋಡಿದೆವು. ಈ ಅಧ್ಯಾಯದಲ್ಲಿ ಅವರು ಭಕ್ತರೊಂದಿಗೆ ಹೇಗೆ ನಡೆಯುತ್ತಿದ್ದರು; ಅವರವರ ಪರಸ್ಪರ ಬಾಂಧವ್ಯವೆಂತಹುದು ಎಂಬುದನ್ನು ನೋಡುವೆವು. ಹಿಂದೂಗಳಲ್ಲಿ ಗುರುವಿಗೂ ಶಿಷ್ಯನಿಗೂ ಇರುವ ಸಂಬಂಧ ಅತ್ಯಂತ ನಿಕಟವಾದುದು ಮತ್ತು ಅತ್ಯಂತ ಪವಿತ್ರವಾದುದು. ಗುರುವಿನಲ್ಲಿ ಪರಮಾತ್ಮನ ಶಕ್ತಿ ಇವನ ಉದ್ಧಾರಕ್ಕೆ ಆವಿರ್ಭೂತವಾಗಿರುವುದೆಂದು ಶಿಷ್ಯನು ನಂಬುತ್ತಾನೆ. ಅವರ ಉಪದೇಶದಲ್ಲಿ ನಂಬಿಕೆ ಇಡುತ್ತಾನೆ. ತನ್ನ ಆಧ್ಯಾತ್ಮಿಕ ಜೀವನದ ಪಯಣವನ್ನು ಅದರ ಆಧಾರದ ಮೇಲೆ ಆರಂಭಿಸುವನು. ಗುರುವಾಗುವುದು ಬಹಳ ಜವಾಬ್ದಾರಿಯ ಕೆಲಸ. ಸಿದ್ಧರಲ್ಲಿ ಕೆಲವರು ಮಾತ್ರ ಇಂತಹ ಜವಾಬ್ದಾರಿಯನ್ನು ವಹಿಸಿಕೊಳ್ಳುವವರು ಸಿಕ್ಕಬಹುದು. ಗುರು ಪದವಿಯನ್ನು ಸ್ವೀಕರಿಸುವವನಿಗೆ ಆತ್ಮಸಾಕ್ಷಾತ್ಕಾರವಾಗಿರಬೇಕು. ಆಧ್ಯಾತ್ಮಿಕ ಗ್ರಂಥಗಳ ಸಾರ ತಿಳಿದಿರಬೇಕು. ತಾನು ಮಾಡುವ ಕೆಲಸವೆಲ್ಲ ಪ್ರೀತಿಯಿಂದ ಮಾತ್ರ ಪ್ರೇರಿತವಾಗಿರಬೇಕು. ಶಿಷ್ಯನು ಕೊಡುವ ಗುರುದಕ್ಷಿಣೆ ಆಸೆಗೆ ಅಥವಾ ಶಿಷ್ಯನ ದಸೆಯಿಂದ ತಾನು ಪ್ರಖ್ಯಾತನಾಗಬಹುದೆಂದು ತಿಳಿದು ಗುರು ಪದವಿಯನ್ನು ವಹಿಸಕೂಡದು. ಗುರುತನವೆಂದರೆ ಆಧ್ಯಾತ್ಮಿಕ ವಿದ್ಯೆಯನ್ನು ವ್ಯಾಪಾರಮಾಡುವುದಲ್ಲ. ಶಿಷ್ಯನು ಆದರದಿಂದ ಕೊಟ್ಟದ್ದನ್ನು ಗುರು ಸ್ವೀಕರಿಸಬಹುದು. ಆದರೆ ಆಸೆಯಿಂದ ಸ್ವೀಕರಿಸಬಾರದು. ಗುರುವಿನ ಉದ್ದೇಶ ತಾಯಿ ತಂದೆಗಳ ಉದ್ದೇಶವನ್ನು ಮೀರಿರಬೇಕು. ತಾಯಿ ತಂದೆಗಳು ತಮ್ಮ ಮಕ್ಕಳನ್ನು ಪ್ರೀತಿಸುವಾಗ ಇವನು ದೊಡ್ಡವನಾದ ಮೇಲೆ ತಮ್ಮ ಕಷ್ಟಕಾಲಕ್ಕೆ ಆಗುತ್ತಾನೆ ಎಂದು ತಿಳಿದು ಪ್ರೀತಿಸುವುದಿಲ್ಲ. ಪ್ರೇಮಕ್ಕೋಸುವಾಗಿ ಪ್ರೀತಿಸುತ್ತಾರೆ. ಗುರುವಿನ ಭಾವನೆ ಇದಕ್ಕಿಂತಲೂ ಪವಿತ್ರವಾಗಿರುವುದು. ತನ್ನ ಮಗ ಒಳ್ಳೆ ಕೆಲಸಕ್ಕೆ ಸೇರಿ ಪ್ರಖ್ಯಾತನಾದರೆ ಹಲವು ತಾಯಿತಂದೆಗಳು ತಾವು ಧನ್ಯರಾದರೆಂದು ತಿಳಿಯಬಹುದು. ಆದರೆ ನಿಜವಾದ ಗುರು, ತನ್ನ ಶಿಷ್ಯರಿಗೆ ಸುಖ ದುಃಖಗಳ ತುಮುಲವಾದ ಜನನ ಮರಣಗಳ ಸೆರೆಮನೆಯಾದ ಈ ಸಂಸಾರದಿಂದ ತಪ್ಪಿಸಿಕೊಂಡು ಹೋಗಲು ಸಹಾಯ ಮಾಡುತ್ತಾರೆ. ಅವರ ಪಾಪಕರ್ಮಗಳನ್ನು ತಾವು ಸ್ವೀಕರಿಸಿ, ತಮ್ಮ ತಪಶ್ಶಕ್ತಿಯನ್ನು ಅವರಿಗೆ ಧಾರೆಯೆರೆಯುತ್ತಾರೆ.

ಮುಂದೆ ಇವರು ಮುಕ್ತರಾದರೆ ಇವರನ್ನು ನೋಡಿ ಹೆತ್ತ ತಾಯಿ ತಂದೆಗಳಿಗಿಂತ ಹೆಚ್ಚು ಆನಂದ ಪಡುತ್ತಾರೆ.

ಇಷ್ಟು ಕಷ್ಟವಾದ ಗುರುವಿನ ಜವಾಬ್ದಾರಿಯನ್ನು ವಹಿಸುವುದಕ್ಕೆ ಶ್ರೀಶಾರದಾದೇವಿಯವರು ಎಲ್ಲ ವಿಧದಲ್ಲಿಯೂ ಅರ್ಹರಾಗಿದ್ದರು. ಶ್ರೀರಾಮಕೃಷ್ಣರಂತಹ ಅವತಾರ ಪುರುಷರ ನೇತೃತ್ವದಲ್ಲಿ ಅವರ ಆಧ್ಯಾತ್ಮಿಕ ಜೀವನ ಮುಂದುವರಿಯಿತು. ಜಪ ತಪ ಸಾಧನೆಯಿಂದ ನಿರ್ವಿಕಲ್ಪ ಸಮಾಧಿಯವರೆವಿಗೆ ಮೆಟ್ಟಲು ಮೆಟ್ಟಲಾಗಿ ಏರಿ ಹೋಗಿದ್ದರು. ಗಿಳಿಯ ಮರಿಯಂತೆ ಕಂಠಪಾಠ ಮಾಡಿದ ಪಂಡಿತರಂತೆ ಇವರಿಗೆ ವೇದೋಪನಿಷತ್ತು ತಿಳಿಯದೇ ಇರಬಹುದು. ಆದರೆ ಶಾಸ್ತ್ರಗಳ ಅಂತರಾರ್ಥದ ಪ್ರತ್ಯಕ್ಷಾನುಭವವಾಗಿತ್ತು. ಇವೆಲ್ಲವನ್ನು ಮೀರಿ ಇವರಲ್ಲಿ ಭವಬಂಧನದಲ್ಲಿ ನರಳುತ್ತಿರುವವರನ್ನು ನೋಡಿದರೆ ಅನುಕಂಪಿಸುವ ಹೃದಯವಿತ್ತು. ಶ್ರೀರಾಮಕೃಷ್ಣರು ತಾವು ಜಗತ್ತನ್ನು ಬಿಟ್ಟುಹೋಗುವಾಗ, "ಸುತ್ತಲು ಜನರು ಅಜ್ಞಾನದ ಕತ್ತಲೆಯಲ್ಲಿ ತೊಳಲುತ್ತಿರುವರು. ನೀನು ಅವರನ್ನು ಉದ್ಧರಿಸಬೇಕು" ಎಂದು ಹೇಳಿ ಹೋಗಿದ್ದರು. ಪತಿಯ ಆಣತಿಯಂತೆ ನಡೆಯುವುದಕ್ಕಿಂತ ಸತಿಗೆ ಪ್ರಿಯವಾಗಿರುವುದು ಮತ್ತಾವುದಿರುವುದು! ಬದ್ಧಜೀವಿಗಳ ಉದ್ಧಾರಕ್ಕೆ ತಮ್ಮ ಕೈಲಾದ ಸಹಾಯವನ್ನು ಮಾಡಲು ಸಿದ್ಧರಾದರು.

ಉಪದೇಶವೆಂದರೆ ಗುರು ಶಿಷ್ಯನಿಗೆ ಕೇವಲ ಮಂತ್ರವನ್ನು ಕೊಡುವುದು ಮಾತ್ರವಲ್ಲ. ಮಂತ್ರದೊಂದಿಗೆ ತನ್ನ ಶಕ್ತಿಯನ್ನೂ ದಾನಮಾಡುವನು. ಅದಕ್ಕೋಸ್ಕರವೇ ಶ್ರೀರಾಮಕೃಷ್ಣರ ಶಿಷ್ಯರನೇಕರು ಭಕ್ತರನ್ನು ಉಪದೇಶಕ್ಕೆಂದು ಶ್ರೀಶಾರದಾದೇವಿಯವರ ಬಳಿಗೆ ಕಳುಹಿಸುತ್ತಿದ್ದರು. ಇವರು ಶಿಷ್ಯರು ಎಂತಹ ಅಧೋಗತಿಗೆ ಇಳಿದಿರಲಿ ಎಲ್ಲರನ್ನೂ ಶಿವನು ವಿಷವನ್ನು ಸ್ವೀಕರಿಸುವಂತೆ ಸ್ವೀಕರಿಸುತ್ತಿದ್ದರು. ಶ್ರೀಶಾರದಾದೇವಿಯವರು ಶಿಷ್ಯರಿಂದ ಸ್ವೀಕರಿದ ಪಾಪಕರ್ಮಗಳೇ ಅನೇಕವೇಳೆ ಇವರ ದೇಹದಲ್ಲಿ ವ್ಯಾಧಿಯ ರೂಪದಲ್ಲಿ ಕಾಣಿಸಿಕೊಳ್ಳುತ್ತಿತ್ತು. ಮನಸ್ಸಿನ ಮಲಿನತೆ ಎಂಬುದು ಒಂದು ವಿದ್ಯುಚ್ಛಕ್ತಿಯೆ? ಅದನ್ನು ಮುಟ್ಟಿದರೆ ಏನಾಗುತ್ತದೆ? ಎಂದು ಕೆಲವರು ಕೇಳಬಹುದು. ಆದರೆ ಶ್ರೀಶಾರದಾದೇವಿಯವರ ಜೀವನದಲ್ಲಿ ಒಬ್ಬ ಪುಣ್ಯಾತ್ಮನ ದೇಹ, ಪಾಪಿಗಳ ಸಂಪರ್ಕದಿಂದ ನೋವನ್ನು ಅನುಭವಿಸಬಲ್ಲದು, ಎಂಬುದಕ್ಕೆ ಎಷ್ಟೋ ನಿದರ್ಶನಗಳಿವೆ. ಕೆಲವರು ಬಂದು ಇವರ ಕಾಲುಮುಟ್ಟಿ ನಮಸ್ಕಾರಮಾಡಿ ಹೋದಮೇಲೆ

ಇವರಿಗೆ ಸಂತೋಷವಾಗುತ್ತಿತ್ತು. ಮತ್ತೆ ಕೆಲವರು ಇವರ ಕಾಲು ಮುಟ್ಟಿದರೆ ಚೇಳು ಕುಟುಕಿದಂತೆ ನೋವಾಗುತ್ತಿತ್ತು. ಆಗ ಗಂಗಾನದಿಯ ನೀರನ್ನು ತಂದು ಗುರುದೇವನ ಹೆಸರು ಹೇಳುತ್ತಾ ತೊಳೆದಾಗ ಮಾತ್ರ ಗುಣವಾಗುತ್ತಿತ್ತು. ಇದನ್ನು ತಮ್ಮ ಹತ್ತಿರಿದ್ದ ಸ್ವಾಮಿ ಶಾರದಾನಂದರಿಗೆ ಹೇಳಿದರೆ ಅವರು ಎಲ್ಲಿ ಜನರಿಗೆ ತನ್ನನ್ನು ಮುಟ್ಟಬೇಡ ಎಂದು ಹೇಳುವರೋ ಎಂದು ತಿಳಿದು ಹೇಳುತ್ತಿರಲಿಲ್ಲ. ತಮಗೆ ವ್ಯಥೆಯಾದರೂ ಸಹಾ ಉಳಿದವರಿಗೆ ಸಂತೋಷವಾದರೆ ಅದೇ ತಮಗೆ ಸಂತೋಷವೆಂದು ಭಾವಿಸಿದ್ದರು.

ಒಂದುದಿನ ಜಯರಾಮವಟಿಯಲ್ಲಿದ್ದಾಗ, ಭಕ್ತನೊಬ್ಬನಿಗೆ ತನ್ನ ಹಿಂದಿನ ಹೀನ ಜೀವನದ ನೆನೆಪಾಗಿ ಶ್ರೀಶಾರದಾದೇವಿಯುವರನ್ನು ಮುಟ್ಟಿದರೆ ಅವರು ತನ್ನಿಂದ ವ್ಯಥೆಪಡಬೇಕಾಗುವುದೆಂದು ತಿಳಿದು ದೂರದಲ್ಲಿಯೇ ನಿಂತುಕೊಂಡನು. ಇದನ್ನು ತಿಳಿದು ಶ್ರೀಶಾರದಾದೇವಿಯುವರು, " ಏಕೆ ಮಗು, ಅನುಮಾನಿಸುತ್ತಿ. ನಾನು ಹುಟ್ಟಿರುವುದೇ ಇದಕ್ಕೆ. ಇನ್ನೊಬ್ಬರ ಪಾಪಗಳನ್ನು, ನಾವು ಸ್ವೀಕರಿಸಿ ಭಸ್ಮಮಾಡದಿದ್ದರೆ ಮತ್ತಾರು ಮಾಡುವರು? ನಾವೇ ನಿರಾಕರಿಸಿದರೆ ಪಾಪಿಗಳಿಗೆ ಯಾರು ಆಶ್ರಯ ಕೊಡುವರು" ಎಂದು ಅವನನ್ನು ತಮ್ಮ ಕಾಲುಮುಟ್ಟಿ ನಮಸ್ಕಾರ ಮಾಡುವಂತೆ ಹೇಳಿದರು. ತಮ್ಮ ಕೊನೆಯ ದಿನಗಳಲ್ಲಿ ಇವರು ರೋಗ ಶಯ್ಯೆಯಲ್ಲಿದ್ದಾಗ, ಇವರು ನರಳುವುದನ್ನು ನೋಡಿ ಭಕ್ತರೊಬ್ಬರು, "ಈಸಲ ಶಾರದಾದೇವಿಯುವರಿಗೆ ಗುಣವಾದರೆ ಇನ್ನೊಮ್ಮೆ ಜನಗಳಿಗೆ ಉಪದೇಶ ಕೊಡದಂತೆ ಮಾಡಬೇಕು; ಉಪದೇಶವನ್ನು ಕೊಟ್ಟು ಅವರ ಪಾಪವನ್ನು ಸ್ವೀಕರಿಸಿಯೇ ಇವರು ಈಗ ನರಳುತ್ತಿರುವುದು" ಎಂದರು. ಅದಕ್ಕೆ ಶಾರದಾದೇವಿಯುವರು ನಕ್ಕು, " ಏಕೆ ನೀವು ಹಾಗೆ ಹೇಳುತ್ತೀರಲ್ಲ! ಶ್ರೀರಾಮಕೃಷ್ಣರು ಕೇವಲ ಸತ್ಪುರುಷರ ಉದ್ಧಾರಕ್ಕಾಗಿ ಬರಲಿಲ್ಲ. ಅವರ ಅವತಾರದಿಂದ ಪಾಪಿಗಳಿಗೂ ಸಹಾಯವಾಗಬೇಕಾಗಿದೆ" ಎಂದರು.

ಸಹಜ ಮಾತೃಪ್ರೇಮ ಯಾವಾಗಲೂ ಇವರೆದೆಯಲ್ಲಿ ತುಂಬಿ ತುಳುಕಾಡುತ್ತಿತ್ತು. ಯಾರು ಯಾವ ಹೊತ್ತಿನಲ್ಲಿ ಬರಲಿ ತಮ್ಮ ಆರೋಗ್ಯ ಅನುಕೂಲಗಳೆಲ್ಲವನ್ನೂ ಒತ್ತಟ್ಟಿಗಿಟ್ಟು ಸರ್ವದಾ ಇವರಿಗೆ ಸಹಾಯಮಾಡಲು ಸಿದ್ಧರಾಗಿರುತ್ತಿದ್ದರು. ಒಮ್ಮೆ ಜಯರಾಮವಟಿಯಲ್ಲಿ ಇವರು ಮಲೇರಿಯಾ ಜ್ವರದಿಂದ ನರಳುತ್ತಿದ್ದಾಗ ಭಕ್ತನೊಬ್ಬನು ದೂರದಿಂದ ಬಂದು ಇವರಿಂದ ಉಪದೇಶವನ್ನು ಸ್ವೀಕರಿಸಬೇಕೆಂದು

ಬಯಸಿದನು. ಹತ್ತಿರಿದ್ದ ಪರಿಚಾರಕರು "ಈಗ ಶ್ರೀಶಾರದಾದೇವಿಯವರಿಗೆ ಅನಾರೋಗ್ಯ, ಮತ್ತೊಮ್ಮೆ ಬನ್ನಿ" ಎಂದು ಹೇಳಿ ಒಳಗೆ ಹೋಗಲು ಬಿಡಲಿಲ್ಲ. ಆವರೆ ಭಕ್ತನು "ಒಂದು ಸಾರಿಯಾದರೂ ಶ್ರೀಶಾರದಾದೇವಿಯವರ ದರ್ಶನವನ್ನು ಮಾಡಿಕೊಂಡು ಹೋಗಬೇಕು ಬಿಡಿ" ಎಂಬುದನ್ನು ಒಳಗೆ ಶಾರದಾದೇವಿಯವರು ಕೇಳುತ್ತಿದ್ದರು. ಹತ್ತಿರಿದ್ದ ಪರಿಚಾರಕರೊಬ್ಬರನ್ನು ಕರೆದು ಅವನನ್ನು ಯಾತಕ್ಕೆ ಒಳಗೆ ಬಿಡುವುದಿಲ್ಲ ಎಂದು ಕೇಳಿದಾಗ, ಶ್ರೀಶಾರದಾನಂದರು ಹಾಗೆ ಹೇಳಿರುವರಂತೆ ಎಂದನು. "ಶಾರದಾನಂದ ಯಾರು? ಇವನನ್ನು ತಡೆಯುವುದಕ್ಕೆ? ನಾನು ಹುಟ್ಟಿರುವುದೇ ಇದಕ್ಕೆ" ಎಂದು ಭಕ್ತನನ್ನು ಒಳಕ್ಕೆ ಕರೆದು ಮಾತನಾಡಿಸಿ ಉಪದೇಶ ಕೊಡುವೆನೆಂದು ಹೇಳಿಕಳುಹಿಸಿದರು.

ಅವರ ಶಿಷ್ಯರು ಕೇವಲ ಹಿಂದುಗಳೇ ಆಗಿರಲಿಲ್ಲ. ಪಾರ್ಸಿಗಳಿದ್ದರು, ಕ್ರೈಸ್ತರಿದ್ದರು, ಇನ್ನುಳಿದ ಜಾತಿ ಮತಗಳವರೂ ಇದ್ದರು. ಎಲ್ಲರನ್ನೂ ಪಕ್ಷಪಾತವಿಲ್ಲದೆ ಇವರು ಹರಿಸಿದರು. ಅನೇಕವೇಳೆ ಇವರಲ್ಲಿಗೆ ಬರುವ ಜನರ ಆಂತರಿಕ ಸ್ವಭಾವ ತಿಳಿದಿದ್ದಿತು. ಅನೇಕರು ಅಯೋಗ್ಯರಾಗಿದ್ದರು. ಆದರೂ ಇವರನ್ನು ಒಮ್ಮೆ ತಾಯಿ ಎಂದು ಕರೆದರೆ ಸಾಕು, ಅವರ ಪಾಪವೆಲ್ಲವನ್ನೂ ಮರೆತು, ತಮ್ಮ ಪ್ರೀತಿ ಆಶೀರ್ವಾದದ ಅಮೃತದಿಂದ ಅವರನ್ನು ತೃಪ್ತಿಪಡಿಸುತ್ತಿದ್ದರು.

ಧಾರಾಳವಾಗಿ ಇವರು ಯಾರು ಬಂದು ಕೇಳಿದರೂ ಇಲ್ಲವೆನ್ನದೆ ಉಪದೇಶವನ್ನು ಕೊಡುತ್ತಿದ್ದರು. ಇದರ ಪರಿಣಾಮವಾಗಿ ಇವರಿಂದ ಉಪದೇಶ ಹೊಂದಿದವರು ಎಲ್ಲರೂ ಉತ್ತಮ ತರಗತಿಯ ಶೀಲದವರಾಗಿರಲಿಲ್ಲ. ಇವರ ಹತ್ತಿರ ಇದ್ದ ಯೋಗಿನ್‌ಮಾ ತಮಾಷೆಗಾಗಿ ಶ್ರೀ ಶಾರದಾದೇವಿಯವರನ್ನು, "ನೋಡಿ, ಪ್ರತಿಯೊಬ್ಬ ಶ್ರೀರಾಮಕೃಷ್ಣರ ಶಿಷ್ಯರೂ ಆಧ್ಯಾತ್ಮಿಕಜೀವನದಲ್ಲಿ ಬಹಳ ಮುಂದುವರಿದಿರುವರು. ನಿಮ್ಮ ಶಿಷ್ಯರಲ್ಲಿ ಎಷ್ಟು ಜನ ಹಾಗಿರುವರು?" ಎಂದು ಪ್ರಶ್ನೆಮಾಡಿದರು. ಅದಕ್ಕೆ ಶ್ರೀ ಶಾರದಾದೇವಿಯವರು "ಇದರಲ್ಲಿ ಆಶ್ಚರ್ಯವೇನಿದೆ. ಅವರು ತಮ್ಮಲ್ಲಿಗೆ ಬಂದವರಲ್ಲಿ ಅತ್ಯಂತ ಪರಿಶುದ್ಧಾತ್ಮರನ್ನು ಮಾತ್ರ ಎಷ್ಟೋ ಒರೆ ಹಚ್ಚಿ ನೋಡಿ ಸ್ವೀಕರಿಸಿದರು. ನನಗೆ ಮಾತ್ರ ಕೆಲಸಕ್ಕೆ ಬಾರದ ಸಾವಿರಾರು ಜೊಳ್ಳು ಜೀವಿಗಳನ್ನು ಬಿಟ್ಟು ಹೋಗಿರುವರು. ಅವರ ಶಿಷ್ಯರೊಂದಿಗೆ ನನ್ನ ಶಿಷ್ಯರನ್ನು ಹೋಲಿಸಬೇಡ" ಎಂದರು.

ಒಬ್ಬ ಶಿಷ್ಯನಿಗೆ, ಇವರು ಉಪದೇಶಕೊಡುವ ಧಾರಾಳತನ ಸರಿ

ಯಾಗಿ ಕಾಣಲಿಲ್ಲ. “ನೀವು ಇಷ್ಟೊಂದು ಜನಕ್ಕೆ ಉಪದೇಶಕೊಡುತ್ತೀರಿ; ಅವರನ್ನೆಲ್ಲಾ ನೀವು ಜ್ಞಾಪಕದಲ್ಲಿಟ್ಟುಕೊಳ್ಳುವುದಕ್ಕೆ ಆಗುವುದೆ? ಗುರು ಶಿಷ್ಯನನ್ನು ಜ್ಞಾಪಕದಲ್ಲಿಟ್ಟುಕೊಂಡು ಆಧ್ಯಾತ್ಮಿಕಜೀವನದಲ್ಲಿ ಮುಂದು ವರಿಯುವುದನ್ನು ನೋಡಿಕೊಳ್ಳಬೇಕು. ಅದಕ್ಕೋಸ್ಕರ ನೀವು ಎಷ್ಟು ಜನರನ್ನು ಜ್ಞಾಪಕದಲ್ಲಿಟ್ಟುಕೊಳ್ಳಲು ಆಗುವುದೋ ಅಷ್ಟು ಜನರಿಗೆ ಉಪದೇಶವನ್ನು ಕೊಟ್ಟರೆ ಒಳ್ಳೆಯದಲ್ಲವೆ?” ಎಂದರು. ಅದಕ್ಕೆ ಶ್ರೀ ಶಾರದಾದೇವಿಯವರು, “ಮಗು, ಶ್ರೀರಾಮಕೃಷ್ಣರು ನನಗೆ ಹಾಗೆ ಮಾಡಬೇಡವೆಂದು ಹೇಳಲಿಲ್ಲ. ಅವರು ನನಗೆ ಅನೇಕ ವಿಚಾರಗಳಲ್ಲಿ ಬುದ್ಧಿ ಹೇಳಿದ್ದಾರೆ. ನಾನು ಮಾಡುವುದು ಸರಿಯಲ್ಲದಿದ್ದರೆ ಅವರು ಈ ವಿಚಾರದಲ್ಲಿ ನನಗೇನಾದರೂ ಬುದ್ಧಿ ಹೇಳುತ್ತಿರಲಿಲ್ಲವೆ? ನಾನು ಶಿಷ್ಯರ ಜವಾಬ್ದಾರಿಯನ್ನೆಲ್ಲ ಶ್ರೀರಾಮಕೃಷ್ಣರ ಪಾಲಿಗೆ ಬಿಡುತ್ತೇನೆ. ಮತ್ತು ಪ್ರತಿದಿನವೂ ಶ್ರೀರಾಮಕೃಷ್ಣರಿಗೆ ಅವರ ಶಿಷ್ಯರು ಎಲ್ಲಿದ್ದರೂ ಕಾಪಾಡ ಬೇಕೆಂದು ಪ್ರಾರ್ಥಿಸುತ್ತೇನೆ. ಅದಲ್ಲದೆ ನಾನು ಕೊಡುವ ಉಪದೇಶ ಮಂತ್ರಗಳೆಲ್ಲ ಶ್ರೀರಾಮಕೃಷ್ಣರೇ ನನಗೆ ಕಲಿಸಿಕೊಟ್ಟದ್ದು. ಇವುಗಳ ಮೂಲಕ ಮುಕ್ತಿಯನ್ನು ಒಬ್ಬನು ನಿಜವಾಗಿಯೂ ಗಳಿಸಬಹುದು” ಎಂದರು.

ನಿಜವಾಗಿಯೂ ಶ್ರೀಶಾರದಾದೇವಿಯವರು ಶಿಷ್ಯರ ಆಧ್ಯಾತ್ಮಿಕ ಜೀವನದ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದರು. ಶಿಷ್ಯರು ಸದಾ ಇವರ ಮನಸ್ಸಿನಲ್ಲಿ ಇರುತ್ತಿದ್ದರು. ಅವರನ್ನು ಮೇಲೆತ್ತುವುದಕ್ಕೆ ತಾವು ಜೀವಿಸಿರುವತನಕ ಪ್ರಯತ್ನಿಸುತ್ತಿದ್ದರು. ತಾವು ರೋಗದ ಶಯ್ಯೆಯಲ್ಲಿ ಮಲಗಿರುವಾಗಲೂ ರಾತ್ರಿ ಎರಡು ಗಂಟೆಯ ಹೊತ್ತಿಗೆ ಎದ್ದು ಜಪ ಮಾಡುತ್ತಿದ್ದರು. ಇದನ್ನು ನೋಡಿ ಭಕ್ತನೊಬ್ಬನು, “ನೀವು ರಾತ್ರಿ ಹೊತ್ತು ಸರಿಯಾಗಿ ನಿದ್ದೆ ಮಾಡುವುದಿಲ್ಲವೆ” ಎಂದನು. ಅದಕ್ಕೆ “ಮಗು, ಹೇಗೆ ನಾನು ನಿದ್ದೆ ಮಾಡುವುದು? ಅನೇಕರು ಬಹಳ ಉತ್ಸಾಹ ದಿಂದ ಬಂದು ನನ್ನಿಂದ ಉಪದೇಶ ಪಡೆದು ಹೋಗುವರು. ಆದರೆ ಯಾರೂ ಸರಿಯಾಗಿ ಜಪ ಮಾಡುವುದಿಲ್ಲ. ಆದರೆ ನಾನು ಅವರ ಜವಾ ಬ್ದಾರಿಯನ್ನು ವಹಿಸಿಕೊಂಡಿರುವುದರಿಂದ ಅವರಿಗಾದರೂ ನಾನು ಮಾಡ ಬೇಡವೆ? ಅದಕ್ಕೋಸ್ಕರವೇ ಶ್ರೀರಾಮಕೃಷ್ಣರಿಗೆ, ಅವರ ಆಧ್ಯಾತ್ಮಿಕ ಶಕ್ತಿಯನ್ನು ಜಾಗ್ರತಗೊಳಿಸು, ಅವರಿಗೆ ಮುಕ್ತಿಯನ್ನು ಕೊಡು, ಜಗದಲ್ಲಿ ದುಃಖ ತುಂಬಿದೆ. ಮತ್ತೊಮ್ಮೆ ಇವರು ಬರದಿರಲಿ ಎಂದು ಬೇಡುವೆ”

ಎಂದರು. ಮತ್ತೊಂದು ದಿನ ಚಂಡೀ ಪೂಜೆಯಾದ ಮೇಲೆ ತಮಗೆ ಜ್ಞಾಪಕವಿರುವ, ಇಲ್ಲದೇ ಇರುವ, ಶಿಷ್ಯರ ಪರವಾಗಿ ದೇವಿಗೆ ಪುಷ್ಪಾಂಜಲಿಯನ್ನು ಅರ್ಪಿಸಿದರು. ಇವರಿಂದ ಉಪದೇಶಹೊಂದಲು ಬಂದವರಲ್ಲಿ ಕೆಲವರನ್ನು ಪರೀಕ್ಷಿಸಲೋಸುಗ ನಂತರ ಬನ್ನಿ ಎಂದಿರಬಹುದು. ಆದರೆ ಅವರಿಗೆ ಅದರಲ್ಲಿ ಆಸೆಇಲ್ಲದೇ ಇದ್ದುದರಿಂದ ತಮಗೆ ಲಭ್ಯವಿಲ್ಲವೇನೋ ಎಂದು ಸುಮ್ಮನಾದರು.

ಶ್ರೀಶಾರದಾದೇವಿಯವರು ಉಪದೇಶ ಕೊಡುವುದರಲ್ಲಿ ಧಾರಾಳತನ ಮತ್ತು ತಾಯ್ತನದ ಅನುಕಂಪವನ್ನು ತೋರುತ್ತಿದ್ದಂತೆ ಭಕ್ತರನ್ನು ಪ್ರೀತಿಯಿಂದ ನೋಡಿಕೊಳ್ಳುವುದರಲ್ಲಿ, ತಾಳ್ಮೆಯಿಂದ ಅವರು ಕೊಡುವ ಕಷ್ಟಗಳನ್ನು ಸಹಿಸುವುದರಲ್ಲಿಯೂ ತೋರುತ್ತಿದ್ದರು. ಅವರ ಹಳ್ಳಿಗೆ ಹೋಗಿ ಅವರ ಮನೆಯಲ್ಲಿದ್ದು ಅವರ ಪ್ರೀತಿಯ ಸವಿಯನ್ನು ಒಮ್ಮೆ ನೋಡಿದವರು ತಮ್ಮ ಹೆತ್ತ ತಾಯಿಯೂ ಕೂಡ ಅಷ್ಟು ಮಮತೆಯಿಂದ ಕಾಣುತ್ತಿರಲಿಲ್ಲವೆನ್ನುವರು. ಅವರು ತಮ್ಮ ಪ್ರಿಯ ಶಿಷ್ಯರಿಗೆ ಮಾತ್ರ ಅಷ್ಟು ಪ್ರೀತಿಯನ್ನು ತೋರುತ್ತಿರಲಿಲ್ಲ. ದೇವರ ಹೆಸರಿನಲ್ಲಿ ಯಾರು ಬರಲಿ ಅವರು ಎಂತಹ ತಪ್ಪನ್ನು ಮಾಡಿರಲಿ ಎಲ್ಲರನ್ನೂ ಒಂದೇ ರೀತಿಯಿಂದ ನೋಡುತ್ತಿದ್ದರು. ಕೆಲವುವೇಳೆ ಭಕ್ತರು ಇವರು ಜಯರಾಮವಟಿಯಲ್ಲಿರುವಾಗ ಹೋಗುತ್ತಿದ್ದರು. ತಮಗೆ ದೇಹದಲ್ಲಿ ಆರೋಗ್ಯ ಚೆನ್ನಾಗಿರುವವರೆವಿಗೂ ಇವರೇ ಅವರಿಗೆ ಅಡಿಗೆಮಾಡಿ ಬಡಿಸುತ್ತಿದ್ದರು. ಊಟವಾದಮೇಲೆ ಎಲೆಯನ್ನು ಕೂಡ ಎತ್ತಲು ಅವರಿಗೆ ಅವಕಾಶ ಕೊಡದೆ ತಾವೇ ಆ ಕೆಲಸವನ್ನು ಮಾಡುತ್ತಿದ್ದರು. ಅವರಿಗೆ ಕೈ ತೊಳೆದುಕೊಳ್ಳುವುದಕ್ಕೆ ನೀರು ಕೊಡುತ್ತಿದ್ದರು. ಕುಳಿತುಕೊಂಡಮೇಲೆ ಬೀಸಣಿಗೆಯಿಂದ ಬೀಸುತ್ತಿದ್ದರು. ಒಬ್ಬ ಭಕ್ತನು ಇಂತಹ ಮಾತೆಯಿಂದ ಸೇವೆ ತೆಗೆದುಕೊಳ್ಳಲು ನಾಚಿ ಹಾಗೆ ಮಾಡಬೇಡಿ ಎಂದು ಬೇಡಿಕೊಂಡಾಗ "ನಾನು ನಿನ್ನ ತಾಯಲ್ಲವೆ. ಮಗುವಿನ ಕೆಲಸವನ್ನು ಮಾಡುವುದು ತಾಯಿಯ ಹಕ್ಕು. ಮಗು ಕೊಳೆಯಾಗಿದ್ದರೆ ತೊಳೆಯುವುದು ನನ್ನ ಕೆಲಸ" ಎಂದು ಸುಮ್ಮನಿರಿಸಿದರು.

ಜಯರಾಮವಟಿಯಲ್ಲಿ ಶ್ರೀಶಾರದಾದೇವಿಯವರನ್ನು ನೋಡುವುದಕ್ಕೆ ಅನೇಕವೇಳೆ ಪಟ್ಟಣದಿಂದ ಭಕ್ತರು ಹೋಗುತ್ತಿದ್ದರು. ಅವರಲ್ಲಿ ಬೆಳಗ್ಗೆ ಎದ್ದ ತಕ್ಷಣವೇ ಟೀ, ಕಾಫೀ, ಮುಂತಾದುವನ್ನು ಕುಡಿಯುವ ಅಭ್ಯಾಸವಿದ್ದವರು ಹಲವರು ಇದ್ದರು. ಆ ಹಳ್ಳಿಗಾಡಿನಲ್ಲಿ ಕಾಫಿಕ್ಲಬ್

ಗಳು ಎಲ್ಲಿಂದ ಬರಬೇಕು ? ಆ ಅಮೃತ ಪಾನೀಯದ ಅಭ್ಯಾಸವಿದ್ದವರಿಗೆ ಅದಿಲ್ಲದೆ ಬೆಳಗೇ ಆಗುವುದಿಲ್ಲ! ಇಂತಹವರು ಬಂದಾಗ ಬೆಳಗ್ಗೆ ಅಷ್ಟು ಹೊತ್ತಿಗೇ ಶ್ರೀಶಾರದಾದೇವಿಯವರು ಎದ್ದು ಹಳ್ಳಿಯ ಹತ್ತಿರ ಇರುವ ಕೆಲವು ಮನೆಗಳಿಗೆ ಹೋಗಿ ಹಾಲು ತಂದು, ಇವರು ಏಳುವ ಹೊತ್ತಿಗೆ ಟೀ, ಕಾಫಿ ಮುಂತಾದುವನ್ನು ಅಣಿಮಾಡಿ ಇಡುತ್ತಿದ್ದರು ಇವರನ್ನು ನೋಡಲು ಬಂದ ಭಕ್ತರಲ್ಲಿ ಯಾರಾದರೂ ಖಾಯಿಲೆ ಬಿದ್ದರೆ ತಾಯಿ ಮಗುವಿಗೆ ಶುಶ್ರೂಷೆ ಮಾಡುವಂತೆ ಮಾಡುವರು. ಒಂದು ದಿನ ಭಕ್ತನೊಬ್ಬನಿಗೆ ಕೈಯಲ್ಲಿ ಕಜ್ಜಿ ಎದ್ದಿತು. ಅನ್ನ ಕಲಿಸುವುದಕ್ಕೆ ಆಗುತ್ತಿರಲಿಲ್ಲ. ಇವರೇ ಅನ್ನ ಕಲಿಸಿ ಅವರಿಗೆ ತಿನ್ನಿಸುತ್ತಿದ್ದರು. ಕೆಲವು ವೇಳೆ ಯಾರಾದರೂ ಭಕ್ತರು ಬರುತ್ತಾರೆ ಎಂದು ಕೇಳಿದರೆ ಮನೆಯಲ್ಲಿ ಆ ದಿವಸ ಹೆಚ್ಚಾಗಿ ಮಾಡಿದ ತಿಂಡಿ ಪದಾರ್ಥಗಳನ್ನು ಅವರಿಗಾಗಿ ತೆಗೆದಿಡುತ್ತಿದ್ದರು. ಯಾರು ಅಲ್ಲಿಗೆ ಊಟದ ಸಮಯದಲ್ಲಿ ಹೋಗುತ್ತಾರೊ ಅವರನ್ನು ಊಟವಿಲ್ಲದೆ ಕಳುಹಿಸುತ್ತಿರಲಿಲ್ಲ. ಇದರ ಪರಿಣಾಮವಾಗಿ ಕೆಲವುವೇಳೆ ಅಡಿಗೆ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ಗುಲಾಬ್‌ಮಾ ಇವರಮೇಲೆ ಕೋಪಮಾಡಿಕೊಳ್ಳುತ್ತಿದ್ದರು. ಕಲ್ಕತ್ತೆಯಿಂದ ಬರುವ ಭಕ್ತರು ತಿಂಡಿ ಪದಾರ್ಥಗಳನ್ನು ಇವರಿಗೆ ತರುತ್ತಿದ್ದರು. ಅದರಲ್ಲಿ ಒಂದು ಭಾಗವನ್ನು ಊರಿನ ದೇವಸ್ಥಾನಕ್ಕೆ, ಒಂದು ಭಾಗವನ್ನು ನೆರೆಹೊರೆಯವರಿಗೆ ಉಳಿದುದನ್ನು ಭಕ್ತಾದಿಗಳಿಗೆ ಹಂಚುತ್ತಿದ್ದರೇ ಹೊರತು ಅವರಿಗಾಗಿ ಏನನ್ನೂ ಇಟ್ಟುಕೊಳ್ಳುತ್ತಿರಲಿಲ್ಲ.

ಬಂದ ಭಕ್ತರನ್ನು ಒಂದೆರಡು ದಿನ ಇಟ್ಟುಕೊಂಡೇ ಕಳುಹಿಸುತ್ತಿದ್ದರು. "ಗಯೆ, ಕಾಶಿ, ಮುಂತಾದ ಊರುಗಳಿಗೆ ಹೋಗಬಹುದು. ಆದರೆ ಇಲ್ಲಿಗೆ ಬರುವುದು ಕಷ್ಟ. ಆದರೂ ಇದನ್ನು ಸಹಿಸಿಕೊಂಡು ಬರುತ್ತಾರಲ್ಲ" ಎಂದು ಹೇಳಿ ಅವರನ್ನು ಉಪಚರಿಸದೆ ಕಳುಹಿಸಿಕೊಡುತ್ತಿರಲಿಲ್ಲ. ಭಕ್ತರಿಗೆ ಕೊಡಬೇಕಾದರೆ ಅಲ್ಲಿ ಚೆನ್ನಾದ ತಿಂಡಿಪದಾರ್ಥಗಳು ಇಲ್ಲದೇ ಇರುವುದೇ ಒಂದು ಕೊರತೆಯಾಗಿತ್ತು. ಬಂದ ಭಕ್ತರು ಇವರನ್ನು ಬೀಳ್ಕೊಡುವಾಗ ತಾಯಿ ಮಗುವಿನಿಂದ ಅಗಲುವಂತೆ ವ್ಯಸನಪಡುತ್ತಿದ್ದರು. ಇವರೊಂದಿಗೆ ಮಾತನಾಡುತ್ತ ಸ್ವಲ್ಪ ದೂರ ಹೋಗುವರು. ನಂತರ ಇವರು ಕಣ್ಮರೆಯಾಗುವವರೆವಿಗೂ ಅಲ್ಲಿಯೇ ನಿಂತು ನೋಡಿ ಕಂಬನಿ ತುಂಬಿದ ಕಣ್ಣಿನಿಂದ ಹಿಂತಿರುಗುವರು. ಕಲ್ಕತ್ತೆಯಲ್ಲಿ ಕೆಲವು ವೇಳೆ ಗಂಗಾನದಿಯ ಹತ್ತಿರ ಬಾಡಿಗೆ ಮನೆಯಲ್ಲಿದ್ದಾಗ ಬಂದ ಭಕ್ತರು

ಹಿಂತಿರುಗಿ ಹೋಗುವಾಗ ಮಹಡಿಯಮೇಲೆ ನಿಂತು ಇವರು ಸುರಕ್ಷಿತವಾಗಿ ಗಂಗಾನದಿಯನ್ನು ದಾಟುವವರೆವಿಗೂ ನೋಡುತ್ತಿದ್ದು ನಂತರ ಹಿಂತಿರುಗುವರು.

ದೇವರ ಆಕಾಂಕ್ಷೆ ಇರುವವರು ಮಾತ್ರ ಇವರ ಬಳಿಗೆ ಬರುತ್ತಿರಲಿಲ್ಲ. ಕೆಲವರು ಬಂದು ತಮ್ಮ ದುಃಖದ ಕಥೆಗಳನ್ನು ಹೇಳಿಕೊಳ್ಳುವರು. ಕೆಲವರು ತಮಗೆ ಬಂದ ಕಷ್ಟನಿವಾರಣೆಗಾಗಿ ಇವರ ಆಶೀರ್ವಾದವನ್ನು ಬೇಡುವರು. ಇವರು ಯಾರನ್ನೂ ಧಿಃಕ್ಕರಿಸದೆ ದೇವರ ಆಶೀರ್ವಾದ ಎಲ್ಲರಿಗೂ ಲಭಿಸಲಿ ಎಂದು ಹರಸುತ್ತಿದ್ದರು. ಇದಲ್ಲದೆ ಕೆಲವು ವಕ್ರ ಬುದ್ಧಿಯ ಭಕ್ತರು ಬಂದರೆ ಅವರು ಕೊಡುವ ಕಿರುಕುಳನ್ನು ಸಮಾಧಾನ ದಿಂದ ತಾಳುತ್ತಿದ್ದರು. ಒಂದು ದಿನ ಪೂಜೆಯೆಲ್ಲ ಆದಮೇಲೆ ದೇವರ ಕೋಣೆಯಿಂದ ತಮ್ಮ ಕೋಣೆಗೆ ಹಿಂತಿರುಗುತ್ತಿದ್ದಾಗ ಭಕ್ತನೊಬ್ಬನು ಇವರನ್ನು ಪೂಜಿಸಿ ಇವರ ಮುಂದೆ ಪ್ರಾಣಾಯಾಮಮಾಡಲು ಕೂತನು. ಸ್ವಲ್ಪ ಹೊತ್ತಾದರೂ ಹೋಗಲಿಲ್ಲ. ಶ್ರೀ ಶಾರದಾದೇವಿಯವರಿಗೆ ಕುಳಿತು ಸಾಕಾಯಿತು. ಅಷ್ಟರಲ್ಲಿ ಗುಲಾಬ್‌ಮಾ ಬಂದು ಇವನನ್ನು ನೋಡಿ, "ಏನು ನೀನು ಮರದ ವಿಗ್ರಹದ ಎದುರು ಇರುವೆ ಎಂದು ತಿಳಿದೆಯೇನು? ನಿನ್ನ ಪ್ರಾಣಾಯಾಮದಿಂದ ವಿಗ್ರಹಕ್ಕೆ ಜೀವ ತುಂಬಬೇಕೆಂದಿರುವೆಯ? ಶ್ರೀ ಶಾರದಾದೇವಿಯವರಿಗೆ ಕುಳಿತು ಸಾಕಾಗಿದೆ ಎಂಬ ತಿಳಿವಳಿಕೆ ನಿನಗೆ ಬರಲಿಲ್ಲವೆ?" ಎಂದು ಹೇಳಿಕಳುಹಿಸಬೇಕಾಯಿತು.

ಮತ್ತೊಂದು ದಿನ ಭಕ್ತನೊಬ್ಬನು ಇವರಿಗೆ ನಮಸ್ಕಾರ ಮಾಡಬೇಕೆಂಬ ನೆವದಿಂದ ತನ್ನ ತಲೆಯನ್ನು ಇವರ ಕಾಲಿನ ಬೆರಳಿನಮೇಲೆ ಚೆನ್ನಾಗಿ ಅಮುಕಿದನು. ಇದರಿಂದ ನೋವಾಗಿ ಶ್ರೀ ಶಾರದಾದೇವಿಯವರು ಸ್ವಲ್ಪ ಶಬ್ದಮಾಡಿದರು. ಹತ್ತಿರಿದ್ದವರು ನೀನು ಹಾಗೆ ಏಕೆ ನಮಸ್ಕಾರಮಾಡಿದೆ ಎಂದು ಕೇಳಿದಾಗ, "ಶ್ರೀ ಶಾರದಾದೇವಿಯವರು ನನ್ನನ್ನು ಜ್ಞಾಪಕದಲ್ಲಿಟ್ಟುಕೊಂಡಿರುವಂತೆ ಮಾಡುವದಕ್ಕೆ!" ಎಂದು ಹೇಳಿದನು.

ವಿಚಿತ್ರ ಭಕ್ತರು ಕೊಡುವ ಚಿತ್ರಹಿಂಸೆಯನ್ನೆಲ್ಲಾ ಸಹಿಸಬೇಕಾದರೆ ಎಷ್ಟು ತಾಳ್ಮೆ ಸಹಾನುಭೂತಿ ಇವರಲ್ಲಿ ಇದ್ದುವು ಎಂಬುದು ಗೊತ್ತಾಗುವುದು. ಭಕ್ತರಿಂದ ಇವರಿಗೆ ಏನೂ ಸಿಕ್ಕಬೇಕಾಗಿರಲಿಲ್ಲ. ತಾವು ಸಮಾಜದಲ್ಲಿ ಪ್ರಖ್ಯಾತರಾಗಬೇಕೆಂದಾಗಲೀ ಬಯಸಲಿಲ್ಲ. ಭಕ್ತರು ಇವರಿಗೆ ಮಾಡಿದ ಪೂಜೆಯಾಗಲೀ ಹೊಗಳಿಕೆಯಾಗಲೀ ಇವರ ತಲೆ

ಯನ್ನು ತಿರುಗಿಸಲಿಲ್ಲ. ಈ ವಿಚಾರದಲ್ಲಿ ಇವರು ಶ್ರೀರಾಮಕೃಷ್ಣರ ನಿಜವಾದ ಅನುಯಾಯಿಗಳಾಗಿದ್ದರು. ಭಕ್ತರನ್ನು ಹಣಕಾಸಿನಾಸೆಗಾಗಲೀ, ತಮಗೆ ಅದರಿಂದ ಗೌರವ ಸಿಕ್ಕುತ್ತದೆ ಎಂದಾಗಲೀ ಪ್ರೀತಿಸುತ್ತಿರಲಿಲ್ಲ. ಬಂದವರು ಯೋಗ್ಯರೊ, ಅಲ್ಲವೋ ಎಂಬ ವಿಚಾರವನ್ನು ಮನದಲ್ಲಿಡದೆ, ತಾನು ತಾಯಿ, ಮಕ್ಕಳು ಎಷ್ಟು ಹೀನಸ್ವಭಾವದವರಾದರೂ ಅವರನ್ನು ಪ್ರೀತಿಸಿ ಅವರ ಮೇಲ್ಮೆಗಾಗಿ ದುಡಿಯುವುದು ತಮ್ಮ ಕರ್ತವ್ಯವೆಂದು ತಿಳಿದು ಕೆಲಸಮಾಡುತ್ತಿದ್ದರು.

ಭಕ್ತರಿಗೆ ಹೇಗೆ ಉಪದೇಶವನ್ನು ಕೊಡುತ್ತಿದ್ದರು, ನಂತರ ಹೇಗೆ ಅವರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು, ಎನ್ನುವುದನ್ನು ಈಗ ನೋಡೋಣ. ಈ ಕರ್ತವ್ಯದ ವಿಚಾರದಲ್ಲಿ ಅವರು ಮುಖ್ಯವಾಗಿ ತೋರುತ್ತಿದ್ದ ವಿಷಯವೆಂದರೆ ಹೃದಯ ವೈಶಾಲ್ಯ. ಬಂದವರೆಲ್ಲರಿಗೂ ಶ್ರೀರಾಮಕೃಷ್ಣರ ಇಷ್ಟವನ್ನು ಕೊಡುತ್ತಿರಲಿಲ್ಲ. ಆದರೆ ಎಲ್ಲರೂ ಶ್ರೀರಾಮಕೃಷ್ಣರ ಉದಾತ್ತಜೀವದದ ಆದರ್ಶವನ್ನು ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿತ್ತು. ಉಪದೇಶ ಕೊಡುವುದಕ್ಕೆ ಮುಂಚೆ ಭಕ್ತ ಶೈವನೋ, ಶಾಕ್ತನೋ, ವೈಷ್ಣವನೋ ಮತ್ತು ಇನ್ನುಳಿದ ಯಾವ ಮತಕ್ಕೆ ಸೇರಿದವನು, ಯಾವ ಇಷ್ಟವನ್ನು ಇವನು ಇಚ್ಛಿಸುತ್ತಾನೆ, ಇವೆಲ್ಲವನ್ನೂ ತಿಳಿದಲ್ಲದೆ ಉಪದೇಶ ಕೊಡುತ್ತಿರಲಿಲ್ಲ. ಕೆಲವರಿಗೆ ತಮ್ಮ ಮತ, ಇಷ್ಟದೇವರು ಮುಂತಾದುವುಗಳ ಮೇಲೆ ಅಭಿಮಾನವಿರಲಿಲ್ಲ. ನೀವು ಇಚ್ಛಿಸಿದಂತೆ ಮಾಡಿ ಎಂದು ಎಲ್ಲವನ್ನೂ ಶಾರದಾದೇವಿಯವರಿಗೇ ಬಿಡುತ್ತಿದ್ದರು. ಕೆಲವು ವೇಳೆ ಭಕ್ತನು ತನಗೆ ಯಾವುದು ಇಷ್ಟವೆಂದು ತಿಳಿಸಿದರೂ ಅದರಂತೆ ಉಪದೇಶಕೊಡುತ್ತಿರಲಿಲ್ಲ. ಅನೇಕವೇಳೆ ಭಕ್ತರ ಮನಸ್ಸು ಭಕ್ತರಿಗೇ ತಿಳಿಯುವುದಿಲ್ಲ. ನಮಗೆ ಒಂದು ದಿನ ಒಂದು ದೇವತೆ ಇಷ್ಟವಾಗಬಹುದು. ನಂತರ ಇನ್ನೊಂದು ಇಷ್ಟವಾಗಬಹುದು. ಅದಕ್ಕೋಸ್ಕರವಾಗಿಯೇ ಉಪದೇಶ ಕೊಡುವುದಕ್ಕೆ ಮುಂಚೆ ಧ್ಯಾನಮಾಡುತ್ತಿದ್ದರು. ಆಗ ಯಾವ ಮಂತ್ರ ಶಿಷ್ಯನಿಗೆ ಸರಿಹೋಗಬಹುದೋ ಅದು ಅವರ ಮನಸ್ಸಿನಲ್ಲಿ ಹೊಳೆಯುತ್ತಿತ್ತು. ಅದನ್ನು ಭಕ್ತರಿಗೆ ಉಪದೇಶಮಾಡುತ್ತಿದ್ದರು. ಭಕ್ತರು ಪರಿಶುದ್ಧರಾಗಿ ನಿಜವಾಗಿಯೂ ಆಧ್ಯಾತ್ಮಿಕ ಆಸಕ್ತಿಯಿಂದ ಕೂಡಿದ್ದರೆ ಅವರಿಗೆ ಮಂತ್ರ ಬೇಗನೆ ಮನಸ್ಸಿನಲ್ಲಿ ಹೊಳೆಯುತ್ತಿತ್ತು. ಇಲ್ಲದಿದ್ದರೆ ಸ್ವಲ್ಪ ನಿಧಾನವಾಗಿ ಹೊಳೆಯುತ್ತಿತ್ತು. ಹೀಗೆ ಉಪದೇಶಕೊಡುವಾಗ ಭಕ್ತನ ಭವಿಷ್ಯ ಗೋಚರಿಸುತ್ತಿತ್ತು. ಒಂದು ದಿನ ಶ್ರೀರಾಮಕೃಷ್ಣ ಸಂಘದ

ಹೆಸರುವಾಸಿಯಾದ ಸ್ವಾಮಿಗಳೊಬ್ಬರು ಹಿಂದೆ ತಾವು ಕಾಲೇಜಿನಲ್ಲಿ ಓದು ತ್ತಿದ್ದಾಗ ಇವರ ಹತ್ತಿರ ಉಪದೇಶ ತೆಗೆದುಕೊಳ್ಳುವುದಕ್ಕೆ ಬಂದರು. ಉಪದೇಶ ತೆಗೆದುಕೊಂಡು ಆದಮೇಲೆ ಶಾರದಾದೇವಿಯವರಿಗೆ ಹಣ್ಣಿ ನೊಂದಿಗೆ ಒಂದು ರೂಪಾಯಿ ಗುರುದಕ್ಷಿಣೆಯನ್ನು ಕೊಟ್ಟರು. ಅವರು ಹಣ್ಣನ್ನು ಮಾತ್ರ ತೆಗೆದುಕೊಂಡು ರೂಪಾಯಿಯನ್ನು ಬಿಟ್ಟರು. ಅವರನ್ನು ರೂಪಾಯಿ ಏಕೆ ತೆಗೆದುಕೊಳ್ಳಲಿಲ್ಲವೆಂದು ಕೇಳಿದರೆ, ತಾವು ಸನ್ಯಾಸಿ ಶಿಷ್ಯರಿಂದ ಹಣವನ್ನು ಸ್ವೀಕರಿಸುವುದಿಲ್ಲವೆಂದರು. ತಾನು ವಿದ್ಯಾರ್ಥಿ ಎಂದು ಸನ್ಯಾಸಿಯಲ್ಲವೆಂದು ಎಷ್ಟು ಹೇಳಿದರೂ ಅವರು ಸ್ವೀಕರಿಸಲಿಲ್ಲ. ಕೆಲವು ಕಾಲವಾದಮೇಲೆ ಅವರು ಶ್ರೀರಾಮಕೃಷ್ಣ ಸಂಘಕ್ಕೆ ಸೇರಿದರು.

ಶ್ರೀ ಶಾರದಾದೇವಿಯವರು ಭಕ್ತರಿಗೆ ಉಪದೇಶ ಕೊಟ್ಟಾದ ಮೇಲೆಯೂ ಅವರ ಮತಕ್ಕೆ ಸೇರಿದ ಕುಲಗುರುಗಳಿಗೆ ಹಿಂದೆ ತೋರು ತ್ತಿದ್ದಂತೆ ಗೌರವವನ್ನು ಮತ್ತು ಅವರಿಗೆ ಹಿಂದೆ ಕೊಡುತ್ತಿದ್ದ ಸಂಭಾವನೆ ಯನ್ನೂ ಬಿಡದೆ ಸಲ್ಲಿಸಬೇಕೆಂದು ಹೇಳುತ್ತಿದ್ದರು. ತಾವು ಉಪದೇಶ ಕೊಡುವುದರಿಂದ, ಆಯಾ ಮತಕ್ಕೆ ಸೇರಿದ ಕುಲಗುರುಗಳಿಗೆ ಸಲ್ಲುತ್ತಿದ್ದ ಗೌರವ ವರಮಾನಗಳನ್ನು ತಪ್ಪಿಸಲು ಅವರು ಇಚ್ಛಿಸುತ್ತಿರಲಿಲ್ಲ.

ಕೆಲವು ಸಮಯದಲ್ಲಿ ಅವರ ಮನಸ್ಸಿಗೆ ಭಕ್ತರ ಇಚ್ಛೆ ಅಥವಾ ಅವನು ಹುಟ್ಟಿ ಬೆಳೆದ ಮತದ ಆಚಾರವ್ಯವಹಾರಗಳು, ಅವನ ಆಧ್ಯಾತ್ಮಿಕ ಬೆಳವಣಿಗೆಗೆ ಆತಂಕವೆಂದು ತೋರಿದಾಗ ಬೇರೆ ಮಂತ್ರವನ್ನು ಕೊಡು ತ್ತಿದ್ದರು. ಭಕ್ತನಿಗೂ ಇದರಿಂದ ಮೊದಲು ಅನುಕೂಲ ತೋರಲಿಲ್ಲ. ತಾನು ಬೇರೆ ಮಂತ್ರವನ್ನು ಜಪಿಸಿ ಶಾಂತಿಯನ್ನು ಹೊಂದುತ್ತಿದ್ದೆನೆಂದು ಹೇಳಿದಾಗ, ಅದಕ್ಕಿಂತ ಇದೇ ಉತ್ತಮ, ಕ್ರಮೇಣ ಇದೇ ಸರಿಯಾಗುವು ದೆಂದು ಹೇಳಿ ಕಳುಹಿಸುತ್ತಿದ್ದರು. ಇದೇ ಶಿಷ್ಯರು ಶ್ರೀರಾಮಕೃಷ್ಣ ಸಂಘಕ್ಕೆ ಸೇರಿದ ಪ್ರಮುಖ ಶಿಷ್ಯರೊಬ್ಬರು ಕಾಲವಾದಮೇಲೆ ತೀವ್ರ ವೈರಾಗ್ಯದಿಂದ ಹಲವು ದಿನಗಳು ಹೆಚ್ಚು ಧ್ಯಾನದಲ್ಲಿ ಕಾಲಕಳೆಯುತ್ತಿದ್ದರು. ಇದರ ಪರಿಣಾಮವಾಗಿ ಮಾನಸಿಕ ಶಕ್ತಿ ಕ್ಷೀಣಿಸಿತು. ಧ್ಯಾನಮಾಡಲು ಪ್ರಯತ್ನ ಪಟ್ಟರೆ ಮನಸ್ಸು ಶೂನ್ಯವಾಗುತ್ತಿತ್ತು. ಶ್ರೀರಾಮಕೃಷ್ಣ ಸಂಘಕ್ಕೆ ಸೇರಿದ ಸ್ವಾಮಿಗಳು ಇವರಿಗೆ ಒಳ್ಳೆಯ ಆಹಾರ ಮುಂತಾದುವುಗಳಿಂದ ಶುಶ್ರೂಷೆ ಮಾಡಿದರು. ಆದರೂ ಇದರಿಂದ ಏನೂ ಗುಣವಾಗಲಿಲ್ಲ. ಶ್ರೀ ಶಾರದಾದೇವಿಯರಲ್ಲಿಗೆ ಇವರು ಹೋದಾಗ, "ನೀನು ಹೇಗೆ ಧ್ಯಾನಮಾಡುತ್ತಿ ?" ಎಂದು ಕೇಳಿದರು. ಅವರು ಹೇಳಿದಮೇಲೆ ಸಾಧನೆ

ಯಲ್ಲಿ ಬಹಳ ಮುಂದುವರಿದಮೇಲೆ ಹಾಗೆ ಮಾಡಬೇಕು. ಇಲ್ಲದೇ ಇದ್ದರೆ ಅದರಿಂದ ಅನರ್ಥವಾಗುವುದೆಂದು ಹೇಳಿ ಶಿಷ್ಯನನ್ನು ಸರಿಯಾದ ದಾರಿಯಲ್ಲಿ ಬಿಟ್ಟರು.

ಅವರು ಯಾವ ಒಂದು ಆದರ್ಶವನ್ನು ಬಲಾತ್ಕಾರದಿಂದ ಕೊಡದೇ ಇದ್ದರೂ ಶ್ರೀರಾಮಕೃಷ್ಣರ ಒಂದು ಆಧ್ಯಾತ್ಮಿಕ ಶಕ್ತಿಯ ಕಡಲಿಗೆ ತಮ್ಮ ಮೂಲಕ ಯಾರು ಸಂಬಂಧವನ್ನು ಕಲ್ಪಿಸಿಕೊಳ್ಳುತ್ತಾರೋ ಅವರು ಬೇಗ ಮುಂದುವರಿಯುವರು ಎಂದು ಹೇಳುತ್ತಿದ್ದರು. ಶ್ರೀರಾಮಕೃಷ್ಣರು ಮಾಡಿದ ತಪಸ್ಸೆಲ್ಲ ತಮ್ಮ ಆತ್ಮಕಲ್ಯಾಣಕ್ಕೆ ಮಾತ್ರವಲ್ಲ; ಅದು ಜಗದ ಹಿತಕ್ಕೆ. ಅನೇಕ ಕುಂದುಕೊರತೆಗಳಿಂದ ಕೂಡಿದ ಸಾಧಾರಣ ಮಾನವ ತಾನೇ ಸ್ವತಂತ್ರವಾಗಿ ಸಾಧಿಸಿ ಮಾಯಾತೀತನಾಗಿ ಗುರಿಯನ್ನು ಸೇರು ವುದು ಕಷ್ಟ. ತಮ್ಮ ಅಲ್ಪ ಶಕ್ತಿಯ ಸಹಾಯಕ್ಕೆ ಮಹಾಪುರುಷರೊಬ್ಬರ ಸಹಾಯಬೇಕಾಗುತ್ತದೆ. ಶ್ರೀರಾಮಕೃಷ್ಣರ ತಪಸ್ಸಿನಿಂದ ಕೂಡಿದ ಆಧ್ಯಾತ್ಮಿಕ ಶಕ್ತಿಯಲ್ಲಿ ಸಾಧಕನಿಗೆ ಅತ್ಯಾವಶ್ಯಕವಾದ ಅಂತಹ ಸಹಾಯ ವಿದೆ. ಯಾರು ಅವರನ್ನು ಸಂಪೂರ್ಣ ನಂಬಿ ಪ್ರೀತಿಸಿ ಸೇವಿಸುವರೋ ಅವರು ಅಂತಹ ಸಹಾಯವನ್ನು ಉಪಯೋಗಿಸಿಕೊಂಡು ಜೀವನದಲ್ಲಿ ಮುಂದುವರಿಯಬಹುದು.

ಕೇವಲ ತಮ್ಮ ಇಚ್ಛಾಮಾತ್ರದಿಂದ ಕೆಟ್ಟದಾರಿಯಲ್ಲಿ ಹೋಗುತ್ತಿದ್ದ ಕೆಲವರನ್ನು ಒಳ್ಳೆಯ ದಾರಿಗೆ ಎಳೆದ ಪ್ರಸಂಗಗಳಿವೆ. ಕುಡುಕನನ್ನು ತನ್ನ ದುರಭ್ಯಾಸದಿಂದ ತಪ್ಪಿಸಿದರು. ಒಬ್ಬ ಯುವಕನನ್ನು ಮೋಹಕ್ಕೆ ಸೆಳೆಯಲು ಯತ್ನಿಸುತ್ತಿದ್ದ ಯುವತಿಯ ಮನಸ್ಸನ್ನು ಬದಲಾಯಿಸಿದರು. ಆಧ್ಯಾತ್ಮಿಕ ಜೀವನಕ್ಕೆ ತನ್ನ ಜೀವನವನ್ನೆಲ್ಲ ಧಾರೆಯೆರೆದ ಗಂಡನಮೇಲೆ ಸೇಡು ತೀರಿಸಿಕೊಳ್ಳಲು ಯತ್ನಿಸುತ್ತಿದ್ದ ಸತಿಯನ್ನು ಸಂತೈಸಿ ಉತ್ತಮ ಹಾದಿಗೆ ತಂದರು. ಇನ್ನೂ ಹಲವರನ್ನು ತಮ್ಮ ಸ್ಪರ್ಶದಿಂದ, ಹಾರೈಕೆಯ ಬಲದಿಂದ, ಉತ್ತಮರನ್ನಾಗಿ ಮಾಡಿರುವರು. ಆದರೆ ಅವರು ಅನೇಕ ವೇಳೆ ಹಾಗೆ ಮಾಡುತ್ತಿರಲಿಲ್ಲ. ಒಂದು ಕೆಟ್ಟ ದಾರಿಯಲ್ಲಿ ಹೋಗುತ್ತಿರುವ ವ್ಯಕ್ತಿಯನ್ನು ಬೇರೆ ಕಡೆ ಸೆಳೆಯಬೇಕಾದರೆ ಅದಕ್ಕೆ ಹೆಚ್ಚು ಆಧ್ಯಾತ್ಮಿಕ ಶಕ್ತಿ ವ್ಯಯವಾಗುವುದೆಂದೂ ಅದನ್ನೇ ಉಳಿಸಿಕೊಂಡರೆ ಅನೇಕರಿಗೆ ಅದರಿಂದ ಒಳ್ಳೆಯದನ್ನು ಮಾಡಬಹುದೆಂದೂ ಹೇಳುತ್ತಿದ್ದರು.

ಆಧ್ಯಾತ್ಮಿಕ ಜೀವನದಲ್ಲಿ ಕೆಲವರಿಗೆ ಪ್ರಾಪ್ತವಾಗುವ ದೇವದೇವಿ ಯವರ ದರ್ಶನವೇ ಒಬ್ಬನು ಮುಂದೆ ಹೋಗುತ್ತಿರುವನು ಎಂಬುದಕ್ಕೆ

ಗುರುತಲ್ಲ. ಅದು ಕೆಲವರ ಸ್ವಭಾವಕ್ಕನುಗುಣವಾಗಿ ಬರುವುದು. ಮತ್ತೆ ಕೆಲವರಿಗೆ ಬರದೇ ಇರಬಹುದು. ಇಂತಹ ದರ್ಶನಗಳನ್ನು ಆಶಿಸದೆ ದೇವರನ್ನು ಜ್ಞಾನ ಭಕ್ತಿ ವೈರಾಗ್ಯಗಳನ್ನು ಕೊಡೆಂದು ಪ್ರಾರ್ಥಿಸಿ ಎನ್ನುತ್ತಿದ್ದರು. ಒಂದು ದಿನ ಒಬ್ಬ ಭಕ್ತನು ತಾನು ಇಷ್ಟು ವರುಷಗಳನ್ನು ಧ್ಯಾನ ಜಪಗಳಲ್ಲಿ ಕಳೆದರೂ ಏನೊಂದು ಅನುಭವವೂ ಬರಲಿಲ್ಲವೆಂದು ನಿರಾಶೆಯಿಂದ ಹೇಳಲು, ಶ್ರೀ ಶಾರದಾದೇವಿಯವರು, "ದೇವರನ್ನು ನೋಡಿದೆನೆಂದರೆ, ಏನು ಅವನಿಗೆ ಎರಡು ಕೊಂಬು ಹುಟ್ಟುತ್ತದೆಯೆ? ಇದರಿಂದ ಒಬ್ಬನ ಮನಸ್ಸು ಪರಿಶುದ್ಧವಾಗುವುದು. ಪರಿಶುದ್ಧವಾದ ಮನಸ್ಸಿನಿಂದ ಜ್ಞಾನ ಲಭಿಸುವುದು. ಅದರಿಂದ ಆತ್ಮಸಾಕ್ಷಾತ್ಕಾರವಾಗುವುದು" ಎಂದು ಸಂತೈಸಿದರು.

ಶಿಷ್ಟಾಚಾರ ಪದ್ಧತಿಯನ್ನೇ ಯಾವಾಗಲೂ ಉಪದೇಶಕೊಡುವುದರಲ್ಲಿ ಅನುಸರಿಸುತ್ತಿರಲಿಲ್ಲ. ಸಾಧಾರಣವಾಗಿ ಉಪದೇಶವನ್ನು ಪ್ರಾತಃಕಾಲದ ಪೂಜೆಯಾದಮೇಲೆ ಕೊಡುತ್ತಿದ್ದರು. ಆದರೆ ಕೆಲವು ವೇಳೆ ಎಂತಹ ಸಮಯದಲ್ಲಾದರೂ ಕೊಡುತ್ತಿದ್ದರು. ಒಬ್ಬನಿಗೆ ಸೂತಕದಲ್ಲಿ, ಮತ್ತೊಬ್ಬನಿಗೆ ಹುಲ್ಲು ಮೆದೆಯಮೇಲೆ, ಇನ್ನೊಬ್ಬನಿಗೆ ರೈಲ್ವೆ ನಿಲ್ದಾಣದಲ್ಲಿ, ಒಂದು ಕೊಡೆಯ ನೆರಳಿನಲ್ಲಿ ಮಳೆಯ ನೀರನ್ನೇ ಅಭಿಷೇಕಮಾಡಿ ಕೊಟ್ಟರು. ಯಾವ ಭಕ್ತನಾದರೂ ಉಪದೇಶವನ್ನು ಹೊಂದಲು ಉತ್ಸಾಹಶಾಲಿಯಾಗಿದ್ದರೆ ಅವನ ಕೋರಿಕೆಯನ್ನು ನೆರವೇರಿಸುತ್ತಿದ್ದರು. ಉಪದೇಶವನ್ನು ಅತ್ಯಂತ ಸ್ವಲ್ಪ ಆಚಾರಗಳಿಂದ, ಕೆಲವು ನಿಮಿಷಗಳಲ್ಲಿ ಪೂರೈಸುತ್ತಿದ್ದರು. ಸ್ವಾಮಿ ಶಾರದಾನಂದರು ಅದೇ ಕೆಲಸಕ್ಕೆ ಅರ್ಧ ಘಂಟೆ ತೆಗೆದುಕೊಳುತ್ತಿದ್ದರು. ಏತಕ್ಕೆ ಇವರದು ಮಾತ್ರ ಅಷ್ಟೊಂದು ಹೊತ್ತೆಂದು ಪ್ರಶ್ನೆ ಮಾಡಿದಾಗ, "ಶ್ರೀ ಶಾರದಾದೇವಿಯವರು ಇಚ್ಛೆಪಟ್ಟರೆ ಸಾಕು, ಶ್ರೀರಾಮಕೃಷ್ಣರು ಶಿಷ್ಯರನ್ನು ಸ್ವೀಕರಿಸುತ್ತಾರೆ. ಆದರೆ ಆಶಕ್ತಿ ನನ್ನಲ್ಲಿ ಇಲ್ಲ. ಅದಕ್ಕೋಸ್ಕರವೇ ಉಪದೇಶಕ್ಕೆ ಮುಂಚೆ ಸ್ವಲ್ಪ ಕಾಲವನ್ನು ಧ್ಯಾನದಲ್ಲಿ ಕಳೆಯಬೇಕಾಗುವುದು" ಎಂದರು. ಇದಲ್ಲದೆ ಶ್ರೀರಾಮಕೃಷ್ಣ ಮಹಾಸಂಘಕ್ಕೆ ಸೇರಿದವರಿಗೆ ಬ್ರಹ್ಮಚರ್ಯ ಸನ್ಯಾಸದ ಆದರ್ಶಗಳನ್ನು ಹೇಳಿ, ಹೊಸಬಟ್ಟೆಯನ್ನು ಹರಸಿಕೊಟ್ಟು, ಹೋಮ ಮುಂತಾದವುಗಳನ್ನು ನಂತರ ಮಾಡುವುದಕ್ಕೆ ಶ್ರೀರಾಮಕೃಷ್ಣರ ಶಿಷ್ಯರಾದ ಸ್ವಾಮಿ ಬ್ರಹ್ಮಾನಂದರಲ್ಲಿಗೆ ಕಳುಹಿಸುತ್ತಿದ್ದರು.

ಸನ್ಯಾಸಾಶ್ರಮಕ್ಕೆ ಸೇರಿದವರಲ್ಲಿಯೂ ಗೃಹಸ್ಥರಲ್ಲಿಯೂ ಅನೇಕ

ಜನ ಶಿಷ್ಯರು ಇವರಿಗೆ ಇದ್ದರು. ಒಬ್ಬರನ್ನು ಮೇಲು ಇನ್ನೊಬ್ಬರನ್ನು ಕೀಳು ಎನ್ನದೆ ಇಬ್ಬರೂ ತಮ್ಮ ಆದರ್ಶಗಳಿಗೆ ಸರಿಯಾಗಿ ನಡೆದರೆ ಒಂದೇ ಗುರಿಯನ್ನು ಸೇರುವರು ಎಂದು ಹೇಳುತ್ತಿದ್ದರು. ಮದುವೆಯಾಗಿ ಪಶ್ಚಾತ್ತಾಪ ಪಡುತ್ತಿದ್ದ ಒಬ್ಬ ಗೃಹಸ್ಥನನ್ನು ನೋಡಿ, "ಮದುವೆಯಾದರೇನು? ಜೀವನವನ್ನು ನಡೆಸುವುದಕ್ಕೆ ಆಗುವುದಿಲ್ಲವೆ. ಮನಸ್ಸೇ ಎಲ್ಲಕ್ಕೂ ಕಾರಣ. ಶ್ರೀರಾಮಕೃಷ್ಣರು ನನ್ನನ್ನು ಮದುವೆಯಾಗಲಿಲ್ಲವೆ?" ಎಂದು ಸಂತೈಸಿದರು. ಮತ್ತೆ ಕೆಲವು ವೇಳೆ ಕೆಲವರಿಗೆ ಗೃಹಸ್ಥಾಶ್ರಮ ಅವರ ಆತ್ಮವಿಕಾಸಕ್ಕೆ ಅತ್ಯವಶ್ಯಕವೆಂದು ಕಂಡುಬಂದಾಗ ಸ್ವಲ್ಪ ಹಾಸ್ಯವಾಗಿ "ಪ್ರಪಂಚದಲ್ಲಿ ಎಲ್ಲ ಜೊತೆಯಲ್ಲಿರುವುದು ಕಾಣುವುದಿಲ್ಲವೆ. ಎರಡು ಕಣ್ಣು, ಎರಡು ಕಿವಿ, ಎರಡು ಕಾಲು, ಎರಡು ಕೈಗಳು. ಅದರಂತೆಯೆ ಗಂಡು ಮತ್ತು ಹೆಣ್ಣು ಒಂದು ಜೋಡಿ. ಬಂಧನ ಮುಕ್ತಿಗಳೆಲ್ಲ ಮನಸ್ಸಿನಲ್ಲಿದೆ. ಶ್ರೀರಾಮಕೃಷ್ಣರು ನನ್ನನ್ನು ಮದುವೆಮಾಡಿಕೊಳ್ಳಲಿಲ್ಲವೆ?" ಎಂದರು.

ಇದರಿಂದ ಶ್ರೀ ಶಾರದಾದೇವಿಯವರು ಸನ್ಯಾಸಾಶ್ರಮಕ್ಕಿಂತ ಗೃಹಸ್ಥಾಶ್ರಮ ಉತ್ತಮವೆಂದು ಹೇಳುತ್ತಾರೆಂದು ತಿಳಿಯಕೂಡದು. ಅವರು ಒಬ್ಬರ ಮನಸ್ಸಿನ ರೀತಿಯನ್ನು ನೋಡಿ ಯಾರುಯಾರಿಗೆ ಯಾವುದು ಒಳ್ಳೆಯದೋ ಅದನ್ನು ಹೇಳುತ್ತಿದ್ದರು. ಅಂದರೆ ಒಂದೇ ಮಾರ್ಗ ಎಲ್ಲರಿಗೂ ಒಳ್ಳೆಯದು ಎಂದು ಹೇಳುತ್ತಿರಲಿಲ್ಲ. ಒಬ್ಬ ಭಕ್ತನು ನಾನು ಸನ್ಯಾಸಿಯಾಗುತ್ತೇನೆ. ತಾವು ಆಶೀರ್ವಾದ ಮಾಡಬೇಕೆಂದು ಕೇಳಿದಾಗ ಅವನನ್ನು ಪರೀಕ್ಷಿಸಲು, "ಗೃಹಸ್ಥನಾಗಿಯೇ ಮೋಕ್ಷವನ್ನು ಗಳಿಸಬಹುದು. ಬಟ್ಟೆ ಬದಲಾಯಿಸಿದ ಮಾತ್ರಕ್ಕೆ ಬಂದಿತೆ?" ಎಂದರು. ಆದರೆ ಶಿಷ್ಯನ ಮನಸ್ಸು ಗಟ್ಟಿಮಾಡಿ ಬಂದಿರುವನೆಂದು ತಿಳಿದಮೇಲೆ, "ಪ್ರಾಪಂಚಿಕ ಜೀವನದಲ್ಲಿ ಏನು ಇದೆ? ಆದರೂ ಜನರಿಗೆ ಎಷ್ಟು ಆಸಕ್ತಿ ನೋಡು! ಹೇಗೆ ಸಂಸಾರವೆಲ್ಲಾ ಒಂದರಿಂದ ಹುಟ್ಟುವುದು. ನಂತರ ಅವನ ಮನಸ್ಸೆಲ್ಲ ಇವುಗಳಮೇಲೆ ಚದುರಿ ಹೋಗುವುದು. ಇಂತಹ ವಾತಾವರಣದಲ್ಲಿ ಇರುವವನಿಗೆ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯುವುದು ಸುಲಭವೇ? ನೀನು ನಳ್ಳಿಯನ್ನು ನೋಡಿಲ್ಲವೆ. ತಾಯಿ ನಳ್ಳಿ ಗೂಡಿನಿಂದ ಹೊರಗೆ ಬರುವಾಗ ಅದನ್ನು ನೋಡುತ್ತಲೇ ಬರುವುದು. ತನ್ನ ಮರಿಗಳೆಲ್ಲ ಆ ಗೂಡಿನಲ್ಲಿ ಇರುವುದು. ಅವುಗಳಿಂದ ಬಿಟ್ಟುಬರಬೇಕೆಂದು ಎಷ್ಟು ಪ್ರಯತ್ನಿಸಿದರೂ ಗೆಲ್ಲುವುದಿಲ್ಲ. ಮರಿಗಳ ಮೇಲಿರುವ ಮೋಹವೇ

ತಾನು ಇಚ್ಛಿಸದೇ ಇದ್ದರೂ ಇದನ್ನು ಗೂಡಿನ ಒಳಕ್ಕೆ ಎಳೆದುಕೊಂಡು ಹೋಗುವುದು. ಹಾಗೆಯೇ ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತರಾದ ಮಾನವರು ತಾವು ಅದರಿಂದ ಬೇರೆಯಾಗಲು ಎಷ್ಟು ಯತ್ನಪಟ್ಟರೂ ಅದರ ಮೋಹ ಪುನಃ ಅವರನ್ನು ಅಲ್ಲಿಗೇ ಸೆಳೆಯುವುದು."

ಕೆಲವು ವೇಳೆ ಸ್ತ್ರೀಯರಿಗೂ ಇಂತಹ ಬ್ರಹ್ಮಚರ್ಯವ್ರತ ಆವಶ್ಯಕವೆಂದು ಹೇಳುತ್ತಿದ್ದರು. ಯಾರಾದರೂ ಹಾಗೆ ಬ್ರಹ್ಮಚರ್ಯವ್ರತವನ್ನು ಧಾರಣೆಮಾಡಲು ಸಂಕಲ್ಪಿಸಿದ್ದರೆ ಅವರನ್ನು ಮದುವೆಯಾಗೆಂದು ಬಲಾತ್ಕರಿಸದೆ ಅವರಿಗೆ ಇಚ್ಛೆತೋರಿದ ರೀತಿಯಲ್ಲಿ ಇರಲು ಅನುಮತಿ ಕೊಡುತ್ತಿದ್ದರು. ಒಬ್ಬ ಗೃಹಿಣೀ ಭಕ್ತಳು ಶ್ರೀ ಶಾರದಾದೇವಿಯರಲ್ಲಿಗೆ ಬಂದು, ತನ್ನ ಮಗಳಿಗೆ ಮದುವೆಯಾಗು ಎಂದು ಬುದ್ಧಿ ಹೇಳಿ ಎಂದಳು. ಅದಕ್ಕೆ ಅವರು,"ನಮ್ಮ ಜೀವವಿರುವವರೆಗೂ ಮತ್ತೊಬ್ಬನ ಆಳಾಗಿ ಅವನು ಹೇಳಿದಂತೆ ಕೇಳುತ್ತಾ ಇರುವುದು ಸಂಕಟವಲ್ಲವೆ? ಮದುವೆಯಾಗದೆ ಇರುವುದರಿಂದ ಕೆಲವು ವೇಳೆ ಅಪಾಯವುಂಟು. ಆದರೂ ಇಚ್ಛೆ ಇಲ್ಲದಿರುವವರಿಗೆ ಮದುವೆಯಾಗೆಂದು ಬಲಾತ್ಕರಿಸುವುದು ಸರಿಯಲ್ಲ" ಎಂದರು.

ಗೃಹಸ್ಥ ಮತ್ತು ಸನ್ಯಾಸ ಆಶ್ರಮಗಳೆರಡು ಒಳ್ಳೆಯದು. ಎರಡೂ ಒಂದೇ ಗುರಿಯೆಡೆಗೆ ನಮ್ಮನ್ನು ಕರೆದುಕ್ಕೊಂಡು ಹೋಗುತ್ತದೆ ಎಂದು ಹೇಳುತ್ತಿದ್ದರೂ ಕೂಡ, ಗೃಹಸ್ಥರು ಸನ್ಯಾಸಿಗಳಿಗೆ ಮರ್ಯಾದೆ ಮಾಡಬೇಕೆಂದು ಹೇಳುತ್ತಿದ್ದರು. ತಾವೇ ಸನ್ಯಾಸಿಗಳಿಗೆ ಗೌರವವನ್ನು ಕೊಡುತ್ತಿದ್ದರು. ಅವರೆದುರಿಗೆ ಗೃಹಸ್ಥರು ಸನ್ಯಾಸಿಗಳನ್ನು ಅಗೌರವದಿಂದ ಕಂಡರೆ ಅವರಿಗೆ ಬುದ್ಧಿ ಹೇಳುತ್ತಿದ್ದರು.



## ೧೭. ಶೀಲಪರಿಚಯ

ಶ್ರೀ ಶಾರದಾದೇವಿಯವರು ಸಾಧಾರಣ ಹೆಂಗಸಿನ ಎತ್ತರ ಇದ್ದರು. ಶ್ರೀಮಂತರ ಮನೆಯ ಹೆಂಗಸಿನಂತೆ ಆಲಸ್ಯ ಜೀವನದಲ್ಲಿ ಕಾಲಕಳೆಯದೆ ಬಡತನದ ಮನೆಯಲ್ಲಿದ್ದು ಕಷ್ಟಪಟ್ಟು ಕೆಲಸಮಾಡುತ್ತಿದ್ದ ಕಾರಣ ದೇಹ ದಾರ್ಢ್ಯ ಇವರಿಗಿತ್ತು. ಭಕ್ತರು ಇವರನ್ನು ತಾಯಿ ಎಂದು ಉಪಚರಿಸುತ್ತ ದೇವಿಯ ಪೀಠದಲ್ಲಿಟ್ಟು ಪೂಜಿಸಿದರೂ ಇವರು ಮಾತ್ರ ತಾವು ಮಾಡುವ ಕೆಲಸವನ್ನು ಬಿಡುತ್ತಿರಲಿಲ್ಲ. ಮನೆ ತೊಳೆಯುವರು, ಮುಸುರೆ ಉಜ್ಜು ವರು, ನೀರು ಸೆಳೆಯುವರು, ಭತ್ತ ಕುಟ್ಟುವರು, ಅಡಿಗೆಮಾಡಿ ಬಂದವರಿ ಗೆಲ್ಲಾ ಬಡಿಸಿ ಅನಂತರ ಇವರು ಊಟಕ್ಕೆ ಕೂಡುತ್ತಿದ್ದರು. ಇವರು ಕಲ್ಕತ್ತೆಯಲ್ಲಿದ್ದಾಗ ವಯಸ್ಸಾಗುತ್ತ ಬರಲು ಅವರನ್ನು ಎಲ್ಲರೊಂದಿಗೆ ಊಟಕ್ಕೆ ಕುಳಿತುಕೊಳ್ಳುವಂತೆ ಬೇಡಿಕೊಂಡಾಗ ಬಲವಂತಕ್ಕೆ ಒಪ್ಪಿ ಕೊಳ್ಳಬೇಕಾಯಿತು. ಆದರೂ ಎಲ್ಲರೂ ಕುಳಿತುಕೊಂಡಿರುವರೋ ಎಂದು ನೋಡಿ ಕೊನೆಗೆ ಇವರು ಬಂದು ಊಟಕ್ಕೆ ಕುಳಿತುಕೊಳ್ಳುತ್ತಿದ್ದರು. ಇವರು ಮನೆ ಕೆಲಸದಲ್ಲಿ ಪರಿಚಾರಕರಂತೆ ದುಡಿಯುತ್ತಿದ್ದರೂ ರಾಣಿಯ ಠೀವಿ ಇವರ ನಡೆನುಡಿಯಲ್ಲಿತ್ತು. ಮಧ್ಯವಯಸ್ಸಿನಲ್ಲಿ ಅನೇಕ ಹೆಂಗಸರಂತೆಯೇ ಇವರೂ ಕೊಂಡ ಸ್ಥೂಲವಾಗಿದ್ದರೂ ಕ್ರಮೇಣ ಹಿಂದಿನ ಸ್ಥಿತಿಗೆ ಬಂದರು. ತಮ್ಮ ಪ್ರಾಯದಲ್ಲಿ ನೋಡಲು ಸುಂದರವಾಗಿ ಕಾಣುತ್ತಿದ್ದರು. ಹತ್ತಿರ ಇದ್ದ ಭಕ್ತರೊಬ್ಬರು ಇಂತಹ ಸೌಂದರ್ಯ ಎಲ್ಲಿಂದ ಬಂದಿತೆಂದು ಆಶ್ಚರ್ಯ ಪಟ್ಟರು. ಆದರೆ ವಯಸ್ಸಾದಂತೆಲ್ಲಾ ದೇಹ ಬದಲಾವಣೆಯ ಚಕ್ರಕ್ಕೆ ಸಿಕ್ಕಿ ಬಾಡತೊಡಗಿತು. ಇವರ ಅನಂತರ ವಯಸ್ಸಿನಲ್ಲಿ ಹಿಂದೆ ಇದ್ದ ಸೌಂದರ್ಯವಿಲ್ಲದಿದ್ದರೂ ಆಂತರಿಕ ಜ್ಯೋತಿಯ ಸೌಂದರ್ಯವೊಂದು ಅವರ ಪ್ರತಿಯೊಂದು ನಡೆನುಡಿಯಲ್ಲೂ ಕಾಣುತ್ತಿತ್ತು. ಇವರನ್ನು ನೋಡಿದವರಿಗೆ ತಮ್ಮ ಪ್ರಯತ್ನವಿಲ್ಲದೆಯೇ ಒಂದು ಗೌರವ ಬುದ್ಧಿ ಇವರ ಮೇಲೆ ಹುಟ್ಟುತ್ತಿತ್ತು. ಇವರು ನೋಡುವುದಕ್ಕೆ ಒಬ್ಬ ಸಾಧಾರಣ ಸ್ತ್ರೀಯಂತೆ ಕಾಣುತ್ತಿದ್ದರು. ಹತ್ತಿರ ಹೋಗಿ ಇವರ ಸಂಗಡ ಮಾತನಾಡಿ ದಲ್ಲದೆ ಇವರ ಹಿರಿಮೆ ಗೊತ್ತಾಗುತ್ತಿರಲಿಲ್ಲ. ಉಡುಗೆ ತೊಡಿಗೆಯಲ್ಲಿ ಬಹಳ ನಮ್ರರಾಗಿದ್ದರು. ಒಮ್ಮೆ ಕೆಲವು ಭಕ್ತರೊಂದಿಗೆ ಕಾಶಿಗೆ ಹೋಗಿದ್ದರು. ಅಲ್ಲಿ ಒಬ್ಬ ಮಹಿಳೆ ಶ್ರೀ ಶಾರದಾದೇವಿಯವರನ್ನು ದರ್ಶನ ಮಾಡಬೇಕೆಂದು ಇವರ ಕೋಣೆಗೆ ಹೋಗಿ ಠೀವಿಯಿಂದ ಇದ್ದ ಗುಲಾಬ್‌ಮಾ ಎಂಬಾಕೆಯೇ ಇವರಿರಬಹುದೆಂದು ಅವರಿಗೆ ನಮಸ್ಕಾರ

ಮಾಡಿದರು. ಆಕೆ ಯಾರನ್ನು ನೋಡಲು ಬಂದಿರುವಿರೆಂದು ಪ್ರಶ್ನೆಮಾಡಿ ಅದೇ ಕೋಣೆಯಲ್ಲಿ ಒಂದು ಕಡೆ ಏನೂ ತಿಳಿಯದಂತೆ ಕುಳಿತುಕೊಂಡಿದ್ದ ಶಾರದಾದೇವಿಯವರ ಕಡೆ ತೋರಿಸಿ, ಅಲ್ಲಿಗೆ ಹೋಗಿ ಎಂದರು. ಆಕೆ ಅಲ್ಲಿಗೆ ಹೋದಾಗ ಶ್ರೀ ಶಾರದಾದೇವಿಯವರು ಸ್ವಲ್ಪ ಹಾಸ್ಯಮಾಡ ಬೇಕೆಂದು, "ಇಲ್ಲ ಆಕೆಯೇ ಶಾರದಾದೇವಿ ಅಲ್ಲಿಗೆ, ಹೋಗು" ಎಂದು ಕಳುಹಿಸಿದರು. ಗುಲಾಬ್‌ಮಾ ಇದನ್ನು ನೋಡಿ, ನಿನಗೆ ನನ್ನಂತಹ ಮಾನವ ವ್ಯಕ್ತಿಯನ್ನು ಆಕೆಯಂತಹ ದೈವಿವ್ಯಕ್ತಿಯನ್ನು ಬೇರ್ಪಡಿಸಲು ಗೊತ್ತಿಲ್ಲವೆಂದೂ, ಇವರೇ ಅವರೆಂದೂ ಹೇಳಿ ಶ್ರೀ ಶಾರದಾದೇವಿ ಯವರಲ್ಲಿಗೆ ಕರೆದುಕೊಂಡು ಹೋದರು.

ಶ್ರೀ ಶಾರದಾದೇವಿಯವರಲ್ಲಿ ಕಾಣುತ್ತಿದ್ದ ಅತ್ಯಂತ ಹಿರಿಯ ಗುಣವೇ ಅವರ ತಾಯೊಲವು. ಸಾಧಾರಣ ಹೆಂಗಸಿನಂತೆ ಕಾಮಪಾಶಕ್ಕೆ ಸಿಲುಕಿ ನವಮಾಸಗಳು ಹೊತ್ತು ಬೇನೆ ತಿಂದು, ಹೆತ್ತು, ಇವರು ತಾಯ್ತನ ವನ್ನು ಸಂಪಾದಿಸಬೇಕಾಗಿರಲಿಲ್ಲ. ಆಧ್ಯಾತ್ಮಿಕ ಜೀವನದ ದೃಷ್ಟಿ ಯಿಂದಲೇ ಇದನ್ನು ಕಲಿತರು. ಎಂತಹ ಪಾಪಿಗಳಾಗಲಿ, ನೀಚರಾಗಲಿ, ಅಜ್ಞಾನಿಗಳಾಗಲೀ ಇವರ ತಾಯ ಪ್ರೇಮಕ್ಕೆ ಬಾಹಿರರಾಗಿರಲಿಲ್ಲ. ಅವರ ಸಮೀಪಕ್ಕೆ ಹೋದರೆ ಎಲ್ಲರಿಗೂ ಒಂದು ಸಲಿಗೆ ಅವರಲ್ಲಿ ಬರುವುದು. ತಾವೊಂದು ಪೂಜ್ಯತಮವ್ಯಕ್ತಿಯ ಹತ್ತಿರ ಇರುವೆವೆಂಬ ಭಾವನೆ ಬರು ತ್ತಿತ್ತು. ಅನೇಕರು ಪ್ರಶ್ನೆಗಳನ್ನು ಕೇಳಬೇಕೆಂದು ಅವರ ಹತ್ತಿರ ಹೋಗುತ್ತಿದ್ದರು. ಅವರ ಹತ್ತಿರ ಹೋಗುತ್ತಲೇ ಇವರಿಂದ ಬರುವ ಶಾಂತಿ ವಾತಾವರಣದಲ್ಲಿ ಪ್ರಶ್ನೆಗಳಾವುವೂ ನಿಲ್ಲದೆ ಮಾಯವಾಗುತ್ತಿದ್ದವು. ಆಧ್ಯಾತ್ಮಿಕ ಜೀವನವೆಂಬುದು ಸುಲಭಸಾಧ್ಯವಲ್ಲ. ಅನೇಕವೇಳೆ, ಅಪ ನಂಬಿಕೆ, ನಿರಾಶೆ ನಿಶ್ಯಕ್ತಿಗಳ ಮೋಡಗಳು ಬಂದು ಸಾಧಕನನ್ನು ಮುತ್ತು ವುವು. ಆಗ ಅವನು ದಿಕ್ಕೆಟ್ಟಂತೆ ಕಂಗಾಲಾಗುವನು. ಅನುಮಾನದಲ್ಲಿ ಅಪನಂಬಿಕೆಯಲ್ಲಿ ತೊಳಲುತ್ತಿರುವವರಿಗೆ ಪುನಃ ನಂಬಿಕೆಯ ಧೃವತಾರೆ ಇವರ ಕಣ್ಣಮುಂದೆ ಕಾಣುವಂತೆ ಮಾಡುತ್ತಿದ್ದರು. ತನ್ನ ಹೀನ ಪೂರ್ವ ಸಂಸ್ಕಾರಗಳೊಂದಿಗೆ ಕಾದಾಡಿ ಕಾದಾಡಿ ಬೇಸತ್ತು ಶಕ್ತಿಹೀನನೆಂದು ತಿಳಿದಾಗ ಅವನಿಗೆ ತಮ್ಮ ಆಶೀರ್ವಾದದಿಂದ ಶಕ್ತಿಸಂಜೀವಿನಿಯನ್ನು ಕೊಡುತ್ತಿದ್ದರು. ಎಷ್ಟು ಹೋರಾಡಿದರೂ, ಗುರಿಸೇರಲಿಲ್ಲ. ಗುರಿ ಎಂಬುದೇ ಇದೆಯೊ, ಇಲ್ಲವೊ, ಅಥವಾ ಎಲ್ಲ ನಮ್ಮ ಭ್ರಾಂತಿಯೋ! ಎಂಬ ನಿರಾಶೆ ತಲೆದೋರಿದಾಗ ಅದನ್ನು ಕಿತ್ತು ಆಚೆ ಬಿಸುಟು ಮುಂದು

ಪರಿಯುವಂತೆ ಪ್ರೇರೇಪಿಸುವ ಒಂದು ಉತ್ತೇಜನ ಶಕ್ತಿ ಅವರ ಉಪದೇಶದ ವಾಣಿಯಲ್ಲಿತ್ತು.

ಎಂತಹ ಜೀವನವನ್ನು ಅವನು ನಡೆಸಿರಲಿ ಅವನನ್ನು ಕರುಣೆಯಿಂದ ನೋಡಿ ಮೇಲೆತ್ತಲು ಪ್ರಯತ್ನಿಸುತ್ತಿದ್ದರು. ಯಾರು ಅದಕ್ಕೆ ಪ್ರತಿ ಏನು ಹೇಳಿದರೂ ಕೇಳುತ್ತಿರಲಿಲ್ಲ. ಒಬ್ಬ ಭಕ್ತನು ಒಮ್ಮೆ ಏನೋ ಕೆಟ್ಟ ಕೆಲಸಮಾಡಿದ್ದನು. ಆತನನ್ನು ತಮ್ಮ ಎದುರಿಗೆ ಸೇರಿಸಬೇಡಿ ಎಂದು ಯಾರೋ ಹಿರಿಯರು ಹೇಳಿದರು. ಆಗ ಶ್ರೀ ಶಾರದಾದೇವಿಯವರು "ನನ್ನ ಮಗು ಕೆಸರಿನಲ್ಲಿ ಬಿದ್ದು ಮೈಯನ್ನು ಕೊಳೆ ಮಾಡಿಕೊಂಡರೆ ಅದನ್ನು ಮೇಲೆತ್ತಿ ಕೆಸರನ್ನು ತೊಳೆದು ಪ್ರೀತಿಸುವುದು ನನ್ನ ಕರ್ತವ್ಯ ವಲ್ಲವೆ!" ಎಂದರು. ಮತ್ತೊಮ್ಮೆ ದುಷ್ಟವೃತ್ತಿಗೆ ಒಳಗಾದ ಮಹಿಳೆ ಯೊಬ್ಬಳು ಬಂದು ಇವರ ಬಾಗಿಲಿನ ಹತ್ತಿರ ಅಳುತ್ತ ಕುಳಿತುಕೊಂಡಿದ್ದಳು. ಆಕೆಯನ್ನು ಕರೆದು ಆಕೆಯ ಜೀವನದ ಕಥೆಯನ್ನೆಲ್ಲ ಸಾವಧಾನದಿಂದ ಕೇಳಿ, "ನೀನು ಯಾತಕ್ಕೆ ಅಳುವೆ. ಕಣ್ಣೀರಿನ ಗಂಗೆಯಿಂದ ನೀನು ಪಾವನಳಾದೆ. ಹೋಗಿ ಗುರುದೇವನಿಗೆ ನಮಸ್ಕರಿಸು. ನಂತರ ಉಪದೇಶ ಕೊಡುತ್ತೇನೆ" ಎಂದರು. ಹತ್ತಿರಿದ್ದ ಶಿಷ್ಯರೊಬ್ಬರು, "ಅಂತಹವರಿಗೆ ನೀವು ಉಪದೇಶ ಕೊಡಲು ಮೊದಲು ಮಾಡಿದರಲ್ಲ!" ಎಂದಾಗ, "ಶ್ರೀರಾಮಕೃಷ್ಣರು ಬಂದುದು ಸಜ್ಜನರ ಉದ್ಧಾರಕ್ಕೆ ಮಾತ್ರವಲ್ಲ. ಅವರಿಗೆ ಮತ್ತೊಬ್ಬರಿಂದ ಅಷ್ಟು ಉಪಕಾರ ಬೇಕಿಲ್ಲ! ಹೊರಲಾರದ ಪಾಪದ ಹೊರೆಯನ್ನು ಹೊತ್ತು ತೊಳಲಿ ಗತಿಗೆಟ್ಟಿರುವವರ ಸಹಾಯಕ್ಕೆ ಅವತಾರಪುರುಷರು ಬರುವುದು" ಎಂದರು.

ಇನ್ನೊಬ್ಬರಲ್ಲಿ ಎಂತಹ ತಪ್ಪು ಇದ್ದರೂ ಅದನ್ನು ಗಣನೆಗೆ ತರುತ್ತಿರ ಲಿಲ್ಲ. ಅದು ತಮ್ಮ ಶೀಲದಲ್ಲಿ ಮಹಾಕಳಂಕವೆಂದು ತಿಳಿದು ತಾವು ಬೃಂದಾವನಕ್ಕೆ ಹೋದಾಗ ಶ್ರೀಕೃಷ್ಣನ ಅಡಿದಾವರೆಯಲ್ಲಿ ತಮ್ಮಲ್ಲಿ ಇನ್ನೊಬ್ಬರ ತಪ್ಪು ಕಂಡುಹಿಡಿಯುವ ಕೆಟ್ಟಚಾಳಿಯನ್ನು ಕೊನೆಗಾಣಿಸು ಎಂದು ಬೇಡಿದರು. ಅವರ ಪ್ರಾರ್ಥನೆ ಸಂಪೂರ್ಣ ಫಲಿಸಿತು ಎಂಬುದಕ್ಕೆ ಅವರ ಭವಿಷ್ಯ ಜೀವನವೇ ಸಾಕ್ಷಿ. ಅವರು ಒಮ್ಮೆ ಕಲ್ಕತ್ತೆಯ ಮನೆ ಯಲ್ಲಿದ್ದಾಗ ಪರಿಚಾರಕಳು ಏನೋ ತಪ್ಪು ಮಾಡಿದಳು. ಗುಲಾಬ್‌ಮಾ ಆಕೆಯನ್ನು ನಿಂದಿಸುತ್ತಿದ್ದಳು. ಇದಕ್ಕೆ ಕಾರಣವೇನೆಂದು ಶ್ರೀ ಶಾರದಾ ದೇವಿಯವರು ಕೇಳಿದಾಗ, "ನಿಮಗೆ ಕಾರಣ ಹೇಳಿ ಪ್ರಯೋಜನವೇನು? ಯಾರು ಏನು ತಪ್ಪು ಮಾಡಿದರೂ ನೀವು ನೋಡುವ ಹಾಗಿಲ್ಲ" ಎಂದು

ಅಸಮಾಧಾನಪಟ್ಟರು. ಅದಕ್ಕೆ ಅವರು, "ಗುಲಾಬ್, ಪ್ರಪಂಚದಲ್ಲಿ ಸದಾ ಇನ್ನೊಬ್ಬರ ತಪ್ಪನ್ನು ನೋಡಲು ಕಾತುರರಾಗಿರುವ ಜನಗಳಿಗೆ ಬರಗಾಲವಿಲ್ಲ. ನಾನು ಹಾಗೆ ನೋಡದೇ ಇದ್ದರೆ ಪ್ರಪಂಚವೇನೂ ನನಗೋಸ್ಕರ ನಿಂತು ಬಿಡುವುದಿಲ್ಲ" ಎಂದರು.

ಇವರ ಭಕ್ತರು ಮತ್ತು ಹತ್ತಿರದ ಬಂಧುವರ್ಗದವರು ಮಾತ್ರವೇ ಇವರ ಕರುಣೆಗೆ ಪಾತ್ರರಾಗಿರಲಿಲ್ಲ. ಕಷ್ಟದಲ್ಲಿ ಯಾರು ಸಿಕ್ಕಿರಲಿ ಅವರು ತಮ್ಮ ಜಾತಿಯವರಾಗಲೀ ಅಲ್ಲದೇ ಇರಲಿ, ಎಲ್ಲರಿಗೂ ಇವರ ಹೃದಯ ಮರುಗುತ್ತಿತ್ತು. ಯಾರೂ ಇವರನ್ನು ಬೇಡಿ ನಿರಾಶರಾಗಿ ಹಿಂತಿರುಗಲಿಲ್ಲ. ಜಯರಾಮವಟಿಯಲ್ಲಿ ಭವಾನಿಯತಾಯಿ ಎಂಬ ದಿಕ್ಕಿಲ್ಲದ ಮುದುಕಿ ಇದ್ದಳು. ಅವಳ ಮೇಲೆ ಮರುಕ ತಾಳಿ, ತಮ್ಮ ಬಳಿಯಲ್ಲಿಯೇ ಅವಳನ್ನು ಕಾಲವಾಗುವವರೆಗೂ ಇಟ್ಟುಕೊಂಡಿದ್ದರು. ಅದೇ ಹಳ್ಳಿಯಲ್ಲಿ ಬೆನರ್ಜಿ ಮನೆಗೆ ಸೇರಿದ ಒಬ್ಬ ಮಹಿಳೆ ಇದ್ದಳು. ಅವಳಿಗೆ ಕಿವಿಯಲ್ಲಿ ಒಂದು ವ್ರಣವಾಗಿ ಹತ್ತಿರದ ನಂಟರೂ ಕೂಡ ಜಿಗುಪ್ಸೆ ತಾಳಿ ಕೈಬಿಟ್ಟರು. ಇದು ಇವರಿಗೆ ತಿಳಿದು, ಅವಳನ್ನು ಚಿಕಿತ್ಸೆಗಾಗಿ ಕಳುಹಿಸಿದರು.

ಶ್ರೀರಾಮಕೃಷ್ಣ ಸಂಘದವರು ಬರಗಾಲ ಪ್ರವಾಹ, ಬೆಂಕಿ, ಬಿರುಗಾಳಿಗೆ ತುತ್ತಾಗಿ ಕಷ್ಟಪಡುವ ಜನರಿಗೆ ಉಪಕಾರಕ್ಕೆಂದು ತೆರೆಯುತ್ತಿದ್ದ ಸಂಸ್ಥೆಗಳನ್ನು ತುಂಬ ಆಸಕ್ತಿಯಿಂದ ವಿಚಾರಿಸುತ್ತಿದ್ದರು. ತಮ್ಮ ಹತ್ತಿರ ಬರುವ ಶಿಷ್ಯರಿಗೆ ಅಂತಹ ಸಾರ್ವಜನಿಕ ಉಪಕಾರಾರ್ಥವಾದ ಕೆಲಸಗಳನ್ನು ಮಾಡಬೇಕೆಂದು ಉತ್ತೇಜನ ಕೊಡುತ್ತಿದ್ದರು. ಕೆಲಸ ಪೂರೈಸಿಕೊಂಡು ಬಂದಮೇಲೆ ಅವರಿಂದ ಜನರ ಕಷ್ಟದ ಕಥೆಗಳನ್ನು ಕೇಳಿ ನಿಟ್ಟುಸಿರು ಬಿಡುತ್ತಿದ್ದರು. ಸ್ವಲ್ಪವಾದರೂ ಅವರ ಕಷ್ಟವನ್ನು ತಗ್ಗಿಸುವುದಕ್ಕೆ ನೀವು ಪ್ರಯತ್ನಪಟ್ಟಿರಲ್ಲ ಎಂದು ಅವರನ್ನು ಹರಸಿ ಕಳುಹಿಸುತ್ತಿದ್ದರು.

ಎಂತಹ ಕೆಲಸವನ್ನಾದರೂ ಅವರು ಮತ್ತೊಬ್ಬರಿಗಾಗಿ ಮಾಡಲು ಹಿಂತೆಗೆಯುತ್ತಿರಲಿಲ್ಲ. ಸಾಧ್ಯವಾದ ಮಟ್ಟಿಗೆ ಒಬ್ಬರನ್ನು ಮತ್ತೊಬ್ಬರ ನಿಂದೆಯಿಂದ ಕಾಪಾಡಲು ಪ್ರಯತ್ನಿಸುತ್ತಿದ್ದರು. ಒಂದುದಿನ ಭಕ್ತನೊಬ್ಬನು ಕೂಲಿಯವಳ ಕೈಯಲ್ಲಿ ಶ್ರೀ ಶಾರದಾದೇವಿಯವರಿಗೆಂದು ಅವರು ಜಯರಾಮವಟಿಯಲ್ಲಿದ್ದಾಗ, ಸ್ವಲ್ಪ ತರಕಾರಿ ಕಳುಹಿಸಿದ್ದನು. ಆಕೆ ಬಂದದ್ದು ಸಂಜೆ: ಪುನಃ ಕತ್ತಲಲ್ಲಿ ತನ್ನ ಊರಿಗೆ ಹೋಗಲು

ಆಗಲಿಲ್ಲ. ರಾತ್ರಿ ಅವರ ಮನೆಯಲ್ಲೇ ಮಲಗಿಕೊಂಡಳು. ರಾತ್ರಿ ಅಕಸ್ಮಾತ್ತಾಗಿ ಮಲೇರಿಯಾ ಜ್ವರದಿಂದ ನರಳುತ್ತ ಮಲಗಿದ್ದ ಕಡೆಯಲ್ಲೇ ವಾಂತಿಮಾಡಿ ಅಂಗಳವನ್ನೆಲ್ಲಾ ಕೆಡಿಸಿದ್ದಳು. ಶ್ರೀ ಶಾರದಾದೇವಿಯವರು ಎಂದಿನಂತೆ ಹೊತ್ತಿಗೆ ಮುಂಚೆ ಎದ್ದು ಬಂದು, ಈಕೆಯ ಸ್ಥಿತಿಯನ್ನು ನೋಡಿ ಇವಳನ್ನು ಬೇರೆ ಕಡೆ ಹಾಸಿ ಮಲಗಿಸಿ, ವಾಂತಿಯನ್ನೆಲ್ಲ ಬಳಿದು ಚೆನ್ನಾಗಿ ನೀರಿನಿಂದ ತೊಳೆದರು. ಮನೆಯಲ್ಲಿ ಅನೇಕ ಜನರಿದ್ದರು. ಬೆಳಿಗ್ಗೆ ಎದ್ದಮೇಲೆ ಯಾರಾದರೂ ಆ ಕೆಲಸವನ್ನು ಮಾಡುತ್ತಿದ್ದರು. ಆದರೆ ಅವರು ಹಾಗೆ ಮಾಡುವಾಗ ಅರಿಯದ ಹೆಂಗಸನ್ನು ದೂರಿಯಾರು ಎಂದು ಆ ಕೆಲಸವನ್ನು ತಾವೇ ಮಾಡಿ ಮುಗಿಸಿದರು.

ಶ್ರೀ ಶಾರದಾದೇವಿಯವರು ಸಮಾಜ ಯಾರನ್ನು, ಜಾರೆ ಭ್ರಷ್ಟೆ ಎಂದು ಬೈಗುಳದ ಬಾಣದಿಂದ ನಿರ್ದಯವಾಗಿ ನೋಯಿಸುತ್ತಿತ್ತೋ ಅವರನ್ನು ಸ್ವೀಕರಿಸಿ ಮನ್ನಿಸಿ ಒಳ್ಳೆಯ ದಾರಿಗೆ ತರುತ್ತಿದ್ದರು ಎನ್ನುವುದನ್ನು ಹಿಂದೆ ನೋಡಿದೆವು. ಕಳ್ಳರು, ದರೋಡೆಕಾರರು, ಪಟಿಂಗರು ಇವರಿಗೆ, ಸಮಾಜ ನಡುಗುತ್ತದೆ. ಅಸಹಾಯಕಳಾದ ಅಬಲೆಯನ್ನು ನಿಂದಿಸುವ ಧೈರ್ಯವಂತರು ಪಟಿಂಗರನ್ನು ಕಂಡರೆ ಅಂಜಿ ಸುಮ್ಮನಾಗುತ್ತಾರೆ. ಅವರನ್ನೂ ಕೂಡ ಇವರು ಪ್ರೀತಿಸಿ, ಅವರಿಗೆ ತಮ್ಮನ್ನು ಸೇವಿಸಲು ಅವಕಾಶ ಕೊಡುತ್ತಿದ್ದರು. ಜಯರಾಮವಟಿಯಲ್ಲಿ ಆಶ್ರಮವನ್ನು ಕಟ್ಟುತ್ತಿದ್ದಾಗ ಅನೇಕ ಮುಸಲ್ಮಾನ ಕೂಲಿಗಳನ್ನು ನೇಮಕಮಾಡಿದ್ದರು. ಅವರೆಲ್ಲ ಒಂದು ಕಾಲದಲ್ಲಿ ರೇಷ್ಮೆ ಹುಳುವಿನ ವ್ಯಾಪಾರದಿಂದ ಸುಖವಾಗಿ ಜೀವನಮಾಡುತ್ತಿದ್ದರು. ಆದರೆ ಕ್ರಮೇಣ ಪರದೇಶದ ರೇಷ್ಮೆಯ ಪೈಪೋಟಿಯಿಂದ ಇವರ ವ್ಯಾಪಾರ ನಷ್ಟವಾಗಿ ಕೆಲವರು ತಮ್ಮ ಉದರಪೋಷಣೆಗಾಗಿ ಪಟಿಂಗತನಕ್ಕೆ ಕೈಹಾಕಿದರು. ನೆರೆಹೊರೆಯವರೆಲ್ಲ ಇಂತಹವರನ್ನು ಕೂಲಿಗಾಗಿ ನೇಮಿಸುವುದರಿಂದ ಹಳ್ಳಿಯೇ ಹೀನಸ್ಥಿತಿಗೆ ಬರುವುದೆಂದು ಹೇಳಲು ಮೊದಲು ಮಾಡಿದರು. ಆದರೆ ನೀಚರಿಗೆ ಉತ್ತಮರಾಗಲು ಅವಕಾಶವನ್ನು ಕಲ್ಪಿಸಿಕೊಡದೇ ಇದ್ದರೆ ಅವರು ಮತ್ತೇನು ಮಾಡಬೇಕು ಎಂದು ಅವರ ಬೆದರಿಕೆಯನ್ನು ನಿರ್ಲಕ್ಷ್ಯಗೈದರು. ಅವರಲ್ಲಿ ಒಬ್ಬ ಕೂಲಿಯಾಳು ಬಾಳೇಹಣ್ಣನ್ನು ತಂದು, ಪೂಜೆಗೆ ನೀವು ಇದನ್ನು ಸ್ವೀಕರಿಸಬೇಕೆಂದು ಬೇಡಿಕೊಂಡನು. ಶ್ರೀ ಶಾರದಾದೇವಿಯವರು ಅದನ್ನು ಸಂತೋಷದಿಂದ ಸ್ವೀಕರಿಸಿದರು. ಹತ್ತಿರ ಇದ್ದ ಶಿಷ್ಯನೊಬ್ಬನು, "ಅವನು ಎಷ್ಟು ಕೊಲೆ ದರೋಡೆಗಳನ್ನು

ಮಾಡಿದ್ದಾನೆ. ಅಂತಹವನಿಂದ ನೀವು ಸ್ವೀಕರಿಸಿದಿರಲ್ಲ" ಎಂದನು. ಅದಕ್ಕೆ ಶ್ರೀ ಶಾರದಾದೇವಿಯವರು, "ನನಗೆ ಅವನ ಹಿಂದಿನ ಜೀವನವೆಲ್ಲ ತಿಳಿದಿದೆ. ಆದರೂ ಸ್ವೀಕರಿಸಿದೆ. ಪುಣ್ಯಾತ್ಮರಿಗೆ ಮಾತ್ರ ದೇವರ ಸೇವೆ ಮಾಡುವುದಕ್ಕೆ ಅಧಿಕಾರವಿದ್ದರೆ ಪಾಪಿಗಳು ಅಂತಹ ಪದವಿಗೆ ಏರುವುದು ಯಾವಾಗ?" ಎಂದರು.

ಶ್ರೀ ಶಾರದಾದೇವಿಯವರು ಆಚಾರಶೀಲರಾದ ಬ್ರಾಹ್ಮಣರ ಮತದಲ್ಲಿ ಹುಟ್ಟಿದ್ದರೂ ಯಾವಾಗಲೂ ಅದರ ನಿಯಮವನ್ನವಲಂಬಿಸಿಕೊಂಡಿರಲಿಲ್ಲ. ಕೆಲವು ವೇಳೆ ಪೂರ್ವಾಚಾರದ ನಿಯಮಗಳನ್ನು ಮೀರಿ ನಡೆಯುತ್ತಿದ್ದರು. ಆದರೆ ಹಳೆಯದೆಲ್ಲ ಕೆಲಸಕ್ಕೆ ಬಾರದವೆಂದು ಅಲ್ಲಗಳೆಯುವವರ ಗುಂಪಿಗೆ ಸೇರಿದವರಲ್ಲ. ಶ್ರೀರಾಮಕೃಷ್ಣರನ್ನು ಯಾರೋ ಕೆಲವರು, "ನೀವು ಆಚಾರಗಳನ್ನು ಸರಿಯಾಗಿ ಪಾಲಿಸುತ್ತಿಲ್ಲ" ಎಂದು ಆಕ್ಷೇಪಣೆ ಮಾಡಿದರು. ಅದಕ್ಕೆ ಅವರು "ತೆಂಗಿನಮರ ಮೇಲೆ ಬೆಳೆದು ಹೋದ ಹಾಗೆಲ್ಲ ಹಳೆಯ ಗರಿಗಳು ಬಿದ್ದುಹೋಗುವಂತೆ ಜೀವನ ವಿಕಾಸವಾದ ಹಾಗೆಲ್ಲಾ ಬಾಹ್ಯಪ್ರತಿಬಂಧಕಗಳು ತಾವಾಗಿಯೇ ಉದುರಿಹೋಗುವುವು" ಎಂದರು. ಅದರಂತೆಯೇ ಶ್ರೀ ಮಾತೆಯವರ ಜೀವನದಲ್ಲಿ ಅನೇಕವೇಳೆ ಕಂಡುಬರುತ್ತಿದ್ದಿತು. ಆದರೂ ತಮ್ಮಂತೆ ಉಳಿದವರು ನಡೆಯಬೇಕೆಂದೂ ಅಥವಾ ಹಾಗೆ ನಡೆಯದೇ ಇರುವವರನ್ನು ತಮಗಿಂತ ಕೀಳೆಂದೂ ಭಾವಿಸುತ್ತಿರಲಿಲ್ಲ.

ಒಂದು ದಿನ ಅಮಜಾನ್ ಎಂಬ ಮಹಮ್ಮದೀಯನನ್ನು ಊಟಕ್ಕೆ ಕರೆದು ತಮ್ಮ ತಮ್ಮನ ಮಗಳು ನಳಿನಿಗೆ ಊಟಕ್ಕೆ ಬಡಿಸು ಎಂದು ಹೇಳಿದರು. ಅವಳು ಹತ್ತಿರಕ್ಕೆ ಹೋದರೆ ತನ್ನ ಜಾತಿಗೆ ಎಲ್ಲಿ ಚ್ಯುತಿ ಬರುತ್ತದೆಯೋ ಎಂದು ಅಂಜಿ ದೂರದಿಂದಲೇ ನಿಂತುಕೊಂಡು ಆಹಾರವನ್ನು ಇವನೆಲೆಗೆ ಎಸೆಯುತ್ತಿದ್ದಳು. ಶ್ರೀ ಶಾರದಾದೇವಿಯವರು ಇದನ್ನು ನೋಡಿ, "ನೀನು ಹಾಗೆ ಬಡಿಸಿದರೆ ಅವನು ಊಟ ಮಾಡುವುದು ಹೇಗೆ" ಎಂದು ಹೇಳಿ ಅವನ ಕೈಯಿಂದ ಆಹಾರಪದಾರ್ಥವನ್ನು ತೆಗೆದುಕೊಂಡು ತಾವೇ ಬಡಿಸಿ ಅವನ ಊಟವಾದಮೇಲೆ ಆ ಜಾಗವನ್ನು ಇವರೇ ತೊಳೆದರು. ನಳಿನಿ ಇದನ್ನು ನೋಡಿ, "ನೀವು ಹಾಗೆ ಮಾಡುತ್ತೀರಲ್ಲ. ಜಾತಿ ಹೋಗುವುದಿಲ್ಲವೆ?" ಎಂದಳು. ಅದಕ್ಕೆ ಇವರು, "ಸುಮ್ಮನಿರು, ಶಾರದಾನಂದ ಹೇಗೆ ನನ್ನ ಮಗನೋ ಇವನೂ ಹಾಗೆಯೇ ನನ್ನ ಮಗ" ಎಂದರು.

ಮತ್ತೊಮ್ಮೆ ಜಾಡಮಾಲಿಯೊಬ್ಬನು ಇವರಿಗೆ ನೀರಿನ ಪಾತ್ರೆಯನ್ನು ಇಡಲು ಹುಲ್ಲಿನ ಸಿಂಬಿಯನ್ನು ಮಾಡಿ ಅದನ್ನು ಕೊಡಲು ಬಂದನು. ಅದನ್ನು ಒಳಅಂಗಳದಲ್ಲಿ ಇಟ್ಟು ಹೋಗೆಂದು ಹೇಳಿದರು. ಅವನಿಗೆ ಒಳಗೆ ಹೋದರೆ ಎಲ್ಲಿ ತನ್ನನ್ನು ಮನೆಯ ಹೆಂಗಸರು ನಿಂದಿಸುವರೋ ಎಂಬ ಅಂಜಿಕೆ. ಆದರೂ ಶ್ರೀ ಶಾರದಾದೇವಿಯವರು ಹೇಳಿದಮೇಲೆ ಯಾರೂ ಏನೂ ಮಾಡಲಾರರೆಂದು ಒಳಗೆ ಹೋದನು. ಇವನ ಗ್ರಹ ಚಾರಕ್ಕೆ ಒಬ್ಬ ಹೆಂಗಸು ಅಷ್ಟು ಹೊತ್ತಿಗೆ ಒಳಗಿನಿಂದ ಬಂದಳು. ಇವನನ್ನು ನೋಡಿ ನಿಂದೆಯ ಸುರಿಮಳೆಯನ್ನು ಅವನಮೇಲೆ ಕರೆಯ ಲಾರಂಭಿಸಿದಳು. ಪಾಪ, ಬಡ ಜಾಡಮಾಲಿ ಇವಳ ಮುಂದೆ ನಿಂತು ನಡುಗಲಾರಂಭಿಸಿದನು. ಇದನ್ನು ಶ್ರೀ ಶಾರದಾದೇವಿಯವರು ನೋಡಿ, ಅವಳನ್ನು ಸುಮ್ಮನಿರಿಸಿ, ಇವನಿಗೆ ತಮ್ಮ ಕೈಯಿಂದಲೇ ಸ್ವಲ್ಪ ದುಡ್ಡು ಕೊಟ್ಟು ಏನಾದರೂ ತಿಂಡಿ ತೆಗೆದುಕೊಂಡು ತಿನ್ನು ಎಂದು ಹೇಳಿದರು. ಅನೇಕವೇಳೆ ಪಾಶ್ಚಾತ್ಯದೇಶದ ಭಕ್ತರಾದ ಭಗಿನಿ ನಿವೇದಿತಾ, ದೇವ ಮಾತ, ಓಲ್‌ಬುಲ್ ಇವರುಗಳು ಶ್ರೀ ಶಾರದಾದೇವಿಯವರಲ್ಲಿಗೆ ಬರು ತ್ತಿದ್ದರು. ಅವರೊಂದಿಗೆ ಬೆರೆಯುತ್ತ ಒಂದೇ ಕೋಣೆಯಲ್ಲಿ ಊಟ ಮಾಡುತ್ತಿದ್ದರು, ಮಲಗುತ್ತಿದ್ದರು.

ತಮಗೆ ಯಾವುದು ಸರಿಯೆಂದು ತೋರುವುದೋ ಅದನ್ನೆ ಮತ್ತೊ ಬ್ಬರು ಒಪ್ಪಿಕೊಳ್ಳಬೇಕೆಂದು ಬಲಾತ್ಕರಿಸದೆ ಇನ್ನೊಬ್ಬರ ಅಭಿಪ್ರಾಯ ಗಳಿಗೂ ಗೌರವಕೊಡುತ್ತಿದ್ದರು. ಒಬ್ಬ ಭಕ್ತನನ್ನು ಮನೆಯ ಹೆಂಗಸರಿಗೆ ಬಟ್ಟೆಯನ್ನು ತೆಗೆದುಕೊಂಡು ಬರಬೇಕೆಂದು ಕಳುಹಿಸಿದರು. ಆತ ಉಗ್ರದೇಶಭಕ್ತ. ಸ್ವದೇಶೀ ಸಾಮಾನುಗಳನ್ನು ತೆಗೆದುಕೊಂಡು ಬಂದನು. ತೊಳಪು, ಹೊಳಪಿನ ನಾಜೋಕಾದ ಸೀರೆಯನ್ನುಟ್ಟ ಹೆಂಗಸರಿಗೆ ಇದು ಸರಿಬೀಳದೆ ತಮಗ ಸೀರೆಯನ್ನು ತಂದವನಮೇಲೆ ಶ್ರೀ ಶಾರದಾದೇವಿಯ ವರಿಗೆ ದೂರು ಹೇಳಿದರು. ಶ್ರೀ ಶಾರದಾದೇವಿಯವರು ಭಕ್ತನನ್ನು ಕರೆದು ವಿಚಾರಿಸಿದಾಗ, ಅವರು ಹೇಳುವ ಬಟ್ಟೆಯೆಲ್ಲ ಪರದೇಶದ್ದು ಅದನ್ನು ಹೇಗೆ ತೆಗೆದುಕೊಂಡು ಬರುವುದು ಎಂದನು. ಶ್ರೀ ಶಾರದಾ ದೇವಿಯವರು ಇವನ ದೇಶಭಕ್ತಿಯನ್ನು ನೋಡಿ ಅದನ್ನು ಕದಲಿಸಲು ಇಚ್ಛಿಸದೆ ಮತ್ತೊಂದುವೇಳೆ ಬೇರೆಯವರಿಗೆ ಬಟ್ಟೆಯನ್ನು ತೆಗೆದುಕೊಂಡು ಬರುವಂತೆ ಹೇಳಿದರು.

ಶ್ರೀ ಶಾರದಾದೇವಿಯವರಿಗೂ ಮಹಾಸಮಾಧಿಸ್ಥರಾದ ಅವರ

ಪತಿಯವರಿಗೂ ಇದ್ದ ಅಲೌಕಿಕ ಪರಸ್ಪರ ಸಂಬಂಧವನ್ನು ಈಗ ನೋಡೋಣ. ಅವರಿಗೆ ಶ್ರೀರಾಮಕೃಷ್ಣರು ಪತಿಗಳು ಮಾತ್ರವೇ ಅಲ್ಲ. ಜೊತೆಗೆ ಅವರು ಗುರುಗಳಾಗಿದ್ದರು. ಪ್ರತಿದಿನವೂ ಆರಾಧಿಸುವ ಇಷ್ಟ ದೇವರಾಗಿದ್ದರು. ಅವರ ಭಾಗ್ಯಕ್ಕೆ ಶ್ರೀರಾಮಕೃಷ್ಣರು ಗತಿಸಿರುವರೆಂದು ಅವರು ತಿಳಿದಿರಲಿಲ್ಲ. ದೇಹವೆಂಬ ಗೂಡನ್ನೇನೋ ಅವರು ಬಿಟ್ಟು ಹೋಗಿದ್ದರು. ಆದರೂ ಸೂಕ್ಷ್ಮಸ್ಥಿತಿಯಲ್ಲಿ ಅನವರತವೂ ಜೀವಿಸಿದ್ದರು. ಬೇಡಿದಾಗ ಅವರಿಗೆ ದರ್ಶನ ಕೊಡುತ್ತಿದ್ದರು. ಸಹಾಯಕ್ಕೆ ಅವರನ್ನು ಕರೆದರೆ ಬರುತ್ತಿದ್ದರು. ಅನೇಕವೇಳೆ ಶ್ರೀ ಶಾರದಾದೇವಿಯವರು ದುಃಖ ದಲ್ಲಿ ಸಿಲುಕಿದಾಗ ಅದರ ದರ್ಶನ ಪಡೆದು ಏನು ಮಾಡಬೇಕೆಂಬುದನ್ನು ತಿಳಿದು ಬಂದ ಕಷ್ಟದಿಂದ ಪಾರಾಗುತ್ತಿದ್ದರು.

ಅವರು ಮಾಡುವ ಪೂಜಾವಿಧಾನವೇ ಒಂದು ವಿಧ. ಮಂತ್ರತಂತ್ರ ಮುದ್ರೆಗಳ ಆಡಂಬರವಿಲ್ಲ. ಅವರ ಪೂಜೆಗೆ ಬಹಳ ಸ್ವಲ್ಪ ಬಾಹ್ಯಸಲಕರಣೆ ಬೇಕಾಗಿತ್ತು. ಅದನ್ನು ಶ್ರದ್ಧೆಯಿಂದ ಶುಚಿಯಾಗಿ ಮಾಡುತ್ತಿದ್ದರು. ಅವರ ಪೂಜೆ ಸರಳವಾಗಿದ್ದರೂ ಭಕ್ತಿಯಿಂದ ಕೂಡಿತ್ತು. ನಿಜವಾಗಿ ಪ್ರಿಯತಮರನ್ನು ಎದುರುಗೊಂಡು ಮಾತನಾಡುತ್ತಿರುವರೋ ಎನ್ನುವಂತೆ ಇತ್ತು ಅವರ ಪೂಜೆ. ಅವರ ಪೂಜೆ ಕೇವಲ ಅರ್ಧ ಗಂಟೆ ಮಾತ್ರ ತೆಗೆದುಕೊಳ್ಳುತ್ತಿತ್ತು. ನಮಸ್ಕಾರಮಾಡಿ ಆಸನದಮೇಲೆ ಕುಳಿತು ತಮ್ಮ ಇಷ್ಟದೈವದ ಭಾವಚಿತ್ರವನ್ನು ಶುಚಿಮಾಡುವರು. ನಂತರ ಅದಕ್ಕೆ ಹೂಗಂಧಗಳನ್ನರ್ಪಿಸಿ, ಕೊಂಚಕಾಲ ಧ್ಯಾನಮಾಡಿ ಪುಷ್ಪಾಂಜಲಿಯನ್ನು ಅರ್ಪಿಸಿ ಮುಗಿಸುತ್ತಿದ್ದರು. ನೈವೇದ್ಯವನ್ನರ್ಪಿಸುವಾಗ ಮಣೆಹಾಕಿ ಊಟಮಾಡುವ ಆಹಾರ ಪದಾರ್ಥಗಳನ್ನೆಲ್ಲ ಹಲವು ಬಟ್ಟಲಲ್ಲಿ ಅಣಿ ಮಾಡುವರು. ದೇವರಿಗೆ ತಿಳಿಯದ ಯಾವುದೋ ಸಂಸ್ಕೃತ ಮಂತ್ರದಿಂದ ನೀರೆರಚಿ, ಬೆರಳುಗಳನ್ನು ಮಡಿಸಿ ಆಪೋಶನ ಹಾಕದೆ, ತಿಳಿ ಬಂಗಾಳಿಯ ಭಾಷೆಯಲ್ಲೇ, "ಊಟಕ್ಕೆ ಸಿದ್ಧವಾಗಿದೆ ಏಳಿ" ಎನ್ನುವರು. ಕೆಲವು ಸಮಯದಲ್ಲಿ ಬೇರೆ ಕೆಲಸಗಳ ಅವಸರವಿರುವಾಗ, "ಪ್ರಭು ಇವತ್ತು ಸ್ವಲ್ಪ ಬೇಗ ಊಟಮಾಡಬೇಕು. ನಾನು ಜಗದ್ಧಾತ್ರಿ ಪೂಜೆಗೆ ಅಣಿ ಮಾಡ ಬೇಕು" ಎನ್ನುವರು. ಇದನ್ನು ನೋಡಿದವರು ಅವರು ಯಾರೊಂದಿ ಗಾದರೂ ಮಾತನಾಡುತ್ತಿರುವವರೇ ಎಂದು ಆಶ್ಚರ್ಯಪಡುತ್ತಿದ್ದರು. ಅವರಿಗೆ ಶ್ರೀರಾಮಕೃಷ್ಣರು ಮೂರು ವಿಧದಲ್ಲಿ ನೈವೇದ್ಯವನ್ನು ಸ್ವೀಕರಿಸು ವಂತೆ ತೋರುತ್ತಿತ್ತಂತೆ. ಕೆಲವು ವೇಳೆ ಅವರ ಹಣೆಯ ಮಧ್ಯದಿಂದ

ಜ್ಯೋತಿಯೊಂದು ಬಂದು ಮಾಡಿದ ಪದಾರ್ಥಗಳನ್ನು ಆವರಿಸಿ ಹೋಗು ವುದು. ಮತ್ತೆ ಕೆಲವು ವೇಳೆ ನಾನು ಆಹಾರವನ್ನು ಪರಿಗ್ರಹಿಸಿರುವೆನು ಎಂದು ಸುಮ್ಮನೆ ಮುಟ್ಟುತ್ತಿದ್ದರಂತೆ. ಶ್ರೀ ಶಾರದಾದೇವಿಯವರು ತಾವು ಶ್ರೀ ಗುರುದೇವನಿಗೆ ನೈವೇದ್ಯಮಾಡಿದ ವಸ್ತುವನ್ನಲ್ಲದೆ ಬೇರೆ ಯಾವು ದನ್ನೂ ಸ್ವೀಕರಿಸುತ್ತಿರಲಿಲ್ಲ. ಕೆಲವುವೇಳೆ ಒಂದು ಊರಿಂದ ಇನ್ನೊಂದು ಊರಿಗೆ ಹೋಗುವಾಗ ದಾರಿಯಲ್ಲಿ ಅನುಕೂಲವಾದ ಕಡೆ ಇಳಿದು ಅಡಿಗೆ ಮಾಡಿ ಶ್ರೀ ಗುರುದೇವನಿಗೆ ಅರ್ಪಿಸಿ ಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಅವರು ನೈವೇದ್ಯಮಾಡುವುದರಲ್ಲಿಯೂ ಒಂದು ಪೂರ್ವಾಚಾರ ಅಂಧ ಅನುಕರಣೆ ಇರಲಿಲ್ಲ. ಶುಚಿಯಾಗಿ ಪರಿಶುದ್ಧವಾದ ಮನಸ್ಸಿನಿಂದ ಮಾಡಿದ್ದರೆ ಸಾಕು. ಅದನ್ನು ಅರ್ಪಿಸುತ್ತಿದ್ದರು. ಒಂದು ಸಲ ಯಾವುದೋ ಊರಿಗೆ ಹೋಗುವಾಗ ದಾರಿಯಲ್ಲಿ ಮಡಕೆಯೊಂದರಲ್ಲಿ ಅಡಿಗೆ ಮಾಡಬೇಕಾಗಿ ಬಂತು. ಅಕಸ್ಮಾತ್ ಅನ್ನದ ಮಡಕೆ ನೆಲದ ಮೇಲೆ ಬಿದ್ದು ಒಡೆದು ಅನ್ನವೆಲ್ಲಾ ಮಣ್ಣು ಪಾಲಾಯಿತು. ಹತ್ತಿರಿದ್ದ ವರು ಇದನ್ನು ಹೇಗೆ ನೈವೇದ್ಯ ಮಾಡುವುದೆಂದು ಶಂಕಿಸಿದರು. ಆದರೆ ಶ್ರೀ ಶಾರದಾದೇವಿಯವರು ಮೇಲುಭಾಗದ ಅನ್ನವನ್ನು ತೆಗೆದುಕೊಂಡು, "ಪ್ರಭು, ಇಂದು ಇದರಲ್ಲೇ ನೀವು ತೃಪ್ತರಾಗಬೇಕು" ಎಂದು ಬೇಡಿ ನೈವೇದ್ಯವಮಾಡಿದರು.

ಅವರ ಪಾಲಿಗೆ ದೇವರ ಕೋಣೆಯಲ್ಲಿ ತಮ್ಮ ಇಷ್ಟದೇವರು ಸ್ಥೂಲ ದೇಹದಲ್ಲಿ ಇದ್ದಂತೆಯೇ ಭಾವಿಸಿದ್ದರು. ಪೂಜೆಯಾದಮೇಲೆ ದೇವರ ಮೇಲೆ ಇಟ್ಟ ಕೆಲವು ಹೂವಿಗಾಗಿ ಇರುವೆಗಳು ಬಂದು ಅದರ ಮೇಲೆ ಓಡಾಡುತ್ತಿದ್ದವು. ಅದು ಭಾವಚಿತ್ರದಲ್ಲಿದ್ದ ಶ್ರೀರಾಮಕೃಷ್ಣರನ್ನು ಕಚ್ಚು ತ್ತಿದ್ದಂತೆಯೇ ಅವರಿಗೆ ಅನುಭವವಾಗಿ, ಹೂವನ್ನು ಮಾರನೇ ದಿನದಿಂದ ದೂರದಲ್ಲಿ ಇಡುತ್ತಿದ್ದರು.

ಜಗದ ಶೋಕತಾಪಗಳಲ್ಲಿ ಸಿಲುಕಿ ನರಳುತ್ತಿರುವವರು ಯಾರು ಬಂದರೂ ಅವರೆಲ್ಲರನ್ನೂ ಗುರುದೇವನಿಗೆ ಪ್ರಾರ್ಥಿಸಿ ಎಂದು ಹೇಳುವರು. "ಅವರು ಕಾಲವಾಗಿಲ್ಲ. ನೀವು ದೈನ್ಯದಿಂದ ಬೇಡಿದರೆ ಅವರು ಬಂದು ನಿಮ್ಮ ಅಭೀಷ್ಟವನ್ನು ನೆರವೇರಿಸುವರು. ನಿರಾಶರಾಗಬೇಡಿ, ಅನವರತವೂ ಅವರು ನಿಮ್ಮನ್ನು ನೋಡಿಕೊಳ್ಳುತ್ತಿರುವರು" ಎಂದು ಸಂತೈಸಿ ಕಳು ಹಿಸುತ್ತಿದ್ದರು. ಅವರಿಗೆ ಶ್ರೀರಾಮಕೃಷ್ಣರೇ ಸರ್ವಸ್ವ. ಅವರು ಯಾಂತ್ರಿಕರು. ಇವರು ಅವರ ಕೈಯಲ್ಲಿದ್ದ ಯಂತ್ರ. ತಮ್ಮ ಅಹಂಕಾರ

ವನ್ನೆ ಅಳಿಸಿ, ಅಲ್ಲಿ ಗುರುದೇವನು ಬಂದು ನೆಲಸುವಂತೆ ಮಾಡಿದ್ದರು. ತಮಗೆ ಅವರು ಪತಿಯಾಗಿದ್ದರೂ ಅದರಿಂದ ಅವರಮೇಲೆ ತಮ್ಮ ಅಧಿಕಾರ ಸ್ವಲ್ಪವಿದೆ ಎಂದು ತಿಳಿದಿರಲಿಲ್ಲ. ನಿರ್ಹೇತುಕ ಭಕ್ತಿಯಿಂದ ತಮಗೆ ಅವರ ಹತ್ತಿರ ಸಲಿಗೆಯಿಂದ ಇರುವುದಕ್ಕೆ ಎಷ್ಟು ಅಧಿಕಾರವಿರುವುದೋ ಅಷ್ಟೇ ಅಧಿಕಾರ ಭಕ್ತರೆಲ್ಲರಿಗೂ ಇರುವುದೆಂದು ಭಾವಿಸಿದ್ದರು.

ಪ್ರತಿಯೊಬ್ಬ ಮಹಾಪುರುಷನಿಗೂ ತನ್ನ ಅಂತರಾಳದಲ್ಲಿ ಇರುವ ಶಕ್ತಿಯಲ್ಲಿ ನಂಬಿಕೆ ಇರುತ್ತದೆ. ಶ್ರೀ ಶಾರದಾದೇವಿಯವರು ಅದನ್ನು ವ್ಯಕ್ತಪಡಿಸದೆ ಏನೂ ತಿಳಿಯದ ಸರಳಸ್ವಭಾವದ ತೆರೆಯನ್ನು ಅದರ ಮೇಲೆ ಹೊದಿಸುತ್ತಿದ್ದರು. ಕೆಲವು ವೇಳೆ ತಾವು ಉನ್ನತಭಾವದಲ್ಲಿದ್ದಾಗ ಅದು ತಾನಾಗಿಯೇ ವ್ಯಕ್ತವಾದರೂ ಅದು ಗೊತ್ತಾದ ಕೂಡಲೇ ಮಾತನ್ನು ತಿರುಗಿಸಿ, ತಿಳಿಯದೇ ಹೇಗೋ ಆಚರಿಸಿದೆ ಎನ್ನುತ್ತಿದ್ದರು.

ಆಕೆಯನ್ನು ಭಕ್ತರು ಜಗನ್ಮಾಯಿಯ ಪೀಠದಮೇಲೆ ಇಟ್ಟು ಪೂಜಿಸಿದರು. ಜಗದ ನಾನಾಕಡೆಗಳಿಂದ ಅನೇಕ ಮತಗಳಿಗೆ ಸೇರಿದ ಭಕ್ತರು ಬಂದು ಇವರನ್ನು ಹೊಗಳಿದರು. ಆದರೂ ಶ್ರೀ ಶಾರದಾದೇವಿಯವರು, "ತಮ್ಮಲ್ಲಿ ಯಾವ ಹಿರಿದಾದ ಗುಣವೂ ಇಲ್ಲ, ತಾವು ಏನೂ ಅರಿಯದ ಹಳ್ಳಿಯ ಹುಡುಗಿ. ಶ್ರೀ ಗುರುದೇವನ ಪದತಲದಲ್ಲಿ ಶರಣುಹೊಂದಿದ ಮೇಲೆ ಕಿಂಚಿತ್ ಅವರ ಪ್ರಭೆ ಇಲ್ಲಿ ಕಾಣುವುದೇ ಹೊರತು ಅದು ನನ್ನದಲ್ಲ" ಎಂದು ಜನರು ಅವರಿಗೆ ಕೊಡುವ ಕೀರ್ತಿಯನ್ನೆಲ್ಲ ಪುನಃ ಗುರುದೇವನಿಗೆ ಕೊಟ್ಟು ಧನ್ಯರಾಗುತ್ತಿದ್ದರು. ಶ್ರೀರಾಮಕೃಷ್ಣರಿಗೆ ಶ್ರೀ ಶಾರದಾದೇವಿಯವರ ದೈನ್ಯತೆ ಗೊತ್ತಿತ್ತು. ಅವರ ಹೃದಯದಲ್ಲಿ ಎಂತಃ ತಪಃಪ್ರಭಾವವಿದ್ದರೂ ಅದನ್ನು ಜನರಿಗೆ ಕಾಣಿಸದಂತೆ ಮುಚ್ಚಿಡುತ್ತಿದ್ದರು. ಅವರು ಆದಕಾರಣ ಒಮ್ಮೆ ಹಾಸ್ಯಕ್ಕೆ, "ಅವಳು ಬೆಕ್ಕಿನಂತೆ ತನ್ನ ನಿಜವಾದ ಬಣ್ಣವನ್ನು ಬೂದಿಬಳಿದು ಮುಚ್ಚಿಕೊಳ್ಳುವಳು" ಎಂದರು.

ಆಧ್ಯಾತ್ಮಿಕ ಜೀವನದಲ್ಲಿ ದಯಾ, ಕ್ಷಮೆ, ಕರುಣೆ ಮುಂತಾದ ಗುಣಗಳು ಹೇಗೆ ಮನೆಮಾಡಿಕೊಂಡಿದ್ದವೋ ಹಾಗೆಯೇ ಬುದ್ಧಿಗೆ ಸಂಬಂಧಪಟ್ಟ ವೈಶಾಲ್ಯತೆ, ಮುಂದಾಲೋಚನೆ, ಕಾರ್ಯದಕ್ಷತೆ ಮುಂತಾದ ಸುಗುಣಗಳು ಅವರ ಜೀವನದಲ್ಲಿ ಬೀಡುಬಿಟ್ಟಿದ್ದವು. ಶ್ರೀಮಾತೆಯವರು ಇಂದಿನ ಸ್ತ್ರೀಯರಂತೆ ಶಾಲೆಗೆ ಹೋಗಿ ಕಲಿತವರಲ್ಲ. ಅವರ ಮನಸ್ಸು ಪ್ರಾಪಂಚಿಕ ವಿಷಯಗಳ ಉಗ್ರಾಣವಾಗಿರಲಿಲ್ಲ. ಮಾನವನಿಗೆ ಅತ್ಯಂತ ಅಮೂಲ್ಯವಾಗಿರುವುದು ಶೀಲ. ಇಂತಹ ಉದಾತ್ತಶೀಲಗಳ ಗಣಿ

ಶ್ರೀರಾಮಕೃಷ್ಣರು. ಇವರ ಕೈ ಹಿಡಿದು, ಇವರ ಸೇವೆಯಲ್ಲಿ ಹದಿಮೂರು ವರುಷಗಳನ್ನು ಕಳೆದರು. ಯಾವ ಯಾವ ಮಹಾಗುಣಗಳು ಇದರಲ್ಲಿದ್ದಿತೋ ಅವುಗಳನ್ನು ತಮ್ಮ ಜೀವನದಲ್ಲಿ ನೆಟ್ಟು ಪೋಷಿಸಿದರು. ಇದಕ್ಕಿಂತ ಹಿರಿದಾದ ವಿದ್ಯೆ ಇದೆಯೆ! ಮತ್ತೊಂದು ಮತದ ಭಾವನೆಯನ್ನು ತಕ್ಷಣವೇ ಅರಿತು ಅದನ್ನು ಅನುಭವಿಸಬಲ್ಲ ಪ್ರಕೃತಿ ಇವರದು. ಒಮ್ಮೆ ಸೋದರಿ ನಿವೇದಿತೆ ಅವರು ಈಸ್ಟರ್ ಹಬ್ಬದಲ್ಲಿ ಕ್ರೈಸ್ತರು ಪ್ರಾರ್ಥಿಸುವ ಹಾಡನ್ನು ಹೇಳಿದರು. ಇದನ್ನು ಕೇಳಿದಾಗ ಭಾವಪರವಶರಾದರು. ಮತ್ತೊಂದು ಸಲ ಕ್ರೈಸ್ತಮತದಲ್ಲಿ ಮದುವೆಯ ಸಮಯದಲ್ಲಿ ನೂತನ ದಂಪತಿಗಳು ಮಾಡುವ, "ಒಳ್ಳೆಯದಾಗಲೀ ಕೆಟ್ಟದ್ದಾಗಲೀ, ಶ್ರೀಮಂತನಾಗಲೀ ಬಡವನಾಗಲೀ, ರೋಗದಲ್ಲಿರಲಿ ಆರೋಗ್ಯದಲ್ಲಿರಲಿ, ಸಾಯುವವರೆಗೂ ನಾವು ಅಗಲುವುದಿಲ್ಲ" ಎಂಬ ಪ್ರತಿಜ್ಞೆಯನ್ನು ಕೇಳಿದಾಗ ಶ್ರೀ ಶಾರದಾದೇವಿಯವರು, "ಧಾರ್ಮಿಕದ ನುಡಿಗಳಿವು" ಎಂದರು.

ಇವರ ಮನಸ್ಸು ಯಾವಾಗಲೂ ಬಹು ಸೂಕ್ಷ್ಮವಾಗಿತ್ತು. ಎಂತಹ ಪ್ರಬಲ ಸನ್ನಿವೇಶದಲ್ಲಿ ಕೂಡ ತಾವು ಹೇಗೆ ನಡೆಯಬೇಕೆಂಬ ನಿರ್ಧರಕ್ಕೆ ಬರುತ್ತಿದ್ದರು. ಪರರ ಇಚ್ಛೆಯನ್ನು ಅವರ ಮಾತಿನಿಂದಲೇ ಗ್ರಹಿಸಿ ಹೇಗೆ ನಡೆದರೆ ಇನ್ನೊಬ್ಬರಿಗೆ ತೊಂದರೆಯಾಗುವುದಿಲ್ಲವೋ ಹಾಗೆ ವರ್ತಿಸುತ್ತಿದ್ದರು. ಹಿಂದೆ ಹೇಳಿದಂತೆ ಶ್ರೀರಾಮಕೃಷ್ಣರಿಗೆ ದುಡ್ಡು ಕೊಡಲು ಬಂದ ಮಾರ್ವಾಡಿಯನ್ನು ಶ್ರೀ ಶಾರದಾದೇವಿಯವರ ಹತ್ತಿರ ಕಳುಹಿಸಿದರು. ಆತನು ಇವರಲ್ಲಿಗೆ ಬಂದಾಗ ಹಣವನ್ನು ಶ್ರೀರಾಮಕೃಷ್ಣರು ಇಚ್ಛಿಸಲಿಲ್ಲವೆಂದು ತಿಳಿದು ಯಾವುದು ಅವರಿಗೆ ಬೇಡವೋ ಅದು ತಮಗೂ ಬೇಡದೇ ಇರಬೇಕೆಂದು ನಿರ್ಧರಿಸಿದರು. ಮತ್ತೊಮ್ಮೆ ಶ್ರೀರಾಮಕೃಷ್ಣರು ಪಣಿಹಾಟಿ ಎಂಬಲ್ಲಿಗೆ ಜಾತ್ರೆಗೆ ಹೋಗುವಾಗ ಯೋಗಿನ್‌ಮಾ ಒಂದಿಗೆ ಶಾರದೆಗೂ ಇಚ್ಛೆ ಇದ್ದರೆ ಬರಲು ಹೇಳು ಎಂದು ಹೇಳಿಕಳುಹಿಸಿದರು. ಶ್ರೀ ಶಾರದಾದೇವಿಯವರಿಗೆ ಇದರಿಂದ ಶ್ರೀರಾಮಕೃಷ್ಣರ ಮನಸ್ಸು ಏನು ಎಂದು ತಿಳಿದು, ಅವರಿಗೆ ಆಸೆ ಇದ್ದರೆ, ನನ್ನನ್ನು ಸುಮ್ಮನೆ ಬರಹೇಳುತ್ತಿದ್ದರು. ಅವರು 'ನನಗೆ ಇಚ್ಛೆ ಇದ್ದರೆ' ಎಂದು ಹೇಳುವುದರಿಂದ ಹೋಗುವುದು ಸರಿಯಲ್ಲವೆಂದು, ತಾವು ಬರುವುದಿಲ್ಲವೆಂದು ಹೇಳಿಕಳುಹಿದರು. ಇದನ್ನು ಶ್ರೀರಾಮಕೃಷ್ಣರು ತಿಳಿದು, "ಅವಳು ಹಾಗೆ ಹೇಳಿದ್ದು ಒಳ್ಳೆಯದಾಯಿತು. ನನ್ನ ಜತೆಯಲ್ಲಿ ಬಂದರೆ ಪರಮಹಂಹಸ ಜತೆಯಲ್ಲಿ ಪರಮಹಂಸಿಯೂ ಬಂದಿದ್ದಾಳೆ ಎಂದು ಜನರು ಹಾಸ್ಯಮಾಡಬಹುದು ಎಂದರು."

ಮತ್ತೊಂದು ವೇಳೆ ಭಕ್ತನೊಬ್ಬನು ಬಂದು ತಾನೊಂದು ಉಚಿತ ಔಷಧಾಲಯವನ್ನು ಬಡವರಿಗೆ ಮಾತ್ರ ಇಟ್ಟಿರುವುದಾಗಿಯೂ ಅನೇಕ ವೇಳೆ ಅನುಕೂಲಸ್ಥರೂ ಅಲ್ಲಿಗೆ ಬರುವರೆಂದೂ ತಿಳಿಸಿ, "ಅದು ಸರಿಯೆ?" ಎಂದು ಪ್ರಶ್ನೆ ಮಾಡಿದನು. ಇವರು ಕೆಲವುಕಾಲ ಯೋಚಿಸಿ, "ಬಡವರಿಗೆ ಮಾತ್ರ ಎಂದು ತಿಳಿದೂ ಕೂಡ ಅವರು ನಿಮ್ಮಲ್ಲಿಗೆ ಬಂದರೆ ಔಷಧಿ ಕೊಡಿ. ಯಾರು ಬೇಡುತ್ತಾರೋ ಅವರೆಲ್ಲ ಬಡವರೆ" ಎಂದರು.

ಒಂದು ಸಂಸ್ಥೆ ಅನೇಕ ಕಾಲ ಬಾಳಬೇಕಾದರೆ, ಅದರಿಂದ ಸಮಾಜಕ್ಕೆ ಅನುಕೂಲವಾಗಬೇಕಾದರೆ, ಅವರಲ್ಲಿರುವವರೆಲ್ಲ ಪ್ರೇಮದಿಂದ ಬದ್ಧರಾಗಿರಬೇಕು. ಹಾಗಲ್ಲದೆ ಸೈನ್ಯದಲ್ಲಿರುವ ಕಾನೂನು ನಿಯಮಗಳು ಮಾತ್ರ ಇದ್ದರೆ ಪ್ರಯೋಜನವಿಲ್ಲ. ಇವರಿಗೆ ಸಂಘದ ಏಳಿಗೆಗೆ ಮೂಲ ಶಕ್ತಿ ಎಲ್ಲಿದೆ ಎನ್ನುವುದು ತಿಳಿದಿತ್ತು. ಶ್ರೀರಾಮಕೃಷ್ಣಸಂಘವೆಂಬುದು ಅವರ ಒಂದು ಕುಟುಂಬದಂತೆ ಇತ್ತು. ಅದನ್ನು ಹೇಗೆ ಉತ್ತಮ ರೀತಿಯಲ್ಲಿಡಬೇಕು, ಯಾವ ಆದರ್ಶ ಸಂಘಕ್ಕೆ ಸೇರಿದವರಲ್ಲಿರಬೇಕೆಂದು ತಿಳಿದಿತ್ತು. ಒಂದು ಆಶ್ರಮದ ಹಿರಿಯರೊಬ್ಬರು ತಮ್ಮ ಆಶ್ರಮದಿಂದ ಇವರಲ್ಲಿಗೆ ಅನೇಕವೇಳೆ ಬಂದು ಹೋಗುತ್ತಿರುವ ಬ್ರಹ್ಮಚಾರಿಯ ಮೇಲೆ ದೂರು ಹೇಳುತ್ತ, "ನೀವು ಅವನು ಬಂದಾಗಲೆಲ್ಲ ರುಚಿರುಚಿಯಾದ ತಿಂಡಿ ಕೊಟ್ಟು ಪ್ರೀತಿಯಿಂದ ಮಾತನಾಡಿ ಕಳುಹಿಸುತ್ತೀರಿ. ಅದರಿಂದ ಅವನು ನಾನು ಹೇಳಿದ ಮಾತನ್ನೇ ಕೇಳುವುದಿಲ್ಲ. ನೀವು ಸ್ವಲ್ಪ ಬುದ್ಧಿ ಕಲಿಸಿ ಅವನಿಗೆ" ಎಂದರು. ಅದಕ್ಕೆ ಶ್ರೀ ಶಾರದಾದೇವಿಯವರು, "ಸಂಘಕ್ಕೆ ಸೇರಿದವರೆಲ್ಲರೂ ನನ್ನ ಮಕ್ಕಳು. ಅವರನ್ನು ಪ್ರೀತಿಸಿ ರುಚಿಯಾದ ತಿಂಡಿ ಪದಾರ್ಥಗಳನ್ನು ಕೊಟ್ಟರೆ ನೀನು ಯಾಕೆ ನನ್ನ ಮೇಲೆ ತಪ್ಪು ಹೊರಿಸುವುದು. ಮಗುವನ್ನು ಪ್ರೀತಿಸುವುದು ತಾಯಿಯ ಕರ್ತವ್ಯವಲ್ಲವೆ?" ಎಂದರು. ಹಾಗೆ ದೂರಿ ಪ್ರಯೋಜನವಿಲ್ಲವೆಂದೂ, ಆತನ ಮನಸ್ಸನ್ನು ಪ್ರೀತಿಯಿಂದ ಒಲಿಸಿಕೊಂಡು ದಾರಿಗೆ ಬರುವಂತೆ ಮಾಡಬೇಕೆಂದು ಹೇಳಿದರು. ಯಾರು ಮನೆ ಮಠಗಳನ್ನು ತೊರೆದು ಆಶ್ರಮವನ್ನು ಸೇರಿರುತ್ತಾರೋ ಅವರ ವಿಚಾರವಾಗಿ ಶ್ರೀ ಶಾರದಾದೇವಿಯವರು, "ಗುರುದೇವ! ನಿನಗೋಸ್ಕರ ಯಾರು ಎಲ್ಲವನ್ನೂ ತೊರೆದುಬಂದಿರುವರೋ ಅವರಿಗೆ ಆಹಾರ ಬಟ್ಟೆಯ ತಾಪತ್ರಯವಿಲ್ಲದಿರಲಿ, ನಿನ್ನ ಆದರ್ಶಕ್ಕೋಸುಗ ಬಂದವರೆಲ್ಲ ಸಂಘದಲ್ಲಿಯೇ ಇದ್ದು ಒಬ್ಬರನ್ನೊಬ್ಬರು ಅಗಲದೆ ಎಲ್ಲರೂ ಜೀವನವನ್ನು ಉತ್ತಮವಾಗಿ ಇಟ್ಟುಕೊಳ್ಳಲಿ. ಜಗದ ತಾಪತ್ರಯಗಳಿಗೆ

ಸಿಕ್ಕಿದ ಸಂಸಾರಿಗಳು ಇವರೆಡೆಗೆ ಬಂದು ಮಾತನಾಡಿದಾಗ ಶಾಂತಿಪಡೆದು ಹೋಗಲಿ" ಎಂದು ಪ್ರಾರ್ಥಿಸುತ್ತಿದ್ದರು.

ತಮ್ಮ ಆಲೋಚನೆಯ ಆಧಾರದಿಂದ ಒಂದು ನಿರ್ಧಾರಕ್ಕೆ ಬಂದ ರೆಂದರೆ ಯಾರು ಅದಕ್ಕೆ ವಿರುದ್ಧವಾಗಿ ಎಷ್ಟು ಹೇಳಿದರೂ ಸುಲಭವಾಗಿ ಬದಲಾಯಿಸುತ್ತಿರಲಿಲ್ಲ. ಒಂದು ಸಲ ಕಾಶ್ಮೀರದಲ್ಲಿ ಸ್ವಾಮಿ ವಿವೇಕಾ ನಂದರು ಸಂಚಾರಮಾಡುತ್ತಿದ್ದಾಗ ಒಬ್ಬ ಫಕೀರನು ಇವರನ್ನು ಶಪಿಸಿದನು. ಅದರಂತೆ ಅವರಿಗೆ ಆಗಿಹೋದಮೇಲೆ, "ಏನು ಶ್ರೀರಾಮಕೃಷ್ಣರು ನನ್ನನ್ನು ಈ ಮನುಷ್ಯನ ಶಾಪದಿಂದ ಬಿಡಿಸಲು ಅಶಕ್ತರಾದರಲ್ಲ" ಎಂದು ಸ್ವಲ್ಪ ಅಸಮಾಧಾನವಾಯಿತು. ಇದನ್ನು ಶ್ರೀ ಶಾರದಾದೇವಿಯವರಿಗೆ ಹೇಳಿದರು. ಅದಕ್ಕೆ ಅವರು, "ನೀನು ಅನುಭವಿಸಿದರೂ ಒಂದೇ, ಶ್ರೀರಾಮಕೃಷ್ಣರು ಅನುಭವಿಸಿದರೂ ಒಂದೇ. ಅವರೇ ತಮ್ಮ ಜೀವನ ಕಾಲದಲ್ಲಿ ಕೊಟ್ಟ ಶಾಪವನ್ನು ನಿರಾಕರಿಸದೆ ಸ್ವೀಕರಿಸಿದರು. ಅವರು ಯಾವ ವಿದ್ಯೆಯನ್ನೂ ನಾಶಮಾಡಲು ಬರಲಿಲ್ಲ. ಎಲ್ಲವನ್ನೂ ಪೂರ್ತಿ ಮಾಡಲು ಬಂದರು" ಎಂದರು. ಇದನ್ನು ಕೇಳಿ ಸ್ವಾಮಿ ವಿವೇಕಾನಂದರ ಸಂದೇಹ ಪರಿಹಾರವಾಯಿತು.

ಲಜ್ಜೆತನ, ಇನ್ನೊಬ್ಬರನ್ನು ನೋಯಿಸದೇ ಇರುವುದು, ಅವರ ಹುಟ್ಟು ಗುಣವಾದರೂ ಕೆಲವು ಸಮಯದಲ್ಲಿ ಭೈರವಿಯಂತೆ ಉಗ್ರಸ್ವರೂಪ ತಾಳಿದ ಕೆಲವು ಪ್ರಸಂಗಗಳಿವೆ. ಅವುಗಳಲ್ಲಿ ಅವರು ಹಿಂದೆ ಕಮಾರಪುಕುರ ದಲ್ಲಿದ್ದಾಗ ಇವರನ್ನು ಅಟ್ಟಿಸಿಕೊಂಡು ಬಂದ ಕಾಮವಿಕಾರಿಯೊಂದಿಗೆ ಆದ ಪ್ರಸಂಗವನ್ನು ಆಗಲೇ ನಾವು ಓದಿರುವೆವು.

ಪ್ರಾಚೀನ ಸಂಪ್ರದಾಯದ ಬ್ರಾಹ್ಮಣ ಕುಲದಲ್ಲಿ ಜನಿಸಿದವರಾ ದರೂ, ಎಂತಹ ಸುಧಾರಕ ಚಿತ್ತವಿತ್ತು ಎಂಬುದು ಕೆಳಗೆ ಹೇಳುವ ಸಂಗತಿ ಯಿಂದ ಗೊತ್ತಾಗುತ್ತದೆ.

ಭಕ್ತೆಯೊಬ್ಬಳು ಇವರಲ್ಲಿಗೆ ಬಂದು, "ನನಗೆ ಐದು ಮಂದಿ ಹೆಣ್ಣು ಮಕ್ಕಳು ಇರುವರು. ಅವರ ವಿವಾಹಮಾಡುವುದು ಕಷ್ಟವಾಗಿ ಚಿಂತೆ ಹಿಡಿದಿದೆ" ಎಂದಳು. ಅದಕ್ಕೆ ಶ್ರೀ ಶಾರದಾದೇವಿಯರು, "ಮದುವೆ ಮಾಡುವುದಕ್ಕೆ ಆಗದೇ ಇದ್ದರೆ ಚಿಂತೆಯೇಕೆ, ನಿವೇದಿತ ಸ್ಕೂಲಿಗೆ ಕಳುಹಿಸು, ಓದುಬರಹ ಕಲಿಯಲಿ. ಆಮೇಲೆ ಸ್ತ್ರೀವಿದ್ಯಾ ಪ್ರಚಾರ ಮಾಡಿ ದೇಶಸೇವೆ ಮಾಡುತ್ತಾರೆ. ಅದರಿಂದ ಆತ್ಮೋದ್ಧಾರವೂ ಆಗು ತ್ತದೆ" ಎಂದರು. ಅಲ್ಲಿದ್ದ ಇನ್ನೊಬ್ಬರು, "ಈಗ ಗಂಡು ಸಿಕ್ಕುವುದೇ

ಕಷ್ಟವಾಗಿದೆ. ಅನೇಕ ಹುಡುಗರು ಮದುವೆಗೇ ಒಪ್ಪುವುದಿಲ್ಲ" ಎಂದರು. ಶ್ರೀ ಶಾರದಾದೇವಿಯವರು, "ಈಗ ಅವರಿಗೂ ಬುದ್ಧಿ ಬಂದಿದೆ. ಸಂಸಾರದ ಅನಿತ್ಯತೆ, ಅಸುಖಗಳೂ ಈಗ ಅವರಿಗೂ ತಿಳಿದಿದೆ. ಹೆಂಗಸರಿಂದ ಎಷ್ಟು ದೂರವಾಗಿದ್ದರೆ ಅಷ್ಟೂ ಒಳ್ಳೆಯದು, ಏಕಾಗ್ರಚಿತ್ತದಿಂದ ದೇಶಸೇವೆ ಮಾಡಲು ಸಾಧ್ಯವಾಗುತ್ತದೆ'' ಎಂದರು.

ಒಂದು ದಿನ ನೆರೆದ ಗೃಹಿಣೀ ಭಕ್ತರೊಡನೆ ಹೀಗೆಂದರು: "ವಿವಾಹಿತ ಸ್ತ್ರೀಪುರುಷರು ಒಂದೆರಡು ಮಕ್ಕಳಾದಮೇಲೆ ಸಂಯಮಿಗಳಾಗಿ ಬಾಳಬೇಕೆಂದು ಶ್ರೀರಾಮಕೃಷ್ಣರು ಹೇಳುತ್ತಾರೆ. ನಮ್ಮಲ್ಲಿ ತಂದೆತಾಯಿಗಳಿಗೆ ಹೊಟ್ಟೆಗೆ ಇರಲಿ ಇಲ್ಲದೇ ಇರಲಿ, ಮಕ್ಕಳಾಗುವುದೇನೋ ತಪ್ಪದೇ ಇರುವುದಿಲ್ಲ. ಆ ಮಕ್ಕಳೊ ಹುಟ್ಟುತ್ತಲೇ ದಾರಿದ್ರ್ಯದಿಂದ ಪೀಡಿತರಾಗಿ ನರಕಜೀವನವನ್ನು ಮಾಡುತ್ತಾರೆ. ಹುಡುಗಿ ನೋಡಿದರೆ ಚೋಟುದ್ದ ಇರುವಳು. ಆಗಲೇ ಹಿಂದೆ ಮುಂದೆ ಸೊಂಟದಮೇಲೆ ಮಕ್ಕಳು, ನಂತರ ಸಂಸಾರದಲ್ಲಿ ಆನೆ ಕುಗ್ಗಿ, ನಿರಾಶರಾಗಿ ಮಾನವ ಜೀವನವನ್ನು ಹಳಿಯುಯುತ್ತಾರೆ.'' ಅಲ್ಲಿದ್ದವರೊಬ್ಬರು, "ಪತಿಯೇ ಪರದೈವವೆಂದು ಶಾಸ್ತ್ರಗಳು ಹೇಳುತ್ತವೆ. ಹೀಗಿರುವಾಗ ಅವರಿಗೆ ವಿರೋಧವಾಗಿ ಸಂಯಮಿಯಾಗುವುದು ಪಾಪವಲ್ಲವೇ ?'' ಎಂದು ಪ್ರಶ್ನಿಸಿದರು. ಶ್ರೀ ಶಾರದಾದೇವಿಯವರು, " ದೇವರಿಗೋಸುಗ ಹಾಗೆ ಮಾಡಿದರೆ ಪಾಪವೆಲ್ಲಿಂದ ಬರುತ್ತದೆ. ಇಂದ್ರಿಯ ಸಂಯಮ ಆವಶ್ಯಕ. ಹಾಗೆ ಮಾಡಿದರೆ ಪತಿ ಉದ್ಧಾರವಾಗಿ ಪರದೈವವಾಗುತ್ತಾನೆ'' ಎಂದರು.

ಶ್ರೀ ಶಾರದಾದೇವಿಯವರನ್ನು ಶ್ರೀರಾಮಕೃಷ್ಣಸಂಘಕ್ಕೆ ಸೇರಿದ ಹಿರಿಯ ಸ್ವಾಮಿಗಳೆಲ್ಲರೂ ಗೌರವದಿಂದ ಕಾಣುತ್ತಿದ್ದರು. ಸ್ವಾಮಿ ವಿವೇಕಾನಂದರು ತಮ್ಮ ತಾಯಿಗಿಂತಲೂ ಹೆಚ್ಚು ಭಕ್ತಿಗೌರವಗಳನ್ನು ಇವರಿಗೆ ಸಲ್ಲಿಸುತ್ತಿದ್ದರು. ಅವರು ಪಾಶ್ಚಾತ್ಯದೇಶಗಳಿಂದ ಹಿಂತಿರುಗಿ ಬಂದಮೇಲೆ ಬೇಲೂರು ಮಠವನ್ನು ಕಟ್ಟಿ ಒಂದು ದಿನ ಶ್ರೀ ಶಾರದಾದೇವಿಯವರನ್ನು ಅಲ್ಲಿಗೆ ಸ್ವಾಗತಿಸಿದರು. ಅಂದು ಸ್ವಾಮಿ ವಿವೇಕಾನಂದರ ತಾಯಿ ಅಲ್ಲಿಗೆ ಬಂದರು. ಅವರು ತಮ್ಮ ಮಗ ಕಟ್ಟಿದ ಕಟ್ಟಡ, ಮಾಡಿಸಿದ ತೋಟ ಎಲ್ಲವನ್ನೂ ನೋಡುತ್ತ, ಒಂದು ಮಾತೃಸಹಜವಾದ ಹೆಮ್ಮೆಯಿಂದ, ಎಲ್ಲ ನನ್ನ ಮಗ ಮಾಡಿದ್ದು ಎಂದು ಸಂತೋಷಿಸಿ ತೋಟದಲ್ಲಿ ಬೆಳೆದ ಮೆಣಸಿನಕಾಯಿಯನ್ನು ಕೀಳುವುದರಲ್ಲಿ ಮಗ್ನರಾಗಿದ್ದರು. ಇದು ಸ್ವಾಮಿ ವಿವೇಕಾನಂದರಿಗೆ ತಿಳಿದು, '' ಅಮ್ಮಾ ನೀನು ತರಕಾರಿ ಬಿಡಿಸು

ವುದರಲ್ಲಿಯೇ ಕಾಲ ಕಳೆಯುತ್ತೀಯೋ ಶ್ರೀ ಶಾರದಾದೇವಿಯವರ ದರ್ಶನ ವನ್ನು ಮಾಡುತ್ತೀಯೋ" ಎಂದು ಕೇಳಿ, "ಎಲ್ಲ ನನ್ನಿಂದ ಆದುದೆಂದು ಹಿಗ್ಗಬೇಡ. ನೋಡು ಅಲ್ಲಿ, ಶ್ರೀ ಶಾರದಾದೇವಿಯವರು ಇರುವರು. ಎಲ್ಲ ಅವರ ಅನುಗ್ರಹದಿಂದ ಆಯಿತು. ಪೂರ್ವ ಜನ್ಮದ ಪುಣ್ಯದಿಂದ ನನ್ನಂತಹ ಮಗ ಈ ಜನ್ಮದಲ್ಲಿ ಜನಿಸಿದನು. ಮುಂದೆಯೂ ನನ್ನಂತಹ ಮಕ್ಕಳೇ ಆಗಲಿ ಎಂದು ಆಕೆಯನ್ನು ಬೇಡು'' ಎಂದರು. ಸ್ವಾಮಿ ವಿವೇಕಾನಂದರಿಗೆ ಶ್ರೀರಾಮಕೃಷ್ಣರು ಬೇರೆ, ಶ್ರೀ ಶಾರದಾದೇವಿಯವರು ಬೇರೆಯಾಗಿರಲಿಲ್ಲ. ಎರಡು ದೇಹದಲ್ಲಿಯೂ ಒಂದೇ ಶಕ್ತಿ ಸಂಚರಿಸು ತ್ತಿತ್ತು. ಉಳಿದ ಶ್ರೀರಾಮಕೃಷ್ಣಸಂಘದ ಹಿರಿಯ ಸ್ವಾಮಿಗಳೂ ಕೂಡ ಇವರ ಒಂದು ಮಾತನ್ನು ವೇದವಾಕ್ಯದಂತೆ ಪರಿಪಾಲಿಸುತ್ತಿದ್ದರು.

ಒಮ್ಮೆ ಸ್ವಾಮಿ ವಿವೇಕಾನಂದರು, ''ಕೀರ್ತಿಯನ್ನು ಗಳಿಸುವುದು ಸುಲಭ. ಅದನ್ನು ಅರಗಿಸಿಕೊಳ್ಳುವುದು ಬಹಳ ಕಷ್ಟ" ಎಂದು ಹೇಳಿದರು. ಸಾಧಾರಣ ಜೀವಿಗಳಿಗೆ ಸ್ವಲ್ಪ ಕೀರ್ತಿ ಬಂದರೆ ಸಾಕು ಇನ್ನೊಬ್ಬರು ತಮ್ಮನ್ನು ಹೊಗಳಿದರೆ ಸಾಕು, ಆಗಲೇ ಅವರ ತಲೆ ತಿರುಗುತ್ತದೆ. ಹೀಗಿರುವಾಗ ಸ್ವಾಮಿ ವಿವೇಕಾನಂದರೇ ಮುಂತಾದ ಜಗದ್ವಿಖ್ಯಾತ ಮಹಾ ವ್ಯಕ್ತಿಗಳು ಇವರಿಗೆ ಭಕ್ತಿಗೌರವಗಳನ್ನು ಅರ್ಪಿಸುತ್ತಿದ್ದರೂ ಅವು ಇವರು ತಮಗೆ ಸಲ್ಲುವುವೆಂದು ತಿಳಿಯದೆ ಶ್ರೀರಾಮಕೃಷ್ಣರ ಪರವಾಗಿ ಸ್ವೀಕರಿಸಿ ಪುನಃ ಅದನ್ನು ಅವರಿಗೇ ಕೊಟ್ಟು ಧನ್ಯರಾಗುತ್ತಿದ್ದರು. ಅವರ ಜೀವನದಲ್ಲಿ ನಾನು ಎಂಬ ಅಹಂಕಾರ ಸ್ವಲ್ಪವೂ ಇರಲಿಲ್ಲ. ಎಲ್ಲ ಅಳಿಸಿ ಹೋಗಿತ್ತು. ಅಲ್ಲಿ ತಾಂಡವಾಡುತ್ತಿದ್ದುದು ನೀನು ಎಂಬ ದೈನ್ಯತೆಯ ಮಧುರಭಾವವೊಂದೆ. ಅವರ ಜೀವನದಲ್ಲಿ ಮಾತೃಪ್ರೇಮ, ಗುರುದೇವ ನಲ್ಲಿ ಭಕ್ತಿ, ದೈನ್ಯತೆ ಎಂಬ ಮೂರು ಮಹಾ ಗುಣಗಳ ನದಿ ಸಂಗಮ ವಾಗಿವೆ. ಉಳಿದ ಸುಗುಣಗಳೆಲ್ಲ ಇವುಗಳಿಗೆ ಉಪನದಿಯಾಗಿ ಹರಿಯುತ್ತಿವೆ.

## ೧೪. ತೀರ್ಥಯಾತ್ರೆ

ಶ್ರೀರಾಮಕೃಷ್ಣರು ತಮ್ಮ ಮಹಾಸಮಾಧಿಗೆ ಮುಂಚೆ ಶ್ರೀ ಶಾರದಾ ದೇವಿಯವರನ್ನು ಕರೆದು, "ನಾನು ಯಾವ ಯಾವ ಪುಣ್ಯ ಸ್ಥಳಗಳನ್ನು ನೋಡಿಲ್ಲವೋ, ನೀನು ಅಲ್ಲಿಗೆ ಹೋಗಿ'' ಬಾ ಎಂದರು. ಅದರಂತೆಯೇ ಶ್ರೀ ಶಾರದಾದೇವಿಯವರು ಬೃಂದಾವನಕ್ಕೆ ಹೋಗಿ ಬಂದ ವಿಚಾರವನ್ನು ಆಗಲೆ ಓದಿರುವೆವು. ನಂತರ ಜೀವನದಲ್ಲಿ ಇವರು ಯಾವ ಯಾವ ಪುಣ್ಯ ಸ್ಥಳಗಳಿಗೆ ಹೋದರು ಎಂಬುದನ್ನು ಇಲ್ಲಿ ನೋಡೋಣ. ಶ್ರೀರಾಮ ಕೃಷ್ಣರು ತಮ್ಮ ತಾಯಿ ಕಾಲವಾದಮೇಲೆ ಶ್ರೀ ಶಾರದಾದೇವಿಯವರಿಗೆ, ಅವರ ತಾಯಿಯ ಹೆಸರಿನಲ್ಲಿ ಗಯೆಗೆ ಹೋದಾಗ ಪಿಂಡವನ್ನು ಹಾಕೆಂದು ಹೇಳಿದ್ದರು. ಕ್ರಿ. ಶ. ೧೮೮೮ನೇ ಏಪ್ರಿಲ್ ತಿಂಗಳಲ್ಲಿ ಗಯೆಗೆ ಹೋಗಿ, ತಮ್ಮ ಅತ್ತೆಗೆ ಪಿಂಡದಾನ ಮಾಡಿದರು. ಅಲ್ಲಿಂದ ಸುಮಾರು ಏಳು ಮೈಲಿ ದೂರದಲ್ಲಿ ಬುದ್ಧ ದೇವನು ತಪಸ್ಸುಮಾಡಿ ಜ್ಞಾನಸಂಪಾದಿಸಿದ ಬುದ್ಧಗಯೆಗೆ ಹೋಗಿದ್ದರು. ಅಲ್ಲಿ ಒಂದು ಹಿಂದೂ ಸನ್ಯಾಸಿಗಳ ಮಠ ವಿದೆ. ಅದರಲ್ಲಿರುವ ಸನ್ಯಾಸಿಗಳಿಗೆ ಊಟಕ್ಕೆ ಬಟ್ಟೆಗೆ ಯಾವ ಆತಂತಕವೂ ಇರಲಿಲ್ಲ. ಇವರನ್ನು ನೋಡಿದಾಗ ಅವರ ಮನಸ್ಸಿನಲ್ಲಿ ಆಗ ದಿಕ್ಕಿಲ್ಲದೆ ಒಂದು ಪಾಳುಮನೆಯಲ್ಲಿ ಭಿಕ್ಷಾವೃತ್ತಿಯಿಂದ ಜೀವಿಸುತ್ತಿದ್ದ ಶ್ರೀರಾಮ ಕೃಷ್ಣರ ಸನ್ಯಾಸಿ ಶಿಷ್ಯವೃಂದದ ನೆನಪಾಯಿತು. ಶ್ರೀ ಗುರುದೇವನಿಗೆ, ತಮ್ಮ ಶಿಷ್ಯರಿಗೂ ಇಂತಹ ಒಂದು ವಸತಿಗೃಹವನ್ನು ನೀಡೆಂದು ಬೇಡಿದರು. ಕೆಲವು ವರ್ಷಗಳಾದಮೇಲೆ ಇವರ ಬಯಕೆ ಈಡೇರಿತು. ಸ್ವಾಮಿ ವಿವೇಕಾನಂದರು ಬೇಲೂರು ಮಠವನ್ನು ಕಟ್ಟಿಸಿದರು.

ಅದೇ ವರ್ಷ ಡಿಸೆಂಬರ್ ತಿಂಗಳಲ್ಲಿ ಶ್ರೀರಾಮಕೃಷ್ಣಸಂಘಕ್ಕೆ ಸೇರಿದ ಕೆಲವು ಸನ್ಯಾಸಿ ಶಿಷ್ಯರೊಂದಿಗೆ ಜಗನ್ನಾಥಕ್ಕೆ ಹೋದರು. ಇವರು ಇಳಿದುಕೊಂಡಿದ್ದ ಮನೆಯ ಭಕ್ತನು ಹೆಸರುವಾಸಿಯಾದ ವಕೀಲನಾಗಿ ದ್ದನು. ಗುಡಿಯ ಮುಖ್ಯ ಪೂಜಾರಿಗೆ ಇವರಲ್ಲಿ ತುಂಬಾ ಗೌರವವಿತ್ತು. ಒಂದು ದಿನ ಪೂಜಾರಿ ಬಂದು ಶ್ರೀ ಶಾರದಾದೇವಿಯವರನ್ನು ದೇವಸ್ಥಾನದ ಮರ್ಯಾದೆಗಳೊಂದಿಗೆ ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಹೋಗಬೇಕೆಂದಿರು ವೆನೆಂದನು. ಶ್ರೀ ಶಾರದಾದೇವಿಯವರು ಅದಕ್ಕೊಪ್ಪದೆ, "ಜಗನ್ನಾಥ ನನ್ನು ನೋಡಲು ಹೋಗುವಾಗ ಪಲ್ಲಕ್ಕಿಯಲ್ಲಿ ಹೋಗುವುದೆ? ನೀನು ಮುಂದೆ ನಡೆ. ನಾನು ಹಿಂದೆ ದಿಕ್ಕಿಲ್ಲದ ಭಿಕಾರಿಯಂತೆ ಜಗನ್ನಾಥ ನನ್ನು ನೋಡಲು ಬರುತ್ತೇನೆ" ಎಂದರು. ಶ್ರೀರಾಮಕೃಷ್ಣರು ವೈಷ್ಣವ

ಕ್ಷೇತ್ರದಲ್ಲಿ ಅತ್ಯಂತ ಮುಖ್ಯವಾದ ಈ ಸ್ಥಳಕ್ಕೆ ಬಂದಿರಲಿಲ್ಲವಾಗಿ ಅವರ ಭಾವಚಿತ್ರವನ್ನು ಇವರು ತಮ್ಮೊಂದಿಗೆ ತೆಗೆದುಕೊಂಡು ಗುಡಿಯಲ್ಲಿ ಅದಕ್ಕೆ ಜಗನ್ನಾಥನ ದರ್ಶನ ಮಾಡಿಸಿದರು.

ಕ್ರಿ. ಶ. ೧೮೯೪ ರಲ್ಲಿ ಕಾಶಿ ಮತ್ತು ಬೃಂದಾವನವನ್ನು ಎರಡನೇ ಸಾರಿ ಸಂದರ್ಶಿಸಿದರು. ಪುನಃ ಕ್ರಿ. ಶ. ೧೯೦೧ ರಲ್ಲಿ ಕೆಲವು ಸನ್ಯಾಸಿ ಮತ್ತು ಗೃಹಸ್ಥ ಭಕ್ತರೊಂದಿಗೆ ಮೂರನೇ ವೇಳೆ ನೋಡಲು ಬಂದರು. ಆಗಲೇ ಇವರ ಕಾಲಿನಲ್ಲಿ ಒಂದು ಕುರು ಎದ್ದು ತುಂಬಾ ಯಾತನೆ ಕೊಡುತ್ತಿತ್ತು. ಇದನ್ನು ಮುಟ್ಟಲು ಯಾರಿಗೂ ಆಸ್ಪದ ಕೊಡುತ್ತಿರಲಿಲ್ಲ. ಇದನ್ನು ತಿಳಿದು ಸ್ವಾಮಿ ಪ್ರೇಮಾನಂದರು ಭಕ್ತನಾದ ವೈದ್ಯನೊಂದಿಗೆ ಹೇಳಿ ಇವರ ಚಿಕಿತ್ಸೆಗೆ ಒಂದು ಉಪಾಯವನ್ನು ಮಾಡಿದರು. ಆತನು ಇವರಿಗೆ ಕಾಲುಮುಟ್ಟಿ ನಮಸ್ಕಾರ ಮಾಡುವ ನೆಪದಲ್ಲಿ ಒಂದು ಸಣ್ಣ ಚಾಕುವಿನಿಂದ ಕುರುವಿಗೆ ಶಸ್ತ್ರಚಿಕಿತ್ಸೆ ಮಾಡಿದನು. ಇದನ್ನು ನೋಡಿದಾಗ ಶ್ರೀ ಶಾರದಾದೇವಿಯವರಿಗೆ ಸ್ವಲ್ಪ ನೋವಾದರೂ ಅದು ನೀರಿನ ಮೇಲೆ ಬರೆದ ಅಕ್ಷರದಂತೆ ಅಳಿಸಿಹೋಗಿ ಅವರು ತೋರಿಸಿದ ಬುದ್ಧಿ ಚಾತುರ್ಯವನ್ನು ಮೆಚ್ಚಿದರು. ಇದರಿಂದ ಅವರಿಗೆ ಸಂಪೂರ್ಣ ಗುಣವಾಯಿತು.

ಮಧ್ಯದಲ್ಲಿ ಒಮ್ಮೆ ಕಮಾರಪುಕುರಕ್ಕೆ ಸುಮಾರು ೨೮ ಮೈಲಿಗಳ ದೂರದಲ್ಲಿರುವ ವಿಷ್ಣುಪುರವೆಂಬ ಊರಿಗೆ ಹೋಗಿದ್ದರು. ಶ್ರೀರಾಮಕೃಷ್ಣರು ಅದನ್ನು ಗುಪ್ತ ಬೃಂದಾವನವೆಂದೂ, ಅದನ್ನು ನೀನು ಹೋಗಿ ನೋಡು ಎಂದು ಹೇಳಿದ್ದರು

ಕ್ರಿ. ಶ. ೧೯೧೯ನೇ ಡಿಸೆಂಬರ್ ತಿಂಗಳಲ್ಲಿ ರಾಮೇಶ್ವರಕ್ಕೆ ಹೊರಟು ದಾರಿಯಲ್ಲಿ ಬಾಲಸೂರ ಜಿಲ್ಲೆಯ ಕೋಥಾರ ಎಂಬ ಊರಿನಲ್ಲಿ ಸುಮಾರು ಎರಡು ತಿಂಗಳು ಕಳೆದರು. ಅಲ್ಲಿನ ಅಂಚೆ ಅಧಿಕಾರಿಯು ಕ್ರೈಸ್ತ ಧರ್ಮಕ್ಕೆ ಕೆಲವು ವರ್ಷಗಳ ಹಿಂದೆ ಸೇರಿದ್ದನು. ಪುನಃ ಹಿಂದೂಧರ್ಮಕ್ಕೆ ಬರಬೇಕೆಂದು ತವಕಪಡುತ್ತಿದ್ದನು. ಶ್ರೀ ಶಾರದಾದೇವಿಯರೊಂದಿಗೆ ಬಂದಿದ್ದ ಸ್ವಾಮಿಗಳು ಅವನನ್ನು ಹಿಂದೂವನ್ನಾಗಿಮಾಡಿ ಗಾಯತ್ರಿ ಮಂತ್ರವನ್ನು ಉಪದೇಶಿಸಿದರು. ನಂತರ ಶ್ರೀ ಶಾರದಾದೇವಿಯವರು ಅವನಿಗೆ ದೀಕ್ಷಾಮಂತ್ರವನ್ನು ಕೊಟ್ಟರು. ಫೆಬ್ರವರಿ ಕೊನೆಯಲ್ಲಿ ಅಲ್ಲಿಂದ ಹೊರಟು ಅವರು ಮದ್ರಾಸನ್ನು ಸೇರಿದರು. ಅವರ ಜತೆಯಲ್ಲಿ ಎಂಟು ಜನ ಹೆಂಗಸರಿದ್ದರು. ಮದ್ರಾಸಿನಲ್ಲಿ ಒಂದು ತಿಂಗಳು ಕಳೆದರು. ಅನೇಕ

ಭಕ್ತಾದಿಗಳಿಗೆ ಉಪದೇಶಕೊಟ್ಟರು. ಅಲ್ಲಿನ ಮಹಿಳೆಯರು ಬಂದು ಅವರ ಭಾಷೆಯಾದ ತಮಿಳಿನಲ್ಲಿ ಮಾತನಾಡುತ್ತಿದ್ದರು. ಶ್ರೀ ಶಾರದಾದೇವಿಯವರಿಗೆ ಅವರ ಮಾತನ್ನು ಬಂಗಾಳಿಯಲ್ಲಿ ಹೇಳಬೇಕಾಗಿತ್ತು. ಕೆಲವು ವೇಳೆ ಇವರ ಹತ್ತಿರ ಯಾರೂ ತಮಿಳು ಮಾತನ್ನು ಬಲ್ಲವರು ಇಲ್ಲದಿರುವಾಗ ಅವರ ಮಾತಿನ ಅರ್ಥವನ್ನು ಊಹಿಸಿ ಇವರು ಬಂಗಾಳಿಯಲ್ಲಿ ಮಾತನಾಡುವರು. ಭಾಷೆಗಳು ಬೇರೆಯಾದರೂ ಹೃದಯ ಒಂದಾಗಿದ್ದರೆ ಒಬ್ಬರ ಅರ್ಥವನ್ನು ಇನ್ನೊಬ್ಬರು ಗ್ರಹಿಸಬಹುದಾಗಿತ್ತು ಎಂದು ಊಹಿಸಬಹುದು! ಒಂದು ದಿನ ಕೆಲವು ಜನ ಮಹಿಳೆಯರು ಬಂದು ಇವರನ್ನು ಉಪನ್ಯಾಸ ಕೊಡಿ ಎಂದು ಕೇಳಿದರು. ಇವರಿಗೆ ನಾಲ್ಕು ಜನರೆದುರಿಗೆ ಕಾಣಿಸಿಕೊಳ್ಳುವುದೇ ಅಭ್ಯಾಸವಿರಲಿಲ್ಲ. ಎಲ್ಲರೆದುರಿಗೆ ಬಹಿರಂಗದಲ್ಲಿ ನಿಂತು ಉಪನ್ಯಾಸವನ್ನು ಕೊಡುವುದನ್ನು ಊಹಿಸಲೂ ಅಸಾಧ್ಯ. ದೈನ್ಯದಿಂದ ಅವರ ಕೋರಿಕೆಯನ್ನು ನಿರಾಕರಿಸಿದರು.

ನಂತರ ಮದ್ರಾಸಿನಿಂದ ಶ್ರೀರಾಮಕೃಷ್ಣಮಠದ ಅಧ್ಯಕ್ಷರಾದ ಶ್ರೀರಾಮಕೃಷ್ಣಾನಂದ ಸ್ವಾಮಿಗಳೊಂದಿಗೆ ರಾಮೇಶ್ವರಕ್ಕೆ ಹೊರಟರು. ರಾಮೇಶ್ವರದ ದೇವಸ್ಥಾನ ರಾಮನಾಡಿನ ರಾಜರ ಅಧಿಕಾರಕ್ಕೊಳಪಟ್ಟಿತ್ತು. ಅವರು ಸ್ವಾಮಿ ವಿವೇಕಾನಂದರ ಭಕ್ತರು. ತಮ್ಮ ಗುರುಗಳಾದ ಶ್ರೀರಾಮಕೃಷ್ಣರ ಪತ್ನಿಯೆಂದು ಕೇಳಿ ಅವರಿಗೆ ಬೇಕಾದ ಸೌಕರ್ಯವನ್ನೆಲ್ಲಾ ಒದಗಿಸಿದರು. ಶ್ರೀ ಶಾರದಾದೇವಿಯರೊಂದಿಗೆ ಬಂದವರೆಲ್ಲರಿಗೂ ಗರ್ಭಗುಡಿಯೊಳಗೆ ಹೋಗಿ ಶಿವನನ್ನು ಮುಟ್ಟುವುದಕ್ಕೆ ಅವಕಾಶಕೊಟ್ಟರು. ಭಕ್ತರು ಯಾರೋ ಒಬ್ಬರು ಇವರಿಗೆ ಶಿವನ ಪೂಜೆಗೆಂದು ನೂರೆಂಟು ಚಿನ್ನದ ಬಿಲ್ವಪತ್ರೆಗಳನ್ನು ಕೊಟ್ಟಿದ್ದರು. ಪೂಜೆಯಾದಮೇಲೆ ದೇವಸ್ಥಾನಕ್ಕೆ ಸಂಬಂಧಪಟ್ಟ ಒಡವೆ ವಸ್ತುಗಳನ್ನೆಲ್ಲಾ ತೋರಿಸಿದರು. ನಂತರ ರಾಮನಾಡಿನ ರಾಜರ ಮನೆಗೆ ಕರೆದುಕೊಂಡು ಹೋಗಿ ರಾಜರ ಮನೆತನಕ್ಕೆ ಸೇರಿದ ಅನೇಕ ಬೆಲೆ ಬಾಳುವ ಆಭರಣಗಳನ್ನೆಲ್ಲಾ ತೋರಿಸಿ, ತಾವು ಯಾವುದಾದರೂ ಒಂದನ್ನು ತೆಗೆದುಕೊಂಡರೆ ತಮಗೆ ತುಂಬಾ ಸಂತೋಷವಾಗುವುದೆಂದು ತಿಳಿಸಿದರು. ಇವರಿಗೆ ಏನನ್ನೂ ಕೇಳಲು ಇಚ್ಛೆ ಬರಲಿಲ್ಲ. ಅವರು ಸುಮ್ಮನೆ ಇದ್ದರೆ ಏನಾದರು ತಿಳಿದುಕೊಳ್ಳಬಹುದೆಂದು ಹತ್ತಿರಿದ್ದ ರಾಧೆಗೆ ನಿನಗೆ ಏನು ಬೇಕೋ ಅದನ್ನು ತೆಗೆದುಕೋ ಎಂದರು. ನಂತರ ಇವರಿಗೆ ಮನಸ್ಸಿನಲ್ಲಿ ಕಳವಳ ಉಂಟಾಯಿತು. ಇವಳು ಏನಾದರೂ ಒಡವೆಯನ್ನು ತೆಗೆದುಕೊಂಡರೆ, ಅವರು,

ಇವರಿಗೆ ಇನ್ನೂ ಆಸೆ ತಪ್ಪಿಲ್ಲವೆಂದು ಎಲ್ಲಿ ತಿಳಿದುಕೊಳ್ಳುತ್ತಾರೋ ಎಂಬ ಭೀತಿ ಇವರನ್ನು ಬಾಧಿಸಿತು ಒಳಗೇ, "ರಾಧೆ ಏನನ್ನೂ ತೆಗೆದುಕೊಳ್ಳದೇ ಇರಲಿ" ಎಂದು ಬೇಡಿಕೊಂಡರು. ರಾಧೆ ಸ್ವಲ್ಪ ಹೊತ್ತು ಕಣ್ಣುಗಳನ್ನು ಕೋರೈಸುತ್ತ ಹೊಳೆಯುತ್ತಿರುವ ಒಡವೆಗಳನ್ನು ನೋಡಿ, "ನನಗೆ ಯಾತಕ್ಕೆ ಇದೆಲ್ಲ. ಒಂದು ಸೀಸದಕಡ್ಡಿ ಕಳೆದುಹೋಗಿದೆ. ಅದು ಸಿಕ್ಕಿದರೆ ಸಾಕು'' ಎಂದಳು. ಶ್ರೀ ಶಾರದಾದೇವಿಯವರು, "ದೇವರೇ ಮಾನಕಾಪಾಡಿದ" ಎಂದು ಗುಡಿಯ ಹೊರಗೆ ಬರುವಾಗ ಅಂಗಡಿಯಿಂದ ಅರ್ಧಆಣೆ ಕೊಟ್ಟು ಒಂದು ಸೀಸದಕಡ್ಡಿಯನ್ನು ತೆಗೆದುಕೊಟ್ಟರು.

ರಾಮೇಶ್ವರದ ತೀರ್ಥಯಾತ್ರೆಯಾದಮೇಲೆ ಬೆಂಗಳೂರಿಗೆ ಬಂದು ಆಗತಾನೆ ಬಸವನಗುಡಿಯಲ್ಲಿ ಕಟ್ಟಿಸಿದ್ದ ಶ್ರೀರಾಮಕೃಷ್ಣ ಆಶ್ರಮದಲ್ಲಿ ಕೆಲವು ದಿನಗಳನ್ನು ಕಳೆದರು. ಆಶ್ರಮದ ಹಿಂದೆ ಇರುವ ಬಂಡೆಯಮೇಲೆ ಸಂಜೆಯ ಹೊತ್ತು ಹೋಗಿ ಕುಳಿತುಕೊಳ್ಳುತ್ತಿದ್ದರು. ಆಗತಾನೆ ಸಂಜೆ ಓಕಳಿಯಲ್ಲಿ ಆಡುವ ಮುಗಿಲುಗಳ ಹಿಂದೆ ಪಡುವಲಂಚಿನಲ್ಲಿ ಇಳಿಯುತ್ತಿರುವ ರವಿ, ಸ್ವಲ್ಪದೂರದಲ್ಲಿರುವ ಕೆಂಪಾಂಬುಧಿ ಕೆರೆ, ಸುತ್ತಲೂ ಮೌನದಿಂದ ತಲೆ ಎತ್ತಿರುವ ಬೆಟ್ಟಗುಡ್ಡಗಳು ಇವರ ಮನಸ್ಸನ್ನು ಧ್ಯಾನದ ಕಡೆಗೆ ಸೆಳೆಯುತ್ತಿದ್ದವಂತೆ. ಇಲ್ಲಿಯೂ ಅನೇಕ ಭಕ್ತರು ಬಂದು ದರ್ಶನ ಪಡೆದು ಉಪದೇಶ ಸ್ವೀಕರಿಸಿದರು.

ಹಿಂತಿರುಗಿ ಹೋಗುವಾಗ ಗೋದಾವರಿಯಲ್ಲಿ ಸ್ನಾನಮಾಡಲು ರಾಜಮಹೇಂದ್ರಿಯಲ್ಲಿ ಇಳಿದು ಮಾರನೇ ದಿನ ರೈಲು ಹತ್ತಿ ಕ್ರಿ. ಶ. ೧೯೧೧ ನೇ ಏಪ್ರಿಲ್ ೧೧ ನೇ ತಾರೀಖು ಕಲ್ಕತ್ತೆಯನ್ನು ಸೇರಿದರು.

ಕ್ರಿ. ಶ. ೧೯೧೨ ನೆಯ ನವೆಂಬರ್ ತಿಂಗಳಲ್ಲಿ ಅವರು ಮೂರನೆ ಬಾರಿ ಕಾಶಿಗೆ ಹೋಗಿ ಸುಮಾರು ಎರಡು ತಿಂಗಳಿದ್ದರು. ಶ್ರೀರಾಮಕೃಷ್ಣ ಸಂಘದವರು ಸ್ಥಾಪಿಸಿದ ಔಷಧಾಲಯವನ್ನು ನೋಡಿ ಸಂತೋಷಪಟ್ಟು ಆಶೀರ್ವದಿಸಿದರು.

ವಿರಾಮ ಬೇಕಾದಷ್ಟು ಇದ್ದುದರಿಂದ ಕಾಶಿಯಲ್ಲಿ ಲೆಕ್ಕವಿಲ್ಲದಷ್ಟು ಇರುವ ಗುಡಿಗಳನ್ನು ಪ್ರತಿದಿನವೂ ಹೋಗಿ ನೋಡುತ್ತಿದ್ದರು. ಒಂದು ದಿನ ಕಾಶಿಗೆ ಏಳು ಮೈಲಿ ದೂರದಲ್ಲಿರುವ ಸಾರನಾಥವೆಂಬ ಬೌದ್ಧರ ಪವಿತ್ರ ಯಾತ್ರಾಸ್ಥಳಕ್ಕೆ ಹೋಗಿದ್ದರು. ಅಲ್ಲಿ ಅಳಿದುಹೋದ ಪಟ್ಟಣವೊಂದನ್ನು ಪ್ರಾಚ್ಯ ಸಂಶೋಧಕರು ಅಗಿಸಿ ಅಲ್ಲಿ ಸಿಕ್ಕಿದ ಶಿಲ್ಪವಸ್ತುಗಳನ್ನೆಲ್ಲಾ ಒಂದು ಪ್ರದರ್ಶನಾಲಯದಲ್ಲಿ ಇಟ್ಟಿದ್ದರು. ಕೆಲವು

ಪಾಶ್ಚಾತ್ಯ ಪ್ರೇಕ್ಷಕರು ಅದನ್ನೆಲ್ಲಾ ನೋಡುತ್ತಿದ್ದಾಗ ಆ ಶಿಲ್ಪಚಾತುರ್ಯಕ್ಕೆ ಬೆರಗಾಗಿ ಅದನ್ನು ಕೆತ್ತಿದ ಪುರಾತನ ಶಿಲ್ಪಿಗಳನ್ನು ಹೊಗಳುತ್ತಿದ್ದರು. ಶ್ರೀ ಶಾರದಾದೇವಿಯವರು ಇದನ್ನು ನೋಡಿ ತಮ್ಮ ಸಂಗಡ ಇದ್ದವರೊಂದಿಗೆ, "ಹಿಂದಿನ ಜನ್ಮದಲ್ಲಿ ಇವರೇ ಇದನ್ನೆಲ್ಲ ಕೆತ್ತಿದವರು. ಈಗ ತಮ್ಮ ಕೃತಿಯನ್ನು ತಾವೇ ನೋಡಿ ಬೆರಗಾಗಿ ಹೊಗಳುತ್ತಿರುವರು" ಎಂದರು.

ಕಾಶಿಯಲ್ಲಿದ್ದಾಗ ಇಬ್ಬರು ಸಾಧುಪುರುಷರನ್ನು ನೋಡಿದರು. ಅವರಲ್ಲಿ ಒಬ್ಬರು ನಾನಕ್ ಪಂಗಡಕ್ಕೆ ಸೇರಿದವರು. ಗಂಗಾನದಿಯ ದಡದಲ್ಲಿ ಯಾವಾಗಲೂ ವಾಸಿಸುತ್ತಿದ್ದರು. ಮತ್ತೊಬ್ಬರು ಚಮೇಲಿಪುರಿ ಎಂಬುವರು. ಶ್ರೀ ರಾಮಕೃಷ್ಣರಿಗೆ ಅದ್ವೈತ ಸಾಧನೆಯ ಗುರುವಾದ ತೋತಾಪುರಿಯ ಪಂಗಡಕ್ಕೆ ಸೇರಿದವರು. ಅವರನ್ನು ನೋಡಿದಾಗ ಇವರ ಜತೆಯಲ್ಲಿ ಬಂದವರೊಬ್ಬರು ನಿಮಗೆ ಯಾರು ಪ್ರತಿದಿನವೂ ಆಹಾರ ಒದಗಿಸುತ್ತಾರೆ ಎಂದಾಗ, "ತಾಯಿ ಅನ್ನಪೂರ್ಣೆ" ಎಂದು ದಿಟ್ಟನಂಬಿಕೆಯಿಂದ ಹೇಳಿದರು. ಅದನ್ನು ಕೇಳಿ ಶ್ರೀ ಶಾರದಾದೇವಿಯವರಿಗೆ ತುಂಬಾ ಆನಂದವಾಯಿತು. ಮನೆಗೆ ಬಂದಮೇಲೆ ಅವರ ಫಲಹಾರಕ್ಕೆ ಹಣ್ಣು, ಹೊದೆದುಕೊಳ್ಳಲು ಒಂದು ಕಂಬಳಿ ಮುಂತಾದವನ್ನು ಕಳುಹಿಸಿಕೊಟ್ಟರು. ಆ ಸಾಧುವಿನ ವಿಚಾರವಾಗಿ ಅವರು ತಮ್ಮವರೊಂದಿಗೆ, "ಆ ವೃದ್ಧ ಸಾಧುವಿನ ಮುಖ ನನಗೆ ಇನ್ನೂ ಮಾಸಿ ಹೋಗಿಲ್ಲ. ಮಗುವಿನಂತೆ ಎಷ್ಟು ಸರಳತೆ ಆತನದು" ಎನ್ನುತ್ತಿದ್ದರು.

ಕ್ರಿ.ಶ. ೧೯೧೩ ನೇ ಜನವರಿ ಹದಿನಾರರಲ್ಲಿ ಅವರು ಕಲ್ಕತ್ತೆಗೆ ಬಂದರು.

— —

## ಕೆಲವು ಜೀವನದ ಅಲರುಗಳು

ಶ್ರೀ ಶಾರದಾದೇವಿಯವರ ಜೀವನದ ಸುತ್ತಲೂ ಅವರ ನೆಚ್ಚಿನ ಕೆಲವು ಶಿಷ್ಯರು ತಮ್ಮ ಜೀವನವನ್ನು ಅವರ ಸೇವೆಯಲ್ಲಿ ಸವೆಸಿ ಧನ್ಯ ರಾದರು. ಅವರಲ್ಲಿ ಕೆಲವರ ಜೀವನದ ಸಂಕ್ಷೇಪ ಚರಿತ್ರೆಯನ್ನು ಕೊಡುವುದು ಉಚಿತ. ಶ್ರೀ ರಾಮಕೃಷ್ಣರ ಮಹಾ ಸಮಾಧಿಯ ನಂತರ ಶ್ರೀ ಶಾರದಾದೇವಿಯವರು ಬೃಂದಾವನಕ್ಕೆ ಹೋದಾಗ ಇವರೊಂದಿಗೆ ಇದ್ದು ಸೇವೆ ಮಾಡಿದವರು ಸ್ವಾಮಿ ಯೋಗಾನಂದ ರೆಂಬುವರು. ಶ್ರೀ ರಾಮಕೃಷ್ಣರಲ್ಲಿಗೆ ಇವರು ಅನೇಕ ವೇಳೆ ಬಂದು ಹೋಗುತ್ತಿದ್ದರು. ಅವರು ಕಾಲವಾದ ಮೇಲೆ ಬೃಂದಾವನದಲ್ಲಿ ಶ್ರೀ ಶಾರದಾದೇವಿಯವರೊಂದಿಗೆ ಇರುವಾಗ ಅವರಿಂದ ಉಪದೇಶವನ್ನು ಪಡೆದರು. ನಂತರ ಕೆಲವು ವರ್ಷಗಳು ಕಾಶಿಯಲ್ಲಿ ತಪಸ್ಸಿನಲ್ಲಿ ಕಳೆ ದರು. ಭಿಕ್ಷಕ್ಕೆ ಪ್ರತಿ ದಿನವೂ ಹೋದರೆ ಕಾಲ ವ್ಯರ್ಥವಾಗುವುದೆಂದು ಮೂರು ನಾಲ್ಕು ದಿನಗಳಿಗೊಮ್ಮೆ ಹೋಗಿ ಬಂದ ರೊಟ್ಟಿಯನ್ನೆಲ್ಲ ಒಂದು ಬುಟ್ಟಿಯಲ್ಲಿ ಕಟ್ಟಿ ಅದನ್ನು ಗೂಟಕ್ಕೆ ನೇತುಹಾಕಿ ಅದು ಮುಗಿಯುವ ವರೆಗೂ ಒಣಗಿದ ರೊಟ್ಟಿಯನ್ನು ಪುಡಿಮಾಡಿ ತಿಂದು ಸ್ವಲ್ಪ ನೀರನ್ನು ಕುಡಿಯುತ್ತಿದ್ದರು. ನಂತರ ಉಳಿದ ಕಾಲವನ್ನೆಲ್ಲ ಧ್ಯಾನದಲ್ಲಿ ಕಳೆಯು ತ್ತಿದ್ದರು. ಹೀಗೆ ಉಗ್ರ ತಪಸ್ಸಿನಲ್ಲಿರುವಾಗಲೇ ದಾರುಣ ಆಮಶಂಕೆ ರೋಗ ಬಂದು ಯಾವ ಚಿಕಿತ್ಸೆಗೂ ಗುಣಮುಖವಾಗದಿರಲು ಅವರನ್ನು ಬೇಲೂರು ಮಠಕ್ಕೆ ಕರೆತಂದರು. ಕೆಲವು ದಿನಗಳು ಅಲ್ಲಿ ಇದ್ದು ಚಿಕಿತ್ಸೆಯನ್ನು ಪಡೆದ ಮೇಲೆ ಹುಷಾರಾದರು. ದೇಹ ನಶಿಸಿಹೋಗಿ ದ್ದರೂ ಮುಖದಲ್ಲಿ ಯಾವುದೋ ಒಂದು ತೇಜಸ್ಸು ತಾಂಡವಾಡುತ್ತಿತ್ತು. ಕ್ರಿ. ಶ. ೧೮೯೯ ನೇ ಇಸವಿಯ ವರೆಗೂ ಕಲ್ಕತ್ತೆಯಲ್ಲಿ ಬಲರಾಮವಸು ಎಂಬುವರ ಮನೆಯಲ್ಲಿದ್ದರು. ಅಲ್ಲಿಯೇ ಶ್ರೀ ಶಾರದಾದೇವಿಯವರು ಬಂದಾಗ ಇಳಿದುಕೊಳ್ಳುತ್ತಿದ್ದರು. ಆ ಸಮಯದಲ್ಲಿ ಅವರಿಗೆ ಬೇಕಾದ ಅನುಕೂಲಗಳನ್ನೆಲ್ಲಾ ಒದಗಿಸಿಕೊಡುತ್ತಿದ್ದರು. ಕ್ರಿ.ಶ. ೧೮೯೯ ನೇ ಇಸವಿ ಅಂತ್ಯದಲ್ಲಿ ಕಾಲವಾದರು. ಇವರ ವಿಚಾರವಾಗಿ ಶ್ರೀ ಶಾರದಾ ದೇವಿಯವರು ಬಹಳ ದುಃಖಪಟ್ಟರು. ಅವರಷ್ಟು ತಮ್ಮನ್ನು ಯಾರೂ ಪ್ರೀತಿಸುತ್ತಿರಲಿಲ್ಲವೆನ್ನುತ್ತಿದ್ದರು. ಇವರೂ ಕೂಡ ಯೋಗಾನಂದರನ್ನು ಹಾಗೆಯೇ ಪ್ರೀತಿಸುತ್ತಿದ್ದರು. ಯೋಗಾನಂದರು ಶ್ರೀ ಶಾರದಾದೇವಿ ಯವರಿಗೆ ಒಂದು ಸಣ್ಣ ಹಾಸಿಗೆಯನ್ನು ಕೊಟ್ಟಿದ್ದರು. ಅನೇಕ ವರ್ಷ

ಗಳಾದ ಮೇಲೆ ಅದು ಹರಿಯುವ ಸ್ಥಿತಿಗೆ ಬಂದರೂ ಅದನ್ನು ಸರಿ ಮಾಡಲು ಕೂಡ ಇಚ್ಛಿಸುತ್ತಿರಲಿಲ್ಲ. ತಮ್ಮ ಪ್ರಿಯ ಶಿಷ್ಯ ಯೋಗಾನಂದರು ಕೊಟ್ಟಿದ್ದು, ಕೊಟ್ಟ ರೂಪದಲ್ಲಿಯೇ ಇರಲಿ, ಅದನ್ನು ಸರಿಪಡಿಸಿ ಅದರ ರೂಪನ್ನು ಕೆಡಿಸಲು ನನಗೆ ಇಚ್ಛೆಯಿಲ್ಲ ಎಂದು ಹೇಳುತ್ತಿದ್ದರು, ಇದರಿಂದ ಅವರ ಪ್ರೀತಿ ಎಷ್ಟು ಆಳವಾದುದೆಂಬುದು ಗೊತ್ತಾಗುವುದು.

ಇವರ ನಂತರ ಸ್ವಾಮಿ ಶಾರದಾನಂದರು ಶ್ರೀ ಶಾರದಾದೇವಿಯವರ ಸೇವೆಯನ್ನು ಕೈಕೊಂಡರು. ಇವರು ಶ್ರೀ ರಾಮಕೃಷ್ಣರ ಪ್ರಮುಖರಾದ ಹನ್ನೆರಡು ಜನ ಶಿಷ್ಯರಲ್ಲಿ ಒಬ್ಬರು. ತಾವು ಕಾಲೇಜಿನಲ್ಲಿ ಓದುತ್ತಿದ್ದಾಗಲೇ ಶ್ರೀ ರಾಮಕೃಷ್ಣರಲ್ಲಿಗೆ ಅನೇಕ ವೇಳೆ ಬರುತ್ತಿದ್ದರು. ಕ್ರಮೇಣ ಪ್ರಾಪಂಚಿಕ ವಿಷಯಗಳಲ್ಲಿ ವೈರಾಗ್ಯ ಹುಟ್ಟಿ ಶ್ರೀ ರಾಮಕೃಷ್ಣ ಸಂಘಕ್ಕೆ ಸೇರಿ ಸ್ವಾಮಿ ಶಾರದಾನಂದರಾದರು. ಇವರ ಹೃದಯ ಎಷ್ಟು ವಿಶಾಲವಾಗಿತ್ತೋ ಬುದ್ಧಿಯು ಅಷ್ಟೇ ಸೂಕ್ಷ್ಮವಾಗಿತ್ತು. ಸ್ವಾಮಿ ವಿವೇಕಾನಂದರು ಅಮೆರಿಕಾದಿಂದ ಬಂದ ಮೇಲೆ ಶ್ರೀ ಶಾರದಾನಂದರನ್ನು ಅವರ ಸ್ಥಾನಕ್ಕೆ ಕಳುಹಿಸಿದರು. ಅಲ್ಲಿ ೧೮೯೮ರ ವರಿಗೆ ಕೆಲಸ ಮಾಡಿ ಇಂಡಿಯಾ ದೇಶಕ್ಕೆ ಬಂದರು. ೧೯೨೭ರ ವರಿವಿಗೂ ಶ್ರೀ ರಾಮಕೃಷ್ಣ ಸಂಘದ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದರು. ಜಗತ್ ವಿಸ್ತಾರವಾದ ರಾಮಕೃಷ್ಣ ಸಂಘದ ಕೆಲಸವೇ ದೊಡ್ಡ ಜವಾಬ್ದಾರಿಯ ಕೆಲಸ. ಜತಗೆ ಶ್ರೀ ಶಾರದಾದೇವಿಯವರ ಸೇವೆಯ ಭಾರವನ್ನು ವಹಿಸಿದರು. ತಮ್ಮ ಭಕ್ತಿ ಮತ್ತು ಸೇವೆಯಿಂದ ಅವರನ್ನು ತೃಪ್ತಿಪಡಿಸಿದರು. ಅವರು ಕಲ್ಕತ್ತೆಗೆ ಬಂದರೆ ವಾಸಮಾಡುವುದಕ್ಕಾಗಿ ಉದ್ಬೋಧನವೆಂಬ ಮನೆಯನ್ನು ಕಟ್ಟಿಸಿದರು. ಅವರಿಗೆ ಆಗುವ ಖರ್ಚನ್ನೆಲ್ಲ ಇವರೇ ವಹಿಸುತ್ತಿದ್ದರು. ಶ್ರೀ ಶಾರದಾದೇವಿಯವರು ಜಯರಾಮವಟಿಗೆ ಹೋದರೆ ಅಲ್ಲಿ ಇವರ ಖರ್ಚಿಗೆ ದುಡ್ಡನ್ನು ಕಳುಹಿಸುತ್ತಿದ್ದರು. ಇವರು ಹತ್ತಿರವಿರುವತನಕ ಶ್ರೀ ಶಾರದಾದೇವಿಯವರಿಗೆ ಯಾವ ಕೊರತೆಯೂ ಇರಲಿಲ್ಲ. ಸ್ವಾಮಿ ಶಾರದಾನಂದರು ಪ್ರಖ್ಯಾತರಾದ ವಿದ್ವಾಂಸರಾಗಿದ್ದರು. ಜತೆಗೆ ಖ್ಯಾತಿಗೊಂಡ ಲೇಖಕರೂ ಆಗಿದ್ದರು. ಇವರು ವಂಗ ಭಾಷೆಯಲ್ಲಿ ಬರೆದ ಶ್ರೀ ರಾಮಕೃಷ್ಣ ಲೀಲಾಪ್ರಸಂಗವೆಂಬಗ್ರಂಥ ಸಂಪೂರ್ಣ ಪ್ರತ್ಯಕ್ಷ ನೋಡಿ, ಅವರ ವಿಚಾರವನ್ನು ಕೇಳಿ ಬರೆದ ರಾಮಕೃಷ್ಣರ ಜೀವನ ಚರಿತ್ರೆ. ಭಾರತೀಯ ಮಹಿಳೆಯರ ಸ್ಥಿತಿ

ಯನ್ನು ಉತ್ತಮಗೊಳಿಸುವುದಕ್ಕಾಗಿ ಇವರು ತುಂಬಾ ಶ್ರಮ ತೆಗೆದು ಕೊಳ್ಳುತ್ತಿದ್ದರು. ಭಗಿನಿ ನಿವೇದಿತೆ ತೆರೆದ ಬಾಲಿಕಾ ಪಾಠಶಾಲೆಗೆ ತುಂಬಾ ಸಹಾಯ ಮಾಡಿದರು. ಭಾರತ ನಾರಿಯರಿಗೆ ಕಾಣಿಕೆಯಾಗಿ, "ಭರತಖಂಡದಲ್ಲಿ ಮಾತೃ ಪೂಜೆ" ಎಂಬ ಪುಸ್ತಕದಲ್ಲಿ, "ಯಾರ ಕೃಪಾ ಕಟಾಕ್ಷದಿಂದ ಸರ್ವ ಸ್ತ್ರೀಯರಲ್ಲಿಯೂ ಜಗನ್ಮಾಯಿಯನ್ನು ಸಂದರ್ಶಿಸುವ ಪುಣ್ಯವನ್ನು ಪಡೆದನೋ ಆ ಪುಣ್ಯಮಯಿಯ ಪಾದಪದ್ಮಗಳಿಗೆ ಈ ಕೃತಿ ಯನ್ನು ನಮ್ರನಾಗಿ ಭಕ್ತಿಪೂರ್ವಕ ಅರ್ಪಿಸುತ್ತೇನೆ" ಎಂದು ಶ್ರೀ ಶಾರದಾದೇವಿಯವರಿಗೆ ನೀಡಿದರು ಎನ್ನುವುದರಲ್ಲಿ ಅವರಿಗೆ ಶ್ರೀ ಮಾತೆ ಯಲ್ಲಿದ್ದ ಗೌರವ ಕಾಣುವುದು. ಶ್ರೀ ಶಾರದಾದೇವಿಯವರ ಕಾಲಾ ನಂತರ ಅವರ ಹೆಸರಿನಲ್ಲಿ ಜಯರಾಮವಟಿಯಲ್ಲಿ ಒಂದು ಗುಡಿಯನ್ನು ಕಟ್ಟಿಸಿದರು. ಇವರು ೧೯೩೬ನೇ ಇಸವಿಯಲ್ಲಿ ಮಹಾ ಸಮಾಧಿಯನ್ನು ಪಡೆದರು.

ಶ್ರೀ ಶಾರದಾದೇವಿಯವರಿಗೆ ಇದ್ದ ಪ್ರಮುಖ ಸ್ತ್ರೀಭಕ್ತರಲ್ಲಿ ಗುಲಾಬ್ ಮಾ, ಯೋಗಿನ್ ಮಾ, ಲಕ್ಷ್ಮೀದೇವಿ ಮತ್ತು ಗೌರಿದಾಸಿ ಎಂಬುವರು ಮುಖ್ಯರು. ಇವರಲ್ಲಿ ಮೊದಲು ಮೂವರು ವಿಧವೆಯರು ತಮ್ಮ ಜೀವವನ್ನೆಲ್ಲ ಶ್ರೀ ಶಾರದಾದೇವಿಯವರೊಂದಿಗೆ ಧ್ಯಾನದಲ್ಲಿ ಮತ್ತು ಸೇವೆಯಲ್ಲಿ ಕಳೆದರು.

ಗುಲಾಬ್ ಮಾ ಎಂಬುವರು ಶ್ರೀ ಶಾರದಾದೇವಿಯವರಿಗೆ ಅತ್ಯಂತ ಸಮೀಪದವರು. ಅವರು ಶ್ರೀ ಶಾರದಾದೇವಿಯವರನ್ನು ಪಹರೆ ಕಾಯುತ್ತಿದ್ದರೆಂತಲೂ ಹೇಳಬಹುದು. ಬ್ರಾಹ್ಮಣ ಜಾತಿಗೆ ಸೇರಿದವರು. ಬಾಲ್ಯದಲ್ಲಿಯೇ ವಿವಾಹವಾಗಿತ್ತು. ಪತಿಯೊಂದಿಗೆ ಬಹಳ ಕಾಲವಿದ್ದು ಜೀವನದ ಸವಿಯನ್ನು ಅನುಭವಿಸಲಿಲ್ಲ. ಪತಿ ಯಾವುದೋ ಕಾಯಿಲೆಯಲ್ಲಿ ತೀರಿಕೊಂಡನು. ಇವರಿಗೆ ಇದ್ದ ಒಬ್ಬಳೇ ಮಗಳನ್ನು ಬೆಳಸಿ ಮದುವೆ ಮಾಡಿದರು. ಮಗಳು ಕೆಲವು ಕಾಲವಾದ ಮೇಲೆ ಯಾವುದೋ ಒಂದು ರೋಗಕ್ಕೆ ತುತ್ತಾಗಿ ಸಾವನ್ನು ಎದುರುಗೊಂಡಳು. ಈ ದುಃಖದಲ್ಲಿ ಹುಚ್ಚರಂತಾಗಿ ಅಲೆಯುತ್ತಿದ್ದಾಗ ಶ್ರೀ ರಾಮಕೃಷ್ಣರ ಸಮೀಪಕ್ಕೆ ಬಂದರು. ಅವರ ಉಪದೇಶವನ್ನು ಕೇಳಿ ಇವರ ದುಃಖ ಶಮನವಾಯಿತು. ಕ್ರಮೇಣ ದೇವರ ಮೇಲೆ ಬುದ್ಧಿ ನಾಟಿತು. ಶ್ರೀ ರಾಮಕೃಷ್ಣರು ಶ್ರೀ ಶಾರದಾದೇವಿಯವರಿಗೆ ಗುಲಾಬಳನ್ನು ಯಾವಾ ಗಲೂ ನಿನ್ನ ಹತ್ತಿರ ಇಟ್ಟುಕೊಂಡಿರು ಎಂದು ಹೇಳಿದ್ದರು. ಅಂದಿನಿಂದ

ಸುಮಾರು ಮೂವತ್ತಾರು ವರುಷಗಳು ಇವರೊಂದಿಗೆ ಇದ್ದರು. ಶ್ರೀ ಶಾರದಾದೇವಿಯವರು ಎಲ್ಲಿಯಾದರೂ ತೀರ್ಥಯಾತ್ರೆಗೆ ಹೋಗಲಿ, ಒಬ್ಬ ಭಕ್ತರ ಮನೆಗೆ ಹೋಗಲಿ ಅಥವಾ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಲಿ ಯಾವಾಗಲೂ ಇವರೊಂದಿಗೆ ಇರುತ್ತಿದ್ದರು. ಶ್ರೀ ರಾಮಕೃಷ್ಣರ ಹೆಸರಿನಲ್ಲಿ ಬರುವ ಭಕ್ತರಿಗೆ ಅಡಿಗೆ ಉಪಚಾರವನ್ನು ಮಾಡುವುದರಲ್ಲೇ ತಮ್ಮ ಜೀವನವನ್ನೆಲ್ಲಾ ಸವೆಸಿದರು. ಕೆಲಸದ ಜೊತೆಗೆ ಧ್ಯಾನ ಜಪ ತಪಗಳನ್ನು ಮಾಡುವುದನ್ನು ಇವರು ಮರೆತಿರಲಿಲ್ಲ. ಶ್ರೀ ಶಾರದಾದೇವಿಯವರಿಗೆ ಇವರ ಮೇಲೆ ಬಹಳ ಗೌರವ. ಇವರಿಗೆ ಇವರ ಮಗಳ ಮಗ ಪ್ರತಿ ತಿಂಗಳೂ ಸ್ವಲ್ಪ ಹಣವನ್ನು ಕೊಡುತ್ತಿದ್ದನು. ಅದರಲ್ಲಿ ಅರ್ಧವನ್ನು ತಾವು ಇದ್ದ ಆಶ್ರಮಕ್ಕೆ ಕೊಟ್ಟು ಉಳಿದ ಅರ್ಧವನ್ನು ದಾನ ಧರ್ಮಕ್ಕೆ ವಿನಿಯೋಗಿಸುತ್ತಿದ್ದರು. ಇವರ ನಾಲಿಗೆ ಸ್ವಲ್ಪ ಹರಿತ. ಕಂಡದ್ದನ್ನು ಕಂಡಂತೆಯೇ ಹೇಳುವ ಸ್ವಭಾವ ಇವರದು. ಇವರ ಮಾತಿನಿಂದ ಕೆಲವು ವೇಳೆ ಹಲವರನ್ನು ನೋಯಿಸಿರಬಹುದು. ಶ್ರೀ ಶಾರದಾದೇವಿಯವರಿಗೆ ಗುಲಾಬ್ ಮಾಳಲ್ಲಿ ಇರುವ ಕಳಂಕ ತಿಳಿದು ಅನೇಕವೇಳೆ ಹಾಗೆ ಒರಟಾಗಿ ಮಾತನಾಡಬೇಡವೆಂದು ಹೇಳುತ್ತಿದ್ದರು. ಕಂಡದ್ದನ್ನು ಕಂಡಂತೆ ಹೇಳುವುದು ಒಂದು ಒಳ್ಳೆಯ ಗುಣವೆಂದು ತಿಳಿದರೂ, ಅದರಿಂದ ಉಳಿದವರಿಗೆ ವ್ಯಥೆಯಾಗುತ್ತದೆ ಎಂಬುದನ್ನು ಮರೆಯಕೂಡದು ಎಂದು ಬುದ್ಧಿ ಹೇಳುತ್ತಿದ್ದರು. ಒಮ್ಮೆ ಇವರು ಬೃಂದಾವನಕ್ಕೆ ಹೋದಾಗ ಗುಡಿಯಲ್ಲಿ ಯಾರದೋ ಒಂದು ಸಣ್ಣ ಮಗು ಹೇಸಿಗೆ ಮಾಡಿತು. ಅದನ್ನು ತೊಳೆಯುವವರು ಹತ್ತಿರ ಯಾರೂ ಇರಲಿಲ್ಲ. ಇವರೇ ಮುಂದೆ ಬಂದು ಅದನ್ನು ಶುಚಿ ಮಾಡಿದರು. ಇದನ್ನು ನೋಡುತ್ತಿದ್ದ ಕೆಲವರು ಮಗು ಇವರದೇ ಇರಬಹುದೆಂದು ಊಹಿಸುತ್ತಿದ್ದರು. ಉಳಿದವರು ಇವರ ಸನ್ಯಾಸಿಯ ಬಟ್ಟೆ ನೋಡಿ ಇವಳಿಗೆಲ್ಲಿ ಮಗು ಬರಬೇಕು. ಯಾರದೋ ಮಗು ಇಲ್ಲಿ ಇರಬೇಕೆಂದು ಸಮಾಧಾನ ಮಾಡಿಕೊಂಡರು. ಇನ್ನೊಬ್ಬರ ದುಃಖಕ್ಕೆ ಯಾವಾಗಲೂ ಮರುಗುವ ಹೃದಯ ಇವರದು. ಹತ್ತಿರಿದ್ದ ನೆರೆಮನೆಗಳಿಗೆ ಹೋಗಿ ಅವರ ಕ್ಷೇಮಲಾಭವನ್ನು ವಿಚಾರಿಸುವರು. ಅವರ ಮನೆಯಲ್ಲಿ ಯಾರಾದರೂ ರೋಗದಿಂದ ನರಳುತ್ತಿದ್ದರೆ, ಅವರು ಬಡವರಾದರೆ ಶ್ರೀ ಶಾರದಾದೇವಿಯವರಲ್ಲಿಗೆ ಬರುತ್ತಿದ್ದ ಕೆಲವು ವೈದ್ಯಭಕ್ತರಿಗೆ ಅವರ ಮನೆಗೆ ಹೋಗಿ ನೋಡಿಕೊಳ್ಳಿ ಎಂದು ಹೇಳುತ್ತಿದ್ದರು. ಇವರು ಕ್ರಿ.ಶ. ೧೯೨೪ನೇ ಡಿಸೆಂಬರ್ ತಿಂಗಳವರೆಗೂ ಜೀವಿಸಿದ್ದರು.

ಯೋಗಿನ್ ಮಾ ಎಂಬ ಮತ್ತೊಬ್ಬಳು ಶಾರದಾದೇವಿಯವರೊಂದಿಗೆ ಕಾಲಕಳೆದರು. ವಯಸ್ಸಿನಲ್ಲಿ ಇವರು ಶಾರದಾದೇವಿಯವರಿಗಿಂತ ಕಿರಿಯವರು. ಶ್ರೀಮಂತ ಜಮೀನುದಾರನೊಬ್ಬರನ್ನು ಮದುವೆಯಾಗಿದ್ದರು. ಬಾಲ್ಯದಲ್ಲಿಯೇ ಪತಿ ಕಾಲವಾದ ಮೇಲೆ ಇವರು ದುಃಖಿಸುತ್ತಿದ್ದಾಗ ಇವರನ್ನು ಶ್ರೀ ರಾಮಕೃಷ್ಣರಲ್ಲಿಗೆ ಇವರ ಬಂಧುಗಳೊಬ್ಬರು ಕರೆದುಕೊಂಡು ಬಂದರು. ಅನಂತರ ಇವರು ಶ್ರೀ ಶಾರದಾದೇವಿಯರ ಮಹಾ ಸಮಾಧಿಯ ವರೆಗೂ ಅವರ ಹತ್ತಿರ ಸಂಬಂಧವನ್ನಿಟ್ಟುಕೊಂಡಿದ್ದರು. ಶ್ರೀ ಶಾರದಾದೇವಿಯವರೊಂದಿಗೆ ಇವರೂ ಅನೇಕ ತೀರ್ಥಯಾತ್ರೆಗೆ ಹೋಗಿದ್ದರು. ಇವರು ಬೃಂದಾವನದಲ್ಲಿದ್ದು ತಪಸ್ಸು ಮಾಡುತ್ತಿದ್ದಾಗ ತಮ್ಮ ಇಷ್ಟದೈವ ಎಲ್ಲರಲ್ಲಿಯೂ ಅನೇಕ ದಿನಗಳು ಗೋಚರಿಸುತ್ತಿತ್ತಂತೆ. ಇವರು ತಮ್ಮ ವೃದ್ಧ ತಾಯಿ ಮತ್ತು ಮೊಮ್ಮಕ್ಕಳೊಂದಿಗೆ ಕಲ್ಕತ್ತೆಯಲ್ಲಿದ್ದರು. ಶ್ರೀ ಶಾರದಾದೇವಿಯವರು ಕಲ್ಕತ್ತೆಗೆ ಬಂದಾಗಲೆಲ್ಲಾ ಅಲ್ಲಿಗೆ ಬೆಳಗ್ಗೆ ಹೋಗಿ ತರಕಾರಿ ಮುಂತಾದುವನ್ನು ಹೆಚ್ಚಿ ಮನೆಗೆ ಬಂದು ಅಡಿಗೆ ಮಾಡಿ ತನ್ನ ತಾಯಿ ಮತ್ತು ಮೊಮ್ಮಕ್ಕಳಿಗೆ ಬಡಿಸಿ ಪುನಃ ಶಾರದಾದೇವಿಯವರಲ್ಲಿಗೆ ಬರುತ್ತಿದ್ದರು. ಸ್ವಲ್ಪ ಕಾಲವನ್ನಾದರೂ ಇವರು ಪೋಲು ಮಾಡುತ್ತಿರಲಿಲ್ಲ. ಎಲ್ಲರಿಗೂ ಉಪಯೋಗವಾಗುವಂತಹ ಯಾವುದಾದರೂಂದು ಕೆಲಸವನ್ನು ಮಾಡುವರು. ಅದಿಲ್ಲದಿದ್ದರೆ, ಗೀತೆ, ಭಾಗವತ, ಚೈತನ್ಯ ಚರಿತಾಮೃತ, ಶ್ರೀರಾಮಕೃಷ್ಣ ಲೀಲಾಪ್ರಸಂಗ ಮುಂತಾದ ಪುಸ್ತಕಗಳನ್ನು ಓದುವುದರಲ್ಲಿ ಕಾಲ ಕಳೆಯುವರು. ಇವರು ಕ್ರಿ.ಶ. ೧೯೨೪ ನೇ ನವಂಬರ್ ತಿಂಗಳಲ್ಲಿ ಕಾಲವಾದರು.

ಲಕ್ಷ್ಮೀದೇವಿ ಶ್ರೀ ರಾಮಕೃಷ್ಣರ ಅಣ್ಣನ ಮಗಳು. ಈಕೆಯೂ ಬಾಲವಿತಂತು. ಶ್ರೀ ಶಾರದಾದೇವಿಯವರೊಂದಿಗೆ ದಕ್ಷಿಣೇಶ್ವರದಲ್ಲಿ ವಾಸಿಸುತ್ತಿದ್ದರು. ಅವರು ಮಾಡುವ ಕೆಲಸಗಳಿಗೆಲ್ಲಾ ಸಹಾಯ ಮಾಡುತ್ತಿದ್ದರು. ಆಧ್ಯಾತ್ಮಿಕ ಜೀವನಲ್ಲಿಯೂ ಶ್ರೀ ಶಾರದಾದೇವಿಯವರ ಹಾಗೆ ಬಹಳ ಕಾಲವನ್ನು ಕಳೆಯುತ್ತಿದ್ದರು. ಶ್ರೀ ರಾಮಕೃಷ್ಣರು ಕಾಲವಾದ ಮೇಲೆ ಇವರು ಕೆಲವು ಕಾಲ ಶ್ರೀ ಶಾರದಾದೇವಿಯವರೊಂದಿಗೆ ಇದ್ದು ಉಳಿದ ಕಾಲವನ್ನು ತಮ್ಮ ಬಂಧುಗಳೊಂದಿಗೆ ಕಳೆದರು. ಚೆನ್ನಾಗಿ ಮಾತನಾಡುತ್ತಿದ್ದರು. ಶ್ರೀ ರಾಮಕೃಷ್ಣರ ಜೀವನದಿಂದ ಘಟನೆಗಳನ್ನು ಭಕ್ತಾದಿಗಳಿಗೆ ಬಹಳ ಸ್ವಾರಸ್ಯವಾಗಿ ಹೇಳು

ತ್ತಿದ್ದರು. ಈಕೆಗೆ ಅದ್ಭುತ ಜ್ಞಾಪಕ ಶಕ್ತಿ ಇತ್ತು. ರಾಮಾಯಣ ಮಹಾಭಾರತ ಕಥೆಗಳೆಲ್ಲಾ ಬಾಯಿಗೆ ಬರುತ್ತಿತ್ತು. ಸುಮಧುರವಾದ ಕಂಠ. ಅನೇಕ ವೇಳೆ ಭಕ್ತಿಪರವಶರಾಗಿ ಕೀರ್ತನೆಯನ್ನು ಹಾಡುವಾಗ ತಾಳಕ್ಕೆ ಸರಿಯಾಗಿ ಕುಣಿಯುತ್ತಿದ್ದರು. ಜಗನ್ನಾಥದಲ್ಲಿ ತಮ್ಮ ಕೊನೆಯ ದಿನಗಳನ್ನು ಕಳೆದು ದೇವನ ಸನ್ನಿಧಿಯನ್ನು ಸೇರಿದರು.

ಗೌರಿ ಮಾ ಎಂಬ ಮತ್ತೊಬ್ಬ ಮಹಿಳೆ ಶ್ರೀ ಶಾರದಾದೇವಿಯವರೊಂದಿಗೆ ಬಹಳ ಕಾಲವನ್ನು ಕಳೆದರು. ಶ್ರೀ ಶಾರದಾದೇವಿಯವರು ಮುದ್ದಿಗಾಗಿ ಕೊಟ್ಟ ಹೆಸರು ಗೌರಿದಾಸಿ ಎಂಬುದು. ಈಕೆ ವಿದ್ಯಾವಂತೆ. ಹಿಂದೂಗಳ ಪುರಾತನ ಧರ್ಮ ಗ್ರಂಥಗಳನ್ನೆಲ್ಲ ಓದಿದ್ದರು. ಆಧ್ಯಾತ್ಮಿಕ ಜೀವನದಲ್ಲಿಯೂ ಮುಂದುವರಿಯಲು ಅಷ್ಟೇ ಕಾತುರರಾಗಿದ್ದರು. ಕಾರ್ಯದಕ್ಷತೆ ಇವರ ಒಂದು ಹುಟ್ಟುಗುಣ. ಪ್ರಪಂಚದ ಬಲೆಗೆ ಬೀಳಬಾರದೆಂದು ಹುಡುಗಿಯಾಗಿದ್ದಾಗಲೇ ಇವರು ಹಟತೊಟ್ಟರು. ಇವರು ಶ್ರೀ ರಾಮಕೃಷ್ಣರ ಹತ್ತಿರ ಬಂದು ಹೋಗುತ್ತಿದ್ದರು. ಪ್ರಾಪ್ತವಯಸ್ಸಾಗಿ ತಂದೆತಾಯಿಗಳು ಮದುವೆ ಮಾಡಿಕೊ ಎಂದು ಬಲಾತ್ಕರಿಸಿದಾಗ ಅದನ್ನು ನಿರಾಕರಿಸಿ ಹಿಮಾಲಯ ತಪ್ಪಲುಗಳಿಗೆ ತಪಸ್ಸಿಗೆ ಹೋದರು. ಅಲ್ಲಿ ಕೆಲವು ವರ್ಷಗಳಿದ್ದು ನಂತರ ಶ್ರೀ ಶಾರದಾದೇವಿಯವರ ಹತ್ತಿರ ಉಳಿದ ಕಾಲವನ್ನೆಲ್ಲ ಕಳೆಯುತ್ತಿದ್ದರು. ಶ್ರೀ ರಾಮಕೃಷ್ಣರ ಮಹಾಸಮಾಧಿಯಾದ ಮೇಲೆ ಬೃಂದಾವನಕ್ಕೆ ಹೋಗಿ ಅಲ್ಲಿ ಕೆಲವು ವರ್ಷಗಳನ್ನು ತಪಸ್ಸಿನಲ್ಲಿ ಕಳೆದು ಹಿಂತಿರುಗಿ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಒಂದು ಪಾಠಶಾಲೆಯನ್ನು ಕಲ್ಕತ್ತೆಯಲ್ಲಿ ತೆರೆದರು. ಮದುವೆಯಾಗದೆ ಉತ್ತಮ ಜೀವನವನ್ನು ನಡೆಸಲು ಇಚ್ಛಿಸುವವರ ಸಹಾಯಕ್ಕಾಗಿ ಶಾರದೇಶ್ವರೀ ಆಶ್ರಮವೆಂದು ಒಂದು ಆಶ್ರಮವನ್ನು ಕಟ್ಟಿಸಿದರು. ಪಾಠಶಾಲೆಯ ಬಾಲಿಕೆಯರನ್ನು, ಅದಕ್ಕೆ ಸೇರದ ಉಪಾಧ್ಯಾಯರುಗಳನ್ನು ಅನೇಕವೇಳೆ ಶ್ರೀ ಶಾರದಾದೇವಿಯವರ ದರ್ಶನಕ್ಕೆ ಕರೆದುಕೊಂಡು ಬರುತ್ತಿದ್ದರು. ಈಗಲೂ ಈ ಸಂಸ್ಥೆ ಕಲ್ಕತ್ತೆಯಲ್ಲಿ ಹೆಸರುವಾಸಿಯಾಗಿದೆ. ಇವರಲ್ಲಿ ಹೆಂಗಸಿಗೆ ಹುಟ್ಟುಗುಣವಾದ ಲಜ್ಜೆ ಅಷ್ಟು ಇರಲಿಲ್ಲ. ಸ್ವಾತಂತ್ರ್ಯಮತಿಯವರು. ಕೆಚ್ಚೆದೆಯವರು. ಯಾರು ಅಲ್ಲಗಳೆದರೂ ವ್ಯಸನದಿಂದ ತಗ್ಗುವವರಲ್ಲ. ಇವರ ಗುಣಗಳೆಲ್ಲ ಶ್ರೀ ರಾಮಕೃಷ್ಣರಿಗೆ ಗೊತ್ತಿತ್ತು. ಆದಕಾರಣ ಹೆಂಗಸರಿಗೆ ದೇವರ ವಿಚಾರವಾಗಿ ಬೋಧಿಸುವುದಕ್ಕಾಗಿ ಅನೇಕವೇಳೆ ಇವರನ್ನು ಕಳುಹಿಸುತ್ತಿದ್ದರು.

ಇವರು ಸಾರ್ವಜನಿಕ ಉಪಕಾರಕ್ಕಾಗಿ ಮಾಡುತ್ತಿದ್ದ ಕಾರ್ಯಗಳನ್ನು ಶ್ರೀ ಶಾರದಾದೇವಿಯವರು ಹರಸಿ ತಮ್ಮ ಶಿಷ್ಯರಿಂದ ಸಾಧ್ಯವಾದ ಸಹಾಯವನ್ನು ಅದಕ್ಕೆ ಒದಗಿಸಿಕೊಡುತ್ತಿದ್ದರು.

---

## ೨೦. ಸಂದೇಶ

ಪ್ರತಿಯೊಬ್ಬ ಮಾನವನು ತಾನು ತಿಳಿದೊ ತಿಳಿಯದೆಯೋ ಸಮಾಜದಲ್ಲಿ ಎಲ್ಲಿಯುವರೆವಿಗೂ ಇರುವನೋ ಅಲ್ಲಿಯವರೆವಿಗೂ ತನ್ನ ಶೀಲದಿಂದ ಇನ್ನೊಬ್ಬರ ಮೇಲೆ ಪರಿಣಾಮವನ್ನುಂಟುಮಾಡುತ್ತಿರುವನು. ಶ್ರೀ ಶಾರದಾದೇವಿಯವರು ತಮ್ಮ ಶಿಷ್ಯ ವಿವೇಕಾನಂದರಂತೆ ಪಾಶ್ಚಾತ್ಯ ದೇಶಗಳಿಗೆ ಹೋಗಿ ತಮ್ಮ ಅದ್ಭುತ ಧೀ ಶಕ್ತಿ ಮತ್ತು ವಾಕ್ಚಾತುರ್ಯ ದಿಂದ ಉಪನ್ಯಾಸಗಳನ್ನು ಕೊಡಲಿಲ್ಲ. ಹತ್ತು ಜನರಿದ್ದ ಕಡೆ ತಲೆಯೆತ್ತಿ ಮಾತನಾಡುವುದೆಂದರೆ ನಾಚಿಕೆ. ಹೀಗಿರುವಾಗ ವೇದಿಕೆಯ ಮೇಲೆ ನಿಂತು ಸಾವಿರಾರು ಜನರೆದುರಿಗೆ ಹೋಗಿ ಉಪನ್ಯಾಸ ಹೇಗೆ ಮಾಡು ವರು? ಆದರೆ ಇವರು ತಮ್ಮದೇ ಒಂದು ರೀತಿಯಲ್ಲಿ ಜನರಿಗೆ ಉಪ ದೇಶ ಬೀಜವನ್ನು ಬಿತ್ತಿ ಅಜ್ಞಾನದ ಕತ್ತಲೆಯಲ್ಲಿ ತೊಳಲುತ್ತಿದ್ದವರನ್ನು ಬೆಳಕಿಗೆ ತಂದರು. ತಪಸ್ಸಿನಿಂದ ತ್ಯಾಗದಿಂದ ತುಂಬಿ ತುಳುಕಾಡು ತ್ತಿತ್ತು ಇವರ ಜೀವನ. ಯಾವ ಆದರ್ಶಕ್ಕೆ ಇವರು ಜೀವನನ್ನು ಮೀಸಲಾಗಿಟ್ಟಿದ್ದರೋ ಅದೇ ಆದರ್ಶವೇ ಇವರು ಮಾಡುತ್ತಿದ್ದ ಪ್ರತಿ ಯೊಂದು ಕೆಲಸದಲ್ಲಿಯೂ ಆಡುತ್ತಿದ್ದ ಪ್ರತಿಯೊಂದು ಮಾತಿನಲ್ಲಿಯೂ ಹಾಸು ಹೊಕ್ಕಾಗಿತ್ತು. ಎಲ್ಲರೂ ಉಪನ್ಯಾಸವನ್ನು ಮಾಡಿಯೇ ಸಂದೇಶ ಹರಡಬೇಕೆ? ಅವರ ಜೀವನ ಉತ್ತಮವಾಗಿದ್ದರೆ ಅದು ಅಯಃ ಕಾಂತ ಶಿಲೆಯಂತೆ ಮೌನವಾಗಿ ತನ್ನೆಡೆಗೆ ಎಳೆಯಬಲ್ಲುದು. ಮಲ್ಲಿಗೆ ತನ್ನಿರವನ್ನು ಸೂಚಿಸಬೇಕಾದರೆ ಗ್ರಾಮಫೋನಿನಂತೆ ಒರಲಬೇಕೆ? ಕಾಣದೇ ಇದ್ದರೂ ತನ್ನ ಪರಿಮಳದಿಂದ ಜನರ ಮನಸ್ಸನ್ನು ಸೆಳೆ ಯುವುದು.

ಯಾವ ಮಹಾ ಪುರುಷನಾಗಲೀ ತಾನು ಪ್ರಚಾರಕ್ಕೆಂದು ತರುವ ಧರ್ಮಕ್ಕೆ ಸಂಬಂಧಪಟ್ಟ ಎರಡು ವಿಧದ ಬೋಧನೆಯನ್ನು ಮಾಡುವನು. ಮೊದಲನೆಯದು ತತ್ತ್ವಕ್ಕೆ ಸಂಬಂಧಪಟ್ಟುದು. ಎರಡನೆಯದು ಉಪಾ ಸನೆಗೆ ಸಂಬಂಧಪಟ್ಟುದು. ತತ್ತ್ವ ಉಪಾಸನೆಗಳೆರಡೂ ಒಂದನ್ನೊಂದು ಎಡೆಬಿಡದೆ ಅನುಸರಿಸುವುವು. ನಿರಾಕಾರ ನಿರಾಮಯ ನಿರಂಜನ ಎಂದು ನಾವು ದೇವರನ್ನು ಕುರಿತು ಹೇಳಬಹುದು. ಆದರೆ ಅದನ್ನು ಆಲೋಚಿಸಬೇಕಾದರೆ ಸಾಧಾರಣ ಮನುಷ್ಯನಿಗೆ ಅಸಾಧ್ಯ. ಮೊದಲು ಸ್ಥೂಲಬಾಹ್ಯಪೂಜೆಯ ಮೆಟ್ಟಿಲನ್ನು ಹತ್ತಿ ಹೋದರೆ ಮಾತ್ರ ನಂತರ ನಮಗೆ ನಿರಾಕಾರ ಸತ್ಯದರ್ಶನ ಸಾಧ್ಯ. ಉಪಾಸನೆ ಮತ್ತು ತತ್ತ್ವ ಎಲ್ಲ

ಮತಬೋಧಕರಲ್ಲಿಯೂ ಇವೆ. ನಾವು ಶ್ರೀ ಕೃಷ್ಣನ ಜೀವನವನ್ನು ತೆಗೆದುಕೊಂಡರೆ, ಗೀತೆಯಲ್ಲಿ ಅವನ ಅನಾಸಕ್ತಿಯೋಗದ ತತ್ತ್ವ ಸಿಕ್ಕುವುದು. ಅವನ ಬಾಲಲೀಲೆ ಮತ್ತು ಅವನನ್ನು ಪ್ರೀತಿಸಿ, ಮುಕ್ತಿಯನ್ನು ಗಳಿಸಿದ ಗೋಪಿಯರ ಪ್ರಸಂಗಗಳೆಲ್ಲ ಉಪಾಸನೆಗೆ ಸೇರಿದವು. ಬೌದ್ಧ ಧರ್ಮದಲ್ಲಿಯೂ ಕೂಡ ಅವನು ಬೋಧಿಸಿದ ನಾಲ್ಕು ಸತ್ಯಗಳು ಮತ್ತು 'ಅಷ್ಟಾಂಗಮಾರ್ಗ' ತತ್ತ್ವಕ್ಕೆ ಸೇರಿವೆ. ಆತನನ್ನು ಯಾರು ಪ್ರೀತಿಸಿ ಪೂಜಿಸುವರೋ ಅವರು ಬೌದ್ಧತ್ವವನ್ನು ಹೊಂದುವರು ಎಂಬ ಭಾವನೆ ಉಪಾಸನಾಖಾಂಡಕ್ಕೆ ಸೇರಿದೆ. ಕ್ರೈಸ್ತ ಧರ್ಮ ತತ್ತ್ವವೆಲ್ಲ (Sermon on the Mount) ಗುಡ್ಡದ ಮೇಲೆ ಮಾಡಿದ ಉಪದೇಶದಲ್ಲಿದೆ. ನಾನು ದೇವರ ಮಗ, ನನ್ನನ್ನು ಯಾರು ಪ್ರೀತಿಸುತ್ತಾರೋ ಅವರು ದೇವರನ್ನು ಪ್ರೀತಿಸುತ್ತಾರೆ, ಅವನನ್ನು ಸೇರುತ್ತಾರೆ ಎಂಬ ಬೋಧನೆಯಲ್ಲಿ ಉಪಾಸನೆಯಿದೆ. ಮುಹಮ್ಮದೀಯ ಮತದಲ್ಲಿ ಕೂಡ ದೇವರೆದುರಿಗೆ ಜೀವಗಳೆಲ್ಲರೂ ಒಂದೇ ಎಂದು ಸಾರಿದುದರಲ್ಲಿ ಅವನ ತತ್ತ್ವವೂ, ನಾನು ಅವನ ಸುದ್ದಿಗಾರ ಎಂದು ಸಾರಿದುದರಲ್ಲಿ ಉಪಾಸನೆಯೂ ಇದೆ. ಉಪಾಸನೆ ಮತ್ತು ತತ್ತ್ವ ಒಂದನ್ನೊಂದು ಎಡಬಿಡದೆ ಆಶ್ರಯಿಸಿಕೊಂಡಿರುತ್ತವೆ. ಕೆಲವರು ತತ್ತ್ವ ಸಾಕಲ್ಲ. ಉಪಾಸನೆ ಏಕೆ? ಅದೇ ಮುಂದಕ್ಕೆ ಕೋಮುವಾರು ದ್ವೇಷದ ಬೀಜವನ್ನು ಬಿತ್ತುವುದು ಎಂದು ಹೇಳಬಹುದು. ಬರಿಯ ತತ್ತ್ವವೇ ಮಾನವನ ಆಧ್ಯಾತ್ಮಿಕ ದಾಹವನ್ನು ತಣಿಸಲಾರದು. ತತ್ತ್ವವೆಂಬುದು ಪ್ರಯಾಣಿಕನ ಕೈಯಲ್ಲಿರುವ ಭೂಪಟದಂತೆ. ಅಲ್ಲಿರುವ ಊರಿಗೆ ಹೋಗಬೇಕಾದರೆ ಸುಮ್ಮನೆ ಆ ಊರು ಇರುವ ಸ್ಥಳದಲ್ಲಿ ನಾವು ಬೆರಳಿಟ್ಟುಕೊಂಡು ಅಲ್ಲಿರುವೆವೆಂದು ಆಲೋಚಿಸಿದರೆ ಅಲ್ಲಿಗೆ ಹಾರುವುದಿಲ್ಲ. ಕಷ್ಟಪಟ್ಟು ಆ ಊರು ಸೇರಬೇಕಾದರೆ ದಾರಿಯನ್ನು ನಡೆಯಬೇಕು. ನಾವು ಸೇರಬೇಕೆಂದಿರುವ ಊರಿಗೆ ಹೋಗಬೇಕಾದರೆ ಇನ್ನೂ ಎಷ್ಟೋ ಊರನ್ನು ಹಾದುಹೋಗಬೇಕು. ಗುರಿ ಯಾವುದು, ನಾವು ಹೋಗುವುದು ಹೇಗೆ, ದಾರಿಯಲ್ಲಿ ಬರುವ ಕಷ್ಟನಷ್ಟಗಳೇನು, ಅದನ್ನು ನಾವು ಹೇಗೆ ನಿವಾರಿಸಬೇಕು ಎಂಬುದನ್ನು ಅದು ಬೋಧಿಸುತ್ತದೆ. ಯಾವ ಮಹಾಪುರುಷನು ತತ್ತ್ವವನ್ನು ಬೋಧಿಸುವನೋ ಅವನ ವ್ಯಕ್ತಿಗೆ ನಾವು ಗೌರವ ತೋರಿ ಅವನನ್ನು ಪ್ರೀತಿಸಿ ಸೇವಿಸಿದರೆ, ಕ್ರಮೇಣ ಆ ವ್ಯಕ್ತಿಯ ದಯೆಯಿಂದ ನಮಗೂ ತತ್ತ್ವದ ಅನುಭವವಾಗುವುದು ಎಂದು ಮತ ಸಾರುತ್ತದೆ.

ಒಂದು ಧರ್ಮ ಸಂಸ್ಥೆ ಅನೇಕಕಾಲ ಬಾಳಬೇಕಾದರೆ, ಅನೇಕ

ಜೀವರನ್ನು ಉದ್ಧಾರಮಾಡುವ ಒಂದು ಯಂತ್ರವಾಗಬೇಕಾದರೆ, ಅದರಲ್ಲಿ ತತ್ತ್ವ ಮತ್ತು ಉಪಾಸನೆಗಳೆರಡೂ ಸರಿಸಮನಾಗಿ ಬೆರತಿರಬೇಕು. ಧರ್ಮ ಸಂಸ್ಥೆಯ ಮೂಲ ಅದನ್ನು ಸ್ಥಾಪಿಸಿದ ವ್ಯಕ್ತಿಯಲ್ಲಿದೆ. ತತ್ತ್ವವೆಂಬುದು ಆತನು ವಾಸಿಸುವ ಮನೆ. ವ್ಯಕ್ತಿಯ ಜೀವನ ಮತ್ತು ತಪಸ್ಸು ಒಂದು ಧರ್ಮಸಂಸ್ಥೆಯ ಜೀವಾಳ. ಉಪಾಸನೆಯೊಂದಿಗೆ ತತ್ತ್ವವೆಲ್ಲಿ ಇಲ್ಲವೋ ಅದು ಬರಿಯ ಮೂಢ ನಂಬಿಕೆಯ ಕಂತೆಯಾಗುತ್ತದೆ. ಕೋಮುವಾರು ದ್ವೇಷಗಳಿಗೆಲ್ಲ ಅದೇ ಕಾರಣ. ಆಯಾ ಮತದ ಅನುಯಾಯಿಗಳು ಕ್ರೈಸ್ತನೇ ದೊಡ್ಡವನು, ಕೃಷ್ಣನೇ ದೊಡ್ಡವನು, ಬುದ್ಧನೇ ದೊಡ್ಡವನು ಎಂದು ತಿಳಿದು ಉಳಿದ ಮತಗಳ ಮೇಲೆ ತಮ್ಮ ಬಲಪ್ರಯೋಗ ಮಾಡಿ ಅವರನ್ನು ತಮ್ಮ ಪಡೆಗೆ ಸೇರಿಸಿಕೊಳ್ಳುತ್ತಾರೆ. ಎಲ್ಲಿ ಉಪಾಸನೆ ಇಲ್ಲದೇ ಬರೀ ತತ್ತ್ವವಿರುವುದೋ ಅದು ಬುದ್ಧಿಯ ಒಂದು ಗರಡಿಯ ಮನೆಯಾಗುವುದು. ನಾವು ಅದರಿಂದ ಮಾತಿನ ಮಲ್ಲರಾಗಿ ಇನ್ನೊಬ್ಬರನ್ನು ಬೆರಗು ಮಾಡಬಹುದೇ ಹೊರತು ಸರ್ವವನ್ನು ತ್ಯಜಿಸಿ ಒಂದು ಮಹಾಕಾರ್ಯವನ್ನು ಸಾಧಿಸಬೇಕು ಎಂಬ ಸ್ಫೂರ್ತಿಯನ್ನು ಅದು ಒದಗಿಸಲಾರದು.

ಶ್ರೀರಾಮಕೃಷ್ಣರಿಂದ ಪ್ರಚಾರಕ್ಕೆ ಬಂದ ಧಾರ್ಮಿಕ ಸಂಸ್ಥೆಯಲ್ಲಿಯೂ ತತ್ತ್ವ ಮತ್ತು ಉಪಾಸನೆಗೆ ಅನ್ವಯಿಸುವ ಬೋಧನೆಗಳಿವೆ. ಸ್ವಾಮಿ ವಿವೇಕಾನಂದರು ತತ್ತ್ವವನ್ನು ಹೆಚ್ಚು ಬೋಧಿಸಿದವರು ಅಂದರೆ ಉಪಾಸನೇ ಬೋಧಿಸಲೇ ಇಲ್ಲವೆಂದು ಅಲ್ಲ. ಅದು ನಮಗೆ ಅಷ್ಟು ಕಾಣುವುದಿಲ್ಲ. ಶ್ರೀ ಶಾರದಾದೇವಿಯವರು ಉಪಾಸನೆಗೆ ಸಂಬಂಧಪಟ್ಟುದನ್ನು ಬೋಧಿಸಿದರು. ಅದರಲ್ಲಿಯೂ ತತ್ತ್ವಕ್ಕೆ ಸಂಬಂಧಪಟ್ಟ ಬೋಧನೆಗಳಿದ್ದುವು. ಆದರೆ ಉಪಾಸನೆಗೆ ಪ್ರಾಧಾನ್ಯ ಕೊಟ್ಟರು. ಎರಡು ಮಹಾಜೀವಿಗಳಲ್ಲೂ ತತ್ತ್ವ ಮತ್ತು ಉಪಾಸನೆಗಳೆರಡೂ ಸಮತೂಕದಲ್ಲಿದ್ದರೂ, ಎರಡನ್ನೂ ಇಬ್ಬರೂ ಬೋಧನೆ ಮಾಡುವುದಕ್ಕೆ ಕಾಲ ಸಾಲದೇ ಇದ್ದುದರಿಂದ ಒಬ್ಬೊಬ್ಬರು ಒಂದೊಂದು ಭಾಗವನ್ನು ಮಾಡಿದರು. ಉಪಾಸನೆಗೆ ಸಂಬಂಧಪಟ್ಟ ಶ್ರೀ ಶಾರದಾದೇವಿಯವರ ಅಭಿಪ್ರಾಯವನ್ನು ನಾವು ಈ ಮಾತಿನಲ್ಲಿಡಬಹುದು. (೧) ಶ್ರೀರಾಮಕೃಷ್ಣರು ಅವತಾರ ಪುರುಷರು. ಅವರಲ್ಲಿ ಹಿಂದಿನ ಅವತಾರದ ಉಪದೇಶಗಳು, ಪರಮಾತ್ಮನ ಅನಂತ ಆಕಾರಗಳು ಎಲ್ಲ ಸಂಗಮವಾಗಿವೆ. (೨) ಆ ವ್ಯಕ್ತಿ ದೇಹದಲ್ಲಿ ಇಲ್ಲದೇ ಇದ್ದರೂ, ನಾಶವಾಗಿಲ್ಲ. ಪ್ರೀತಿಯಿಂದ, ಹೃದಯನೈರ್ಮಲ್ಯದಿಂದ, ಇಚ್ಛಿಸಿದರೆ ನಾವು ಅವರೊಂದಿಗೆ ಸಂಬಂಧವನ್ನು ಕಲ್ಪಿಸಿಕೊಳ್ಳಬಹುದು. (೩) ಅವರ

ಜೀವನ ಮತ್ತು ಉಪದೇಶ ಮಾನವನ ಮುಕ್ತಿಗೆ ಮತ್ತೊಂದು ಮಾರ್ಗವನ್ನು ಕಲ್ಪಿಸಿಕೊಟ್ಟಿವೆ. ಅವರಿಗೆ ಸಂಬಂಧಪಟ್ಟ ಕೆಲಸಗಳನ್ನು ಮಾಡುವುದರಿಂದ, ಆ ಮಹಾವ್ಯಕ್ತಿಯಿಂದ ಉದ್ಭವಿಸಿದ ಆಧ್ಯಾತ್ಮಿಕ ಶಕ್ತಿಯನ್ನು ಉಪಯೋಗಿಸಿಕೊಳ್ಳಲು ಹಕ್ಕುದಾರರಾಗುತ್ತೇವೆ. ಸಾಗರಾಭಿಮುಖವಾಗಿ ಹರಿಯುವ ನದಿಯೊಂದಿಗೆ ನಮ್ಮ ದೋಣಿಯನ್ನು ತೇಲಿಸಿದರೆ ಹೇಗೆ ನಿರಾಯಾಸವಾಗಿ ನಾವು ಸಾಗರವನ್ನು ಸೇರುವೆವೋ ಹಾಗೆಯೇ ಶ್ರೀ ರಾಮಕೃಷ್ಣರ ಶಕ್ತಿ ಪ್ರವಾಹದ ಮೇಲೆ ತೇಲಿದರೆ ನಾವು ಜೀವನದ ಗುರಿಯನ್ನು ಸೇರಬಹುದು.

ಶ್ರೀ ಶಾರದಾದೇವಿಯವರು ಮೇಲಿನ ಉಪದೇಶವನ್ನು ತಮ್ಮ ಜೀವನದಲ್ಲಿ ನಿದರ್ಶಿಸಿರುವರು. ಶ್ರೀ ರಾಮಕೃಷ್ಣರು ಬದುಕಿರುವತನಕ ಅವರ ಸೇವೆಯಲ್ಲಿ ಕಾಲವನ್ನು ಕಳೆದರು. ನಂತರ ಅವರ ಪೂಜೆಯಲ್ಲಿ ಅವರ ಕೆಲಸಗಳನ್ನು ಮಾಡುವುದರಲ್ಲಿ ನಿರತರಾಗಿದ್ದರು. ಇದರಿಂದ ಪರಮಪದವನ್ನು ಹೇಗೆ ಹೊಂದಲು ಸಾಧ್ಯವಾಯಿತು ಎಂಬುದನ್ನು ಅವರ ಜೀವನದಲ್ಲಿ ನೋಡಬಹುದು. ಸ್ವಾಮಿ ವಿವೇಕಾನಂದರಿಂದ ಶ್ರೀರಾಮಕೃಷ್ಣ ಸಂಘ ಸ್ಥಾಪಿತವಾದಮೇಲೆ ಸಂಘವೇ ಶ್ರೀರಾಮಕೃಷ್ಣರ ದೇಹವಾಯಿತು. ಸಂಘಕ್ಕೆ ಅನ್ವಯಿಸುವ ನಾನಾ ಕಾರ್ಯಗಳನ್ನು ಯಾರು ಭಕ್ತಿ ಶ್ರದ್ಧೆಯಿಂದ ಮಾಡುತ್ತಾರೋ ಅವರು ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯುವರು ಎಂದು ಸಾರಿದರು. ಶ್ರೀ ರಾಮಕೃಷ್ಣರು ಜೀವಂತರಾಗಿರುವರು ಎಂದು ಶ್ರೀ ಶಾರದಾದೇವಿಯವರು ನಂಬಿದ್ದರು. ಅನೇಕ ವೇಳೆ ಅವರಿಗೆ ದರ್ಶನ ಕೊಟ್ಟಿದ್ದರು. ಉಪಾಸನೆಗೆ ಸಂಬಂಧಪಟ್ಟ ಉಪದೇಶವನ್ನು ಶ್ರೀ ಶಾರದಾದೇವಿಯವರೇ ಮೊದಲು ಪ್ರಚಾರಕ್ಕೆ ತಂದರು ಎಂದರೆ ಆಶ್ಚರ್ಯವಾಗಲಾರದು.

ಉಪಾಸನಾ ಕ್ಷೇತ್ರದಲ್ಲಿ ಅವರು ಏನು ಮಾಡಿದರು ಎಂಬುದು ಕೇವಲ ಶ್ರೀ ರಾಮಕೃಷ್ಣರ ಅನುಯಾಯಿಗಳಿಗೆ ಮಾತ್ರ ಶೋಭಿಸಬಹುದು. ಆದರೆ ಅವರು ತಾತ್ತ್ವಿಕ ಪ್ರಪಂಚದಲ್ಲಿ ಮಾಡಿದ ಬೋಧನೆ ಎಲ್ಲರಿಗೂ ರುಚಿಸುವುದು. ಶ್ರೀ ರಾಮಕೃಷ್ಣರು ಒಮ್ಮೆ ಶಿಷ್ಯನಿಗೆ ಸಂಸಾರದಲ್ಲಿರು, ಆದರೆ, ನಿನ್ನಲ್ಲಿ ಸಂಸಾರವಿರದೇ ಇರಲಿ; ದೋಣಿ ನದಿಯ ಮೇಲೆ ತೇಲಲಿ ಆದರೆ ನದಿಯ ನೀರು ದೋಣಿಯೊಳಗೆ ನುಗ್ಗಿದರೆ ವಿಪತ್ತು ಬರುವುದು ಎಂದರು. ಇದೇ ಶ್ರೀಕೃಷ್ಣನು ಗೀತೆಯಲ್ಲಿ ಬೋಧಿಸುವ ಅನಾಸಕ್ತಿ ಯೋಗದ ಸಾರ. ಶ್ರೀ ಶಾರದಾದೇವಿಯವರ ಜೀವನವೇ ಇದಕ್ಕೆ ಒಂದು

ನಿದರ್ಶನವೆಂದು ಹೇಳಬಹುದು. ಶ್ರೀ ರಾಮಕೃಷ್ಣರ ಕಾಲಾನಂತರ ಕೇವಲ ಜಪ ತಪ ಧ್ಯಾನಗಳಲ್ಲಿ ಮಾತ್ರ ನಿರತರಾಗದೆ ತಮ್ಮಂದಿರು ಮತ್ತು ಇತರ ಬಂಧುಗಳೊಡನೆ ಸಂಸಾರದಲ್ಲಿದ್ದರು. ಸಾಧಾರಣ ಸಂಸಾರದ ಬವಣೆಯೆಲ್ಲ ಇವರ ಸುತ್ತಲೂ ಮುತ್ತಿಕೊಂಡಿತ್ತು. ಬೆಳಗೆದ್ದರೆ ತಮ್ಮಂದಿರು ಜಗಳ ಕಾಯುತ್ತಿದ್ದರು. ಇವರನ್ನು ದುಡ್ಡಿಗೆ ಪೀಡಿಸುತ್ತಿದ್ದರು, ಬೈಯ್ಯು ತ್ತಿದ್ದರು, ಕೆಲವು ವೇಳೆ ರಾಧೆ ಸೌರಬಾಲೆಯರಂತಹ ಚಂಡಿ ಹೆಂಗಸರು ಇವರನ್ನು ಹೊಡೆಯುತ್ತಲೂ ಇದ್ದರು. ಇಂತಹ ಪ್ರಸಂಗದಲ್ಲಿಯೂ ಇವರು ಕೋಪತಾಳದೆ ಪ್ರಶಾಂತಚಿತ್ತರಾಗಿ ಇರುವುದನ್ನು ನೋಡಬಹುದು. ಅವರ ಬಳಿಗೆ ಬರುತ್ತಿದ್ದವರೆಲ್ಲರೂ ಉತ್ತಮಚಾರಿತ್ರದವರಲ್ಲ. ಭಕ್ತಿ ಭಿಕ್ಷೆ ಮಾತ್ರ ಬೇಡುವುದಕ್ಕೆ ಬಂದವರಲ್ಲ. ಇಂತಹ ಗೊಂದಲದ ಮಧ್ಯದಲ್ಲಿ ಅವರ ಮನಸ್ಸು ಪರಮಾತ್ಮನ ಮೇಲೆ ಅನವರತವೂ ಇರುತ್ತಿತ್ತು. ಮುಕ್ತಿ ಬೇಕಾದರೆ ಮನೆ ಬಿಟ್ಟು ಹೋಗಬೇಕಾಗಿಲ್ಲ. ಇರುವ ಕಡೆಯಲ್ಲಿಯೇ ಅದನ್ನು ಸಾಧಿಸಬಹುದು ಎಂಬುದನ್ನು ನೋಡಬಹುದು.

ಇವರಲ್ಲಿದ್ದ ಎಲ್ಲ ಗುಣಗಳನ್ನೂ ಮೀರಿಸಿ ಮೇಲೆದ್ದು ನಿಲ್ಲುವುದು ತಾಯ್ತೊಲುಮೆ. ಜಗತ್ತಿನಲ್ಲಿ ಅತ್ಯಂತ ಪೂಜ್ಯತಮವಾದ ವಸ್ತು ತಾಯಿ. ಸಹಿಷ್ಣುತೆಯನ್ನು ನೋಡಬೇಕಾದರೆ, ನಿಸ್ವಾರ್ಥ ಪ್ರೀತಿಯನ್ನು ನೋಡ ಬೇಕಾದರೆ, ತಾಯಿಯಲ್ಲದೆ ಬೇರೆ ವ್ಯಕ್ತಿ ಎಲ್ಲಿ ಸಿಕ್ಕುವುದು? ಎಲ್ಲರನ್ನೂ ತಮ್ಮ ಮಕ್ಕಳೆಂದು ತಿಳಿದರು. ಯಾರು ಎಷ್ಟು ಕಿರುಕುಳವನ್ನು ಕೊಟ್ಟರೂ ಮರುಮಾತಾಡದೆ ಅನುಭವಿಸಿದರು. ಅವರನ್ನು ಎಷ್ಟು ನೋಯಿಸಿದರೂ ಅವರೆದೆಯ ಚಿಲುಮೆಯಲ್ಲಿ ಜಿನುಗುತ್ತಿದ್ದಿತು ಹಿಂಸಿಸಿದವನ ಮೇಲೆ ಪ್ರೀತಿಯ ಅಮೃತ. ಎಂತಹ ಪಾಪಿ ಬರಲಿ, ಪಟಿಂಗ ಬರಲಿ, ಎಲ್ಲರನ್ನೂ ಅವರು ತಾಯಿಯಂತೆ ಕಂಡು ಉಪಚರಿಸಿ ಅವರ ದುಃಖವನ್ನು ತಗ್ಗಿಸಿ ದೇವರೆಡೆಗೆ ಮನಸ್ಸನ್ನು ಒಯ್ಯುತ್ತಿದ್ದರು. "ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ" "ಕೆಟ್ಟ ಮಕ್ಕಳು ಕೆಲವು ವೇಳೆ ಹುಟ್ಟ ಬಹುದು. ಆದರೆ ಕೆಟ್ಟ ತಾಯಿ ಎಂದಿಗೂ ಇಲ್ಲ," ಎಂದು ಶ್ರೀ ಶಂಕರಾ ಚಾರ್ಯರು ಭವಾನಿಯನ್ನು ಬೇಡುವಾಗ ನುಡಿದರು. ಅಂತಹ ತಾಯಿ ಯನ್ನು ಸಂದರ್ಶಿಸಬೇಕಾದರೆ ಶ್ರೀ ಶಾರದಾದೇವಿಯಂತಹ ದೇವತೆಯಲ್ಲಿ ಅಲ್ಲದೆ ಮತ್ತೆಲ್ಲಿ? ಅವರ ಉಪದೇಶವೆಲ್ಲ ವೇದಾಂತದ ನಿರ್ಣಯದ ಮೇಲೆ ನಿಂತಿತ್ತು. ಆದರೆ ಪಂಡಿತರಂತೆ ವಾದಮಾಡುವ ಗೋಜಿಗೆ ಹೋಗುತ್ತಿರ ಲಿಲ್ಲ. "ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿದು ಹೋದಂತೆಲ್ಲಾ

ಮನಸ್ಸಿನಿಂದಹಿಡಿದು ಜಡಪದಾರ್ಥದವರೆವಿಗೂ ಎಲ್ಲವೂ ಮಾಯೆ ಎಂದು ಗೊತ್ತಾಗುವುದು. ದೇವರೂ ಕೂಡ ಮಾಯೆಯಲ್ಲಿ ಸೇರಿರುವನು. ಚರಾಚರ ವಸ್ತುಗಳೆಲ್ಲ ಕಾಲದಲ್ಲಿ ಲಯವಾಗುವುದು" ಎನ್ನುತ್ತಿದ್ದರು. ಇಂತಹ ಅದ್ವೈತ ತತ್ತ್ವದ ಅನುಭವವಾಗಿದ್ದರೂ ಕೂಡ ಆಧ್ಯಾತ್ಮಿಕ ಜೀವನದಲ್ಲಿ ಭಕ್ತಿಮಾರ್ಗದಷ್ಟು ಸುಲಭವಾದುದು ಬೇರೆ ಇಲ್ಲ ಎನ್ನುತ್ತಿದ್ದರು. ಒಂದು ಸಲ ಭಕ್ತನೊಬ್ಬನು ದೇವರು ಸೃಷ್ಟಿ ಮೊದಲಾದುವೆಲ್ಲ ಮಾಯೆಯಾದ ಮೇಲೆ, ಗುರುಭಕ್ತಿಯಿಂದ ಪ್ರಯೋಜನವೇನು ಎಂದು ಪ್ರಶ್ನಿಸಿದನು. ಅದಕ್ಕೆ ಸ್ವಾಮಿ ವಿವೇಕಾನಂದರು ಒಂದು ದಿನ ಗುರುವಿನ ವಿಚಾರದಲ್ಲಿ ಹೇಳಿದ ಅಭಿಪ್ರಾಯವನ್ನೇ, "ಯಾವ ಜ್ಞಾನ ಗುರುವಿನ ಆವಶ್ಯಕತೆಯಿಲ್ಲವೆಂದು ವಾದಿಸುವುದೋ ಅದು ಜ್ಞಾನವಲ್ಲ ಅಜ್ಞಾನ. ಗುರುವೇ ಇಲ್ಲದ ಮೇಲೆ ಆ ಜ್ಞಾನವನ್ನು ನಿಜವಾದ ಜ್ಞಾನ ಎಂದು ಹೇಳುವವರಾರು?" ಎಂದು ಹೇಳಿದರು.

"ಕೇವಲ ಒಣತರ್ಕವನ್ನು ಬಿಡಿ. ಆಲೋಚನಾ ಶಕ್ತಿಯಿಂದಲೇ ಎಷ್ಟು ದೂರ ಹೋಗಬಹುದು. ಯಾರು ಇದರ ಮೂಲಕ ದೇವರನ್ನು ನೋಡಿರುವರು. ಶುಕಮಹರ್ಷಿಗಳೇ, ಸಕ್ಕರೆಯ ಬೆಟ್ಟದಿಂದ ಒಂದೆರಡು ಕಣಗಳನ್ನು ಹೊತ್ತು ಹೋಗುತ್ತಾ ತಾವು ಬೆಟ್ಟವನ್ನೇ ತಂದೆವೆಂದು ಹಿಗ್ಗುವ ಇರುವೆಗಳಂತೆ. ನಮ್ಮಂತಹ ಬಡಮಾನವರ ಪಾಡೇನು!" ಅವರು ತಮ್ಮ ಉಪದೇಶದಲ್ಲೆಲ್ಲಾ ಭಕ್ತಿಗೆ ಪ್ರಾಧಾನ್ಯವನ್ನು ಕೊಡುತ್ತಿದ್ದರು. ದೇವರನ್ನು ಯಾವಾಗಲೂ ನಮ್ಮ ಹತ್ತಿರದ ಪ್ರಿಯತಮ ಎಂದು ಭಾವಿಸಿ ಆತನಿಗೆ ಶರಣಾಗತನಾಗಬೇಕು. ಅವನ ಕೃಪೆಯಿಂದ ಮಾತ್ರ ಜೀವರಿಗೆ ಮುಕ್ತಿ ದೊರೆಯುವುದು. ನಾವು ಮಾಡುವ ತಪಸ್ಸೆಲ್ಲ ಮನಶ್ಶುದ್ಧಿಗಾಗಿ ಮಾತ್ರ—ಎನ್ನುತ್ತಿದ್ದರು.

ಆದರೆ ಅವರು ಎಂದಿಗೂ ಪುರುಷ ಪ್ರಯತ್ನವನ್ನು ನಿರಾಕರಿಸುತ್ತಿರಲಿಲ್ಲ. ಎಲ್ಲವೂ ದೇವರ ಇಚ್ಛೆಯಂತೆ ನಡೆಯುತ್ತದೆ. ಆದರೆ ದೇವರ ಇಚ್ಛೆಯೆಂದು ಕುಳಿತರೆ ಪ್ರಯೋಜನವಿಲ್ಲ. ನಾವು ಈಗ ಇರುವ ಸ್ಥಿತಿಗೆ ನಮ್ಮ ಹಿಂದಿನ ಕರ್ಮ ಹೇಗೆ ಕಾರಣವೋ ಹಾಗೆಯೇ ನಾವು ಇಂದು ಮಾಡುವ ಕರ್ಮಗಳೇ ಮುಂದಿನ ಜೀವನಕ್ಕೆ ಸಹಾಯ ಮಾಡುತ್ತವೆ. ಸಾಧನೆಯನ್ನು ಯಾರೂ ಅಲ್ಲಗಳೆಯಕೂಡದು. ಆದರೆ, "ಒಬ್ಬನು ತಾನು ಬೇಕಾದಷ್ಟು ಜಪತಪಗಳನ್ನು ಮಾಡಿದ್ದೇನೆ. ದೇವರು ನನಗೆ ಒಲಿಯಲೇ ಬೇಕೆಂಬುದು ತಪ್ಪು" ಎಂಬುದನ್ನು ಒತ್ತಿ ಹೇಳುತ್ತಿದ್ದರು. "ನಾವು

ಜಪ, ತಪ, ಧ್ಯಾನಗಳಿಂದ ದೇವರನ್ನು ಒಲಿಸಿಕೊಳ್ಳುವ ಹಾಗಿದ್ದರೆ ಅವನು ನಾವು ಕೊಳ್ಳುವ ಪ್ರಾಪಂಚಿಕ ವಸ್ತುವಾಗುವನು." ನಮ್ಮ ಪಾಂಡಿತ್ಯವಾಗಲೀ ತಪಸ್ಸಾಗಲೀ ಪ್ರಯೋಜನವಿಲ್ಲ. ಶುದ್ಧ ಪ್ರೇಮಭಕ್ತಿಯೊಂದಿದ್ದರೆ ಮೋಕ್ಷವನ್ನು ಹೊಂದಬಹುದು ಎನ್ನುತ್ತಿದ್ದರು. ಇಂತಹ ಭಕ್ತಿಯನ್ನು ಪಡೆಯುವುದು ಬಹಳ ಕಷ್ಟ. ಎಲ್ಲಿಯವರೆಗೆ ಎಳ್ಳಿನಷ್ಟಾದರೂ ಪ್ರಾಪಂಚಿಕ ಆಸೆ ನಮ್ಮಲ್ಲಿರುವುದೋ ಅಲ್ಲಿಯವರೆವಿಗೆ ನಮಗೆ ಆತನ ಮೇಲೆ ಪ್ರೇಮ ಭಕ್ತಿ ಬರುವುದಿಲ್ಲ. ಕೇವಲ ಈಶ್ವರ ಕೋಟಿಗಳು ಮಾತ್ರ ಪ್ರೇಮ ಭಕ್ತಿಯನ್ನು ಹೊಂದಿರುವರು. ಉಳಿದವರು ತಮ್ಮ ಮನಸ್ಸನ್ನು ಎಷ್ಟು ವಿಷಯದಾಸೆಯಿಂದ ಖಾಲಿ ಮಾಡುವರೋ ಅಷ್ಟು ಮಾತ್ರ ಹೊಂದುವರು. ಅದಕ್ಕೋಸ್ಕರವೇ ಅವರು ಒಂದು ಸಲ, "ದೇವರು ಮನುಷ್ಯನಿಗೆ ಮೋಕ್ಷವನ್ನಾದರೂ ಕೊಟ್ಟಾನು. ಅಂತಹ ಪ್ರೇಮಭಕ್ತಿಯನ್ನು ಸುಲಭವಾಗಿ ಕೊಡುವುದಿಲ್ಲ" ಎಂದರು.

ಪರಿಶುದ್ಧವಾದ ಮನಸ್ಸನ್ನು ಪಡೆಯಬೇಕಾದರೆ ಆಧ್ಯಾತ್ಮಿಕ ಅಭ್ಯಾಸ ಅತ್ಯಾವಶ್ಯಕ. ಶುದ್ಧ ಹೃದಯದಲ್ಲಿ ಮಾತ್ರ ಪ್ರೇಮಭಕ್ತಿ ಉದಿಸುವುದು. ಆಧ್ಯಾತ್ಮಿಕ ಅಭ್ಯಾಸ ನಮ್ಮನ್ನು ಪೂರ್ವ ಕರ್ಮ ಬಂಧನಗಳಿಂದ ಮುಕ್ತರನ್ನಾಗಿ ಮಾಡುವುದು. ಇಂದ್ರಿಯದಾಸೆಗಳ ಬಲೆಗೆ ಸಿಕ್ಕದೆ ಮನಸ್ಸನ್ನು ನಿಗ್ರಹಿಸಲು ಶಕ್ತಿಯನ್ನು ಕೊಡುವುದು. ಬಿರುಗಾಳಿ ಹೇಗೆ ಮೋಡವನ್ನು ಚದುರಿಸುವುದೋ ಹಾಗೆ ದೇವರ ಹೆಸರು ನಮ್ಮ ಹೀನ ಸಂಸ್ಕಾರ ರಾಶಿಯನ್ನೆಲ್ಲ ಚದುರಿಸಿ ಓಡಿಸುವುದು.

ಶರಣಾಗತಿಯನ್ನು ಎಷ್ಟು ಒತ್ತಿ ಹೇಳುತ್ತಿದ್ದರೋ, ಅಷ್ಟೇ ಪುರುಷ ಪ್ರಯತ್ನಕ್ಕೂ ಪ್ರಾಮುಖ್ಯತೆಯನ್ನು ಕೊಡುತ್ತಿದ್ದರು. ನಮ್ಮ ಕೈಲಾದ ಪ್ರಯತ್ನವನ್ನೆಲ್ಲ ಮಾಡಬೇಕು. ನಂತರ ದೇವರ ಕೃಪೆಗೆ ಕಾದು ಕುಳಿತುಕೊಳ್ಳಬೇಕು, ಎಂಬುದೇ ಅವರ ಉಪದೇಶದ ಪಲ್ಲವಿ. ದೇವರು ಪ್ರತ್ಯಕ್ಷನಾಗಲಿಲ್ಲವೆಂದು ಜಪಧ್ಯಾನಗಳನ್ನು ಬಿಡಬಾರದು. ಬೆಸ್ತನಿಗೆ ಪ್ರತಿದಿನ ಗಾಳಹಾಕಿದಾಗಲೂ ದೊಡ್ಡ ಮೀನು ಸಿಕ್ಕುವುದೆ? ಅದಕ್ಕೆ ಕಾದುಕುಳಿತುಕೊಳ್ಳಬೇಕು. ಅನೇಕ ವೇಳೆ ನಿರಾಶನಾಗಿಯೂ ಹೋಗಬೇಕು. ಸಾಧನೆಯಿಂದ ಸಿದ್ಧಿಸುವ ಆಧ್ಯಾತ್ಮಿಕ ಅನುಭವವೇ ನಾವು ಏನು ಮಾಡದೆ ತಾನಾಗಿ ಬರುವ ಅನುಭವಕ್ಕಿಂತ ಒಳ್ಳೆಯದೆಂದೂ, ಅದಕ್ಕೆ ದೃಷ್ಟಾಂತರವಾಗಿ, ಅಕಾಲದ ಮಾವಿನಹಣ್ಣು ಸಕಾಲದಲ್ಲಿ ಆದ ಮಾವಿನಹಣ್ಣಿನಷ್ಟು ರುಚಿಯಾಗಿರುವುದಿಲ್ಲವೆಂದು ಹೇಳುತ್ತಿದ್ದರು.

ಆಧ್ಯಾತ್ಮಿಕ ಸಾಧನೆಗಳಲ್ಲಿ ಅವರು ಜಪಕ್ಕೆ ಪ್ರಾಧಾನ್ಯ ಕೊಡುತ್ತಿದ್ದರು. ಮಂತ್ರೋಪದೇಶದಿಂದ ದೇಹ ಶುದ್ಧಿಯಾಗುತ್ತದೆ. ದೇವರು ನಮಗೆ ಬೆರಳುಗಳನ್ನು ಕೊಟ್ಟಿರುವುದು ಜಪಕ್ಕಾಗಿ. ಯಾರು ಪ್ರತಿದಿನವೂ ತಪ್ಪದೆ ಜಪ ಮಾಡುತ್ತಾರೋ ಅವರು ಆತ್ಮಶಕ್ತಿಯನ್ನು ಸಂಗ್ರಹಿಸುವರು. ದಿನಕ್ಕೆ ಸಾವಿರಾರು ಸಲ ಜಪ ಮಾಡುತ್ತಿದ್ದರೆ ಮನಸ್ಸು ಶಾಂತವಾಗಿ ಧ್ಯಾನದಲ್ಲಿ ನಿಲ್ಲುವುದು. ಮನಶ್ಶುದ್ಧಿ ಇರುವವರು ಜಪ ಮಾಡಿದರೆ ಹೃದಯದ ಅಂತರಾಳದಿಂದ ಮಂತ್ರ ತಾನಾಗಿ ಪ್ರಯತ್ನವಿಲ್ಲದೆ ಮೇಲೇಳುವುದು. ಇವರೇ ಜಪಸಿದ್ಧರು ಎನ್ನುತ್ತಿದ್ದರು.

ಧ್ಯಾನ ಜಪಗಳ ಜತೆಗೆ ಅನಾಸಕ್ತರಾಗಿ ಸಾರ್ವಜನಿಕ ಉಪಕಾರಾರ್ಥವಾದ ಕೆಲಸಗಳನ್ನೂ ಮಾಡಬೇಕೆಂದು ಹೇಳುತ್ತಿದ್ದರು. ಸಾಧಾರಣ ಜನರು ದಿನವನ್ನೆಲ್ಲ ಧ್ಯಾನದಲ್ಲಿ ಕಳೆಯಲಾರರು. ತಾವು ಧ್ಯಾನ ಮಾಡಿ ಆದಮೇಲೆ ಉಳಿದ ಕಾಲವನ್ನು ಸೇವೆಯಲ್ಲಿ ಉಪಯೋಗಿಸುವುದರಿಂದ ಚಿತ್ತ ಶುದ್ಧಿಯಾಗುವುದು. ಸೋಮಾರಿಯ ಮನಸ್ಸೆ ಮಾರನ ತೌರುಮನೆ. ಅಲ್ಲಿಂದಲೇ ಅನೇಕ ಹೀನ ಆಲೋಚನೆಗಳು ಹುಟ್ಟುವುವು. ಮನಸ್ಸು ದೇವರನ್ನು ಧ್ಯಾನಿಸುತ್ತಿರಬೇಕು. ಇಲ್ಲದೇ ಇದ್ದರೆ ಅವನಿಗೆ ಸಂಬಂಧಪಟ್ಟ ಕೆಲಸದಲ್ಲಿ ನಿರತವಾಗಿರಬೇಕೆಂದು ಬೋಧಿಸುತ್ತಿದ್ದರು.

ಸಾಧಕನ ಜೀವನ ಸುಲಭವಲ್ಲ. ಅನೇಕ ವೇಳೆ ಹಿಂದಿನ ಸಂಸ್ಕಾರಗಳ ಮೋಡ ಬೆಟ್ಟವನ್ನು ಬಂದು ಮುಸುಕುವಂತೆ ಮುತ್ತುವುವು. ಆಗ ನಾವು ನಿರಾಶರಾಗುತ್ತೇವೆ. ಕಷ್ಟದಲ್ಲಿ ಬಿದ್ದು ನರಳುತ್ತೇವೆ. ಬಹಳ ಶಕ್ತಿವಂತರೆಂದು ಜಂಭ ಕೊಚ್ಚಿಕೊಳ್ಳುತ್ತಿದ್ದವರಿಗೆ ಅವರ ಶಕ್ತಿಯೇ ಅವರ ನೆರವಿಗೆ ಬರುವುದಿಲ್ಲ. ಆ ವೇಳೆಯಲ್ಲಿ ನಾವು ಎದೆಗುಂದದೆ ಇರಬೇಕು ಎನ್ನುತ್ತಿದ್ದರು. ಸುಖ ಹೇಗೆ ಅವನ ವರವೋ ಕಷ್ಟವೂ ಅವನ ಕೃಪೆಯಿಂದಲೇ ನಮ್ಮಲ್ಲಿ ಯಾವುದೋ ಒಂದು ಗುಣವನ್ನು ಪೋಷಿಸಲು ಬರುತ್ತದೆ ಎಂದು ತಿಳಿಯಬೇಕು. ಆಗ ನಾನು ಎಷ್ಟು ಧ್ಯಾನ ಮಾಡಿದೆನು; ಆದರೂ ಮನಸ್ಸಿನಲ್ಲಿ ಇಂತಹ ಚಪಲತೆ ಬಂದಿತಲ್ಲಾ ಎಂದು ಅಶಾಂತಿಯನ್ನು ತಂದುಕೊಳ್ಳದೆ, ಕಂಬನಿದುಂಬಿ ಕಷ್ಟದಿಂದ ಪಾರುಮಾಡಬೇಕೆಂದು ದೇವರನ್ನು ಪ್ರಾರ್ಥಿಸಬೇಕು ಎನ್ನುತ್ತಿದ್ದರು.

ತಮ್ಮ ಹತ್ತಿರಕ್ಕೆ ಬಂದವರು ಸನ್ಯಾಸಿಗಳಾಗಲೀ, ಗೃಹಸ್ಥರಾಗಲೀ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿಯಬೇಕಾದರೆ ಸಂಯಮಿಗಳಾಗಬೇಕು ಎನ್ನುತ್ತಿದ್ದರು. ದೇಹದ ಸುಖದಿಂದ ಮನಸ್ಸು ಮೇಲಿರಬೇಕು. ಆಗ ಮಾತ್ರ ಅವರು ಜೀವನದಲ್ಲಿ ಮುಂದುವರಿಯಲು ಸಾಧ್ಯ.

ಅವರು ಆಧ್ಯಾತ್ಮಿಕ ಜೀವನಕ್ಕೆ ಬೇಕಾದ ವಿಷಯಗಳನ್ನೆಲ್ಲಾ ಈ ಒಂದು ಮಾತಿನಲ್ಲಿ ತುಂಬಿರುವರು, "ದೇವರಿಗೋಸ್ಕರ ಯಾರು ಎಲ್ಲವನ್ನೂ ತ್ಯಾಗಮಾಡುತ್ತಾರೆಯೋ ಅವರೇ ನರರೂಪಿ ನಾರಾಯಣ. ಯಾರು ದೇವರಲ್ಲಿ ಶರಣು ಹೋಗುತ್ತಾರೋ ಅವರಿಗೆ ವಿಧಿಯು ತನ್ನ ಆಜ್ಞೆಯನ್ನು ಕೂಡ ರದ್ದುಮಾಡುವುದು. ಬ್ರಹ್ಮನೇ ತಾನು ಏನು ಜೀವಿಯ ಹಣೆಯ ಮೇಲೆ ಬರೆದಿರುವನೋ ಇದನ್ನು ಅಳಿಸುವನು. ಆತ್ಮಸಾಕ್ಷಾತ್ಕಾರವನ್ನು ಹೊಂದಿದವರಿಗೆ ಏನು ಬರುವುದು. ಅವನಿಗೆ ಏನಾದರೂ ಒಂದು ಜತೆ ಕೊಂಬು ಹುಟ್ಟುವುದೇ? ಇಲ್ಲ ಆತನಿಗೆ ನಿತ್ಯ ಅನಿತ್ಯ ವಸ್ತು ವಿವೇಕ ಬರುತ್ತದೆ. ಆತ್ಮಜ್ಞಾನಲಾಭವಾಗುತ್ತದೆ. ಜನನ ಮರಣಗಳ ಕೋಟಲೆಯಿಂದ ತಪ್ಪಿಸಿಕೊಂಡು ಪರಮಸಾಯುಜ್ಯ ಪದವಿಯನ್ನು ಹೊಂದುತ್ತಾನೆ."

ಶ್ರೀ ಶಾರದಾದೇವಿಯವರ ಜೀವನ ಭಾರತೀಯ ಸ್ತ್ರೀಯರ ಆದರ್ಶ ವಿಚಾರವಾಗಿ ಶ್ರೀ ರಾಮಕೃಷ್ಣರು ಹೇಳಿದ ಕೊನೆಯ ಮಾತು ಎಂದು ಭಗಿನೀ ನಿವೇದಿತೆಯವರು ಹೇಳುತ್ತಾರೆ. ಶ್ರೀ ಶಾರದಾದೇವಿಯವರು ವಿದ್ಯಾವಂತರಲ್ಲ. ಲಜ್ಜಾ ಸ್ವಭಾವದವರು. ಬಾಲ್ಯದಲ್ಲಿಯೇ ಮದುವೆಯಾದವರು. ಇವುಗಳೆ ಭಾರತೀಯ ಆದರ್ಶ! ಎಂದು ನಾವು ಶಂಕಿಸಬಹುದು. ನಡೆನುಡಿಗಳು ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ಬದಲಾಯಿಸುವುವು. ಕೆಲವರು ಮುಸುಕು ಹಾಕಿಕೊಳ್ಳಬಹುದು. ಮತ್ತೆ ಕೆಲವರು ಮುಸುಕು ಹಾಕದೇ ಇರಬಹುದು. ಕೆಲವರು ಲಂಗ ಹಾಕಿಕೊಳ್ಳಬಹುದು ಮತ್ತೆ ಕೆಲವರು ಸೀರೆ ಉಟ್ಟುಕೊಳ್ಳಬಹುದು. ಒಬ್ಬರು ಗೃಹಿಣಿಯರಾಗಿ ಸಂಸಾರದಲ್ಲಿರಬಹುದು. ಮತ್ತೊಬ್ಬರು ಸನ್ಯಾಸಿನಿಯಾಗಿ ಮನೆಮಠಗಳನ್ನು ತೊರೆದಿರಬಹುದು. ಒಬ್ಬರು ನಿರಕ್ಷರ ಕುಕ್ಷಿಗಳಾಗಿರಬಹುದು ಮತ್ತೊಬ್ಬರು ಸಕಲ ವಿದ್ಯಾ ಪಾರಂಗತರಾಗಿರಬಹುದು. ಒಬ್ಬರು ಮನೆಯ ಶಾಂತ ಜೀವನದಲ್ಲಿರಬಹುದು. ಮತ್ತೊಬ್ಬರು ದೇಶದ ಆಂದೋಳನದಲ್ಲಿ ಮುಖ್ಯ ಪಾತ್ರವನ್ನು ವಹಿಸಿರಬಹುದು. ಒಬ್ಬರು ಲಜ್ಜಾಪ್ರಕೃತಿಯವರಾಗಿರಬಹುದು. ಮತ್ತೊಬ್ಬರು ಧೀರಗಂಭೀರ ಭಾವದಿಂದ ವರ್ತಿಸಬಹುದು. ಇವುಗಳನ್ನು ಸ್ತ್ರೀಯರ ಆದರ್ಶವೆಂದು ಹೇಳಲಾಗುವುದಿಲ್ಲ. ಇದೆಲ್ಲ ವ್ಯಕ್ತಿಗೆ ತೊಡಿಸಿರುವ ವೇಶ ಅಷ್ಟೆ. ಅದರ ಹಿಂದೆ ನಾವು ಹೋಗಬೇಕು. ಆಗ ಮಾತ್ರ ಯಾವ ಆದರ್ಶ ಇದೆ ಎಂಬುದು ತಿಳಿಯುವುದು. ಶ್ರೀ

ಶಾರದಾದೇವಿಯವರಲ್ಲಿ ಎಲ್ಲಕ್ಕಿಂತ ಹಿರಿಯದಾದ ಗುಣ ತಾಯ್ತನವಿಲುಮೆ. ತಮ್ಮಲ್ಲಿಗೆ ಶರಣು ಹೋಗಲು ಬಂದ ಭಕ್ತರನ್ನೆಲ್ಲ ಅವರು ತಾಯಿಯಂತೆ ಕಂಡರು, ಉಪಚರಿಸಿದರು, ಅವರ ಮೇಲ್ಮೆಗಾಗಿ ತಮ್ಮ ಸ್ವಂತ ಸುಖವನ್ನೂ ಅನುಕೂಲಗಳನ್ನೂ ಧಾರೆಯೆರೆದರು. ಅವರು ಯಾರೇ ಆಗಲಿ ಎಂತಹ ಘೋರ ಪಾತಕವನ್ನೇ ಮಾಡಿರಲಿ ಧಿಃಕ್ಕರಿಸಲಿಲ್ಲ. ಎಲ್ಲ ಹೆಣ್ಣಿದೆಯಲ್ಲೂ ತಾಯ್ತನವಿಲುಮೆ ಇರುವುದೇನೋ ಸಹಜ. ಆದರೆ ಅದು ತಮ್ಮ ಮಕ್ಕಳ ಹಿತದಲ್ಲಿ ಮಾತ್ರ ಕೊನೆಗಾಣುತ್ತದೆ. ಆ ತಾಯ್ತನವನ್ನು ನಾವು ವಿಸ್ತಾರ ಮಾಡಬೇಕು. ನಮ್ಮ ಸಂಸಾರವೊಂದು ಅಣಿಯಾಗಿದ್ದರೆ ಸಾಲದು. ನೆರೆಹೊರೆಯವರ ಸಂಸಾರ ಉತ್ತಮವಾಗುವುದಕ್ಕೆ ಪ್ರಯತ್ನಪಡಬೇಕು. ನಮ್ಮ ಮಕ್ಕಳು ಸುಶೀಲರಾಗಿ ವಿದ್ಯಾವಂತರಾದರೆ ಸಾಲದು. ಅದೃಷ್ಟಹೀನರಾದ ಎಷ್ಟೋ ಮಕ್ಕಳಿಗೆ ಮರುಗಿ ಅವರನ್ನು ಮೇಲೆತ್ತಬೇಕು. ಇವೆಲ್ಲ ಶ್ರೀ ಶಾರದಾದೇವಿಯವರ ಜೀವನದಲ್ಲಿ ಮೂರ್ತಿವೆತ್ತಿವೆ.

ಪತಿಯ ಸೇವೆಯಲ್ಲಿ ತಾವೆಂಬುದನ್ನು ಮರೆತರು. ನಂತರ ಭಗವಂತನ ಮಕ್ಕಳ ಸೇವೆಯಲ್ಲಿ ತಾವೆಂಬುದನ್ನು ಸವೆಸಿದರು. ಅವರಿಗೆ ಪತಿಯೇ ಗುರು; ಪತಿಯೇ ಇಷ್ಟದೈವ: ಪತಿಯೇ ಸಕಲ ಚರಾಚರ ವಸ್ತುವಿನಲ್ಲಿ ಇರುವುದು. ಪತಿಯನ್ನು ಮೀರಿದ ಮತ್ತೊಂದು ವಸ್ತು ಅವರಿಗಿರಲಿಲ್ಲ. ಪತಿದೇವನು ಮಹಾಸಮಾಧಿ ಹೊಂದಿದ ಮೇಲೆಯೂ ಅವರು ಪ್ರತ್ಯಕ್ಷವಿದ್ದ ಹಾಗೆಯೇ ತಿಳಿದರು. ಆತ್ಮದ ಅಮರತ್ವದಲ್ಲಿ ನಂಬಿದವರಿಗೆ ವಿಧವೆತನ ಹೇಗೆ ಬರುವುದು! ತಮ್ಮ ಜೀವನವನ್ನೆಲ್ಲ ಪತಿಯ ಸಂದೇಶವನ್ನು ಜಗತ್ತಿಗೆ ಹರಡಿ ಬದ್ಧಜೀವರನ್ನು ಮುಕ್ತರನ್ನಾಗಿ ಮಾಡುವುದರಲ್ಲಿ ವಿನಿಯೋಗಿಸಿದರು.

ಶ್ರೀ ಶಾರದಾದೇವಿಯವರು ಆದರ್ಶ ತಪಸ್ವಿನಿ. ವಿಷಯ ಸುಖದಾಸೆಗೆ ಒಮ್ಮೆಯೂ ಬೀಳಲಿಲ್ಲ. ತಮ್ಮ ಜೀವನವನ್ನೆಲ್ಲ ಧ್ಯಾನದಲ್ಲಿ, ಜನಸೇವೆಯೇ ಜನಾರ್ಧನ ಸೇವೆ ಎಂಬ ದೃಷ್ಟಿಯಿಂದ ಮಾಡಿದ ಕರ್ಮದಲ್ಲಿ ಕಳೆದರು. ಶ್ರೀ ರಾಮಕೃಷ್ಣರು ತಮ್ಮ ಕಠೋರ ತಪಸ್ಸಿನಿಂದ ಯಾವ ಯಾವ ಅನುಭವಗಳನ್ನು ಹೊಂದಿದ್ದರೋ ಅದೆಲ್ಲ ಇವರಿಗೂ ಸಿದ್ಧಿಸಿತ್ತು.

ಶ್ರೀ ಶಾರದಾದೇವಿಯವರು ಆದರ್ಶಮಾತೆ, ಆದರ್ಶಸತಿ, ಆದರ್ಶ ತಪಸ್ವಿನಿ. ಇಂತಹ ಮತ್ತೊಂದು ಜೀವನ ಪುರಾಣ ಪ್ರಪಂಚದಲ್ಲಿ ನಮಗೆ ಒಮ್ಮೊಮ್ಮೆ ಸುಳಿಯಬಹುದು. ಜಗದ ಇತಿಹಾಸದಲ್ಲಿ ಸಿಕ್ಕುವುದು ಅಪರೂಪ. ನಮ್ಮ ಕಣ್ಣೆದುರಿಗೆ ಇಂತಹ ಒಂದು ಭವ್ಯ ಜೀವನದ ಅಲರು

ಅರಳಿ ಪರಿಮಳ ಬೀರಿ ಈಗ ತಾನೆ ಬಾಡಿಹೋಗಿರುವುದು. ಇದು ಭಾರತ ನಾರಿಯರ ಆದರ್ಶ. ಇದನ್ನು ಶ್ರೀ ರಾಮಕೃಷ್ಣರು ನಮ್ಮ ನಾರಿಯರ ಮುಂದೆ ಇಟ್ಟರು.

———

## ೨೧. ಸಂಗಮ

ಕಾನನದಲ್ಲಿ ಅರಳುವ ಅಲರಂತೆ ಶ್ರೀ ಶಾರದಾದೇವಿಯವರ ಜೀವನ ನವನಾಗರಿಕತೆ ಇನ್ನೂ ಇಣಿಕಿಯೂ ನೋಡದ ಜಯರಾಮವಟಿ ಎಂಬ ಸುಂದರ ಗ್ರಾಮದಲ್ಲಿ ಮೊದಲಾದುದನ್ನು ನೋಡಿದೆವು. ಐದು ವರುಷದವರಾಗಿದ್ದಾಗಲೇ ಶ್ರೀ ರಾಮಕೃಷ್ಣರ ಕೈ ಹಿಡಿದು ಹದಿನೆಂಟು ವರುಷಗಳವರೆವಿಗೂ ಅವರ ಚಿಂತನೆಯಲ್ಲಿದ್ದರು. ನಂತರ ದಕ್ಷಿಣೇಶ್ವರದಲ್ಲಿ ಪತಿಸೇವೆ ಮಾಡಿ ಅವರ ನೇತೃತ್ವದಲ್ಲಿ ಆಧ್ಯಾತ್ಮಿಕ ಜೀವನದ ಮೊದಲ ಮೆಟ್ಟಲಿನಿಂದ ಹಿಡಿದು ನಿರ್ವಿಕಲ್ಪ ಸಮಾಧಿಯ ಶಿಖರದವರಿವಿಗೆ ಏರುವುದನ್ನು ಕಲಿತರು. ಪತಿಯ ಮಹಾಸಮಾಧಿಯ ನಂತರ ಕೆಲಕಾಲ ಕಷ್ಟದುಃಖಗಳನ್ನು ಅನುಭವಿಸಿ, ನಂತರ ಭಕ್ತರ ಉದ್ಧಾರಕ್ಕೆ ಸೊಂಟ ಕಟ್ಟಿ ನಿಂತು ಹಗಲಿರುಳೆನ್ನದೆ ತಮ್ಮ ಆರೋಗ್ಯವನ್ನು ಕೂಡ ಗಣನೆಗೆ ತರದೆ ದೇಹದಲ್ಲಿ ಉಸಿರಾಡುವವರೆವಿಗೂ ದುಡಿದರು. ಶರೀರ ನಶಿಸತೊಡಗಿತು. ಆತ್ಮ ತಾನು ಬಂದ ಸ್ಥಳಕ್ಕೆ ಹೊರಡಲು ಅಣಿಯಾಗಿ ಬುತ್ತಿ ಕಟ್ಟುತ್ತಿತ್ತು. ಅವರ ಜೀವನ ಗಂಗಾನದಿ ಅರವತ್ತೇಳು ವರುಷ ಹರಿದು, ದಡದ ಇಕ್ಕೆಲದ ಜೀವರಿಗೆಲ್ಲ ಅಮೃತವೆರೆದು, ಅವರ ಪಾಪ ಹೊತ್ತು ಮಂದಗಮನೆಯಾಗಿ ಸಾಗರ ಸೇರುತ್ತಿರುವಳು. ತಿರೆಯ ರಂಗದಿಂದ ಅವರ ಪಾರ್ಥಿವ ಜೀವ ಕಣ್ಮರೆಯಾಗುತ್ತಿರುವುದನ್ನು ನೋಡುತ್ತೇವೆ.

ಕ್ರಿ. ಶ: ೧೯೧೯ನೇ ಡಿಸೆಂಬರ ೧೩ನೇ ತಾರೀಖು ಜಯರಾಮವಟಿಯಲ್ಲಿ ಸಂಭ್ರಮೋತ್ಸವ. ಅಂದೇ ಶ್ರೀ ಶಾರದಾದೇವಿಯವರ ಜನ್ಮದಿನ. ಅವರ ದೇಹಕ್ಕೆ ಆಗಲೇ ಅರವತ್ತೇಳು ಚಳಿಗಾಲದ ಪೆಟ್ಟು ತಾಕಿದೆ. ಹತ್ತಿರ ನೆರೆದಿದ್ದ ಭಕ್ತರೆಲ್ಲರೂ ನಮಿಸಿ ಆಶೀರ್ವಾದ ಪಡೆದು ಹಿಂತಿರುಗುತ್ತಿದ್ದರು. ಅಂದಿನ ಸಾಯಂಕಾಲವೆ ಇವರಿಗೆ ಜ್ವರ ಬಂದಿತು. ಎಷ್ಟು ಔಷಧಿ ಪಥ್ಯಗಳನ್ನು ಮಾಡಿದರೂ ಬರುಬರುತ್ತಾ ಖಾಯಿಲೆ ಗುಣವಾಗದೆ ದೇಹವನ್ನು ಕ್ಷೀಣಿಸುತ್ತಾ ಬಂದಿತು. ಕಲ್ಕತ್ತೆಯಲ್ಲಿದ್ದ ಇವರ ಶಿಷ್ಯರಾದ ಸ್ವಾಮಿ ಶಾರದಾನಂದರಿಗೆ ತಿಳಿದು ಇವರನ್ನು ಅಲ್ಲಿಗೆ ಕರೆದುಕೊಂಡು ಹೋಗಲು ಬಂದರು. ಹಳ್ಳಿಯನ್ನು ಕೊನೆಯ ಸಲ ಬಿಡುವುದಕ್ಕೆ ಮುಂಚೆ ಸಿಂಹವಾಹಿನಿ ದೇವಸ್ಥಾನಕ್ಕೆ ಒಮ್ಮೆ ಹೋಗಿ ಬರಬೇಕೆಂದು ಬಯಸಿದರು. ಮನೆಯ ಹತ್ತಿರವೇ ಇದ್ದ ದೇವಸ್ಥಾನಕ್ಕೆ ಹೋಗಲೂ ಇವರಿಗೆ ನಿತ್ರಾಣವಾಗಿತ್ತು. ಜತೆಯಲ್ಲಿ ಒಬ್ಬರನ್ನು ಸಹಾಯಕ್ಕೆ ಕರೆದುಕೊಂಡು ಎರಡು ಮೂರು ಕಡೆ ಕುಳಿತು ದೇವಸ್ಥಾನವನ್ನು ಸೇರಿದರು. ಭಕ್ತಿಯಿಂದ ನಮ

ಸ್ಕಾರ ಮಾಡಿದರು. ಹಿಂದೆ ಎಷ್ಟೋ ಸಲ ತಾವು ದುಃಖದಲ್ಲಿದ್ದಾಗ ಬಂದು ದೇವಿಯ ಎಡೆ ಅತ್ತು ಹೃದಯಭಾರವನ್ನು ಹಗುರಮಾಡಿಕೊಂಡಿದ್ದರು. ಈಗ ಅದೆಲ್ಲಾ ಜ್ಞಾಪಕಕ್ಕೆ ಬಂದಿತು. ಈ ದೇವಿಯ ಅನುಗ್ರಹದಿಂದ ಇವರ ಜೀವನದ ತಳಿರು ರಾಮಚಂದ್ರ ಮುಖ್ಯೋಪಾಧ್ಯಾಯರ ವಂಶದ ತರುವಲ್ಲಿ ಚಿಗುರಿತು. ಈಗ ಇವರ ಜೀವನ ಹಣ್ಣೆಲೆಯಂತೆ ಆಗಿದೆ. ಚಳಿ ಗಾಲದಲ್ಲಿ ಸುತ್ತಲೂ ಇರುವ ಮರಗಳಿಂದ ಎಲೆಗಳು ಉದುರುತ್ತಿವೆ. ಇದ ರಂತೆಯೇ ಇವರ ವಯಸ್ಸಾದ ಜೀವನಕ್ಕೂ ರೋಗದ ಚಳಿಗಾಳಿ ತಗಲಿದೆ. ಇಂದೋ ನಾಳೆಯೋ ದೇವರ ಅಡಿಗೆ ಇವರ ಜೀವನ ಉರುಳಬಹುದು. ಸಿಂಹವಾಹಿನಿಯನ್ನು ಕಣ್ಣುತುಂಬ ನೋಡಿ ಹಿಂತಿರುಗಿದರು. ತಾವು ಬಾಲ್ಯದಿಂದ ಬೆಳೆದ ಊರನ್ನು ಕೊನೆಯ ಸಾರಿ ಬಿಟ್ಟರು. ಬಂಧುಗಳು ಸ್ವಲ್ಪ ದೂರ ಗಾಡಿಯ ಜೊತೆಯಲ್ಲಿ ಮಾತನಾಡುತ್ತಾ ಬಂದು ನಂತರ ಅವರೂ ಬೀಳ್ಕೊಟ್ಟರು. ಸಿಂಹವಾಹಿನಿಯ ದೇವಸ್ಥಾನದ ಸಣ್ಣ ಗೋಪುರ ಬರುಬರುತ್ತಾ ದೂರದಲ್ಲಿ ಕಣ್ಮರೆಯಾಗತೊಡಗಿತು. ಇನ್ನೊಂದು ಸಲ ದೇವಿಯನ್ನು ನೋಡುವ ಸುಯೋಗ ಇದೆಯೋ ಇಲ್ಲವೋ ಎಂದು ಸಂದೇಹ ಪಟ್ಟು ಮತ್ತೊಮ್ಮೆ ಆಕೆಗೆ ಮನದಲ್ಲಿಯೇ ನಮಿಸಿದರು. ಮಾರನೆಯ ದಿನ ಕ್ರಿ. ಶ. ೧೯೨೦ನೇ ಫೆಬ್ರವರಿ ೨೭ನೇ ತಾರೀಖು ಕಲ್ಕತ್ತೆಯನ್ನು ಸೇರಿ ದರು. ಉದ್ಬೋಧನದಲ್ಲಿ ಇವರಿಗಾಗಿ ಕಾದು ಕುಳಿತಿದ್ದ ಗುಲಾಬ್‌ಮಾ ಮತ್ತು ಯೋಗಿನ್‌ಮಾ ಅವರು, ಶ್ರೀ ಶಾರದಾದೇವಿಯವರನ್ನು ನೋಡಿ ಸ್ವಾಮಿ ಶಾರದಾನಂದರನ್ನು, "ಎಂತಹ ಹೀನಸ್ಥಿತಿಯಲ್ಲಿ ಶಾರದಾದೇವಿಯ ವರನ್ನು ಕರೆದುಕೊಂಡು ಬಂದಿರಿ, ಮಸಿಯಂತೆ ಕಪ್ಪಾಗಿರುವರು, ಚರ್ಮ ಹೊದಿಸಿದ ಅಸ್ಥಿಪಂಜರದಂತೆ ಕಾಣುವರು" ಎಂದು ದುಃಖಿಸಿದರು. "ಅವರು ಇದ್ದದ್ದು ಹಳ್ಳಿಯಲ್ಲಿ; ನುರಿತ ವೈದ್ಯರ ಸಹಾಯವಿರಲಿಲ್ಲ. ಇಲ್ಲಿ ಪ್ರಖ್ಯಾತರಾದ ವೈದ್ಯರಿರುವರು. ಔಷಧೋಪಚಾರವನ್ನು ಮಾಡಿದರೆ ಕ್ರಮೇಣ ಉತ್ತಮಗೊಳ್ಳುತ್ತಾರೆ" ಎಂದು ಸ್ವಾಮಿಗಳು ಧೈರ್ಯ ಹೇಳಿದರು.

ಕಲ್ಕತ್ತೆಗೆ ಬಂದಮೇಲೆ ಸುಮಾರು ಐದು ತಿಂಗಳವರೆವಿಗೆ ಜ್ವರ ಪ್ರತಿದಿನವೂ ಬರುತ್ತಿತ್ತು. ಆಗಲೇ ಅರವತ್ತೇಳು ವರ್ಷಗಳ ಪೆಟ್ಟನ್ನು ಸಹಿಸಿದ ದೇಹ. ಜತೆಗೆ ಹಗಲಿರುಳೆನ್ನದೆ ಭಕ್ತರ ಆಧ್ಯಾತ್ಮಿಕ ಅರೈಕೆ ಯಲ್ಲಿ ದುಡಿದು ಬಡವಾಗಿದ್ದರು. ಇದೇ ಸಮಯವನ್ನು ಹೊಂಚು ಹಾಕುತ್ತಿದ್ದ ರೋಗಗಳು ಒಂದೊಂದಾಗಿ ಇವರನ್ನು ಮುತ್ತಿತು. ಕಲ್ಕತ್ತೆಗೆ

ಬಂದ ಮಾರನೇ ದಿನವೇ ಹೆಸರುವಾಸಿಯಾದ ಕವಿರಾಜ ಶ್ಯಾಮದಾಸ್ ವಾಚಸ್ಪತಿ ಕೈಯಲ್ಲಿ ಔಷಧವನ್ನು ಕೊಡಿಸಲು ಮೊದಲು ಮಾಡಿದರು. ಅದರಿಂದ ಸ್ವಲ್ಪ ಗುಣವೇನೋ ಕಂಡುಬಂದಿತು. ಆದರೆ ಔಷಧಿ ವಿಪರೀತ ಕಹಿಯಾಗಿತ್ತು. ಊಟ ಮಾಡುವ ಸಮಯದಲ್ಲಿ ಕೂಡ ಆಹಾರವನ್ನೂ ಅರುಚಿಯನ್ನಾಗಿ ಮಾಡಿತು. ಅವರನ್ನು ತಪ್ಪಿಸಿ ಮತ್ತೊಬ್ಬ ಹೆಸರುವಾಸಿಯಾದ ಆಂಗ್ಲ ಔಷಧಿಯ ವೈದ್ಯರಾದ ಸಿ. ಡಿ. ಬೋಸ್ ಎಂಬುವರನ್ನು ಔಷಧಿ ಕೊಡುವಂತೆ ಮಾಡಿದರೂ ಗುಣಮುಖಕ್ಕೆ ತಿರುಗಲಿಲ್ಲ. ಅವರು ತಮ್ಮ ಕೈಲಾದ ಸಹಾಯವನ್ನೆಲ್ಲ ಮಾಡಿದರೂ ಪ್ರಯೋಜನವಾಗಲಿಲ್ಲ. ಪುನಃ ಕಹಿ ಔಷಧಿಯ ಆಯುರ್ವೇದ ಪಂಡಿತನ ಹತ್ತಿರವೇ ಹೋಗಬೇಕಾಯಿತು. ಮೊದಮೊದಲು ಜ್ವರ ಹಗಲು ಬಂದು ರಾತ್ರಿ ಬಿಡುತ್ತಿತ್ತು. ನಂತರ ಬೆಳಗ್ಗೆ ಮತ್ತು ಸಂಜೆ ಎರಡು ಹೊತ್ತೂ ಬರುವುದಕ್ಕೆ ಮೊದಲಾಯಿತು. ಕೊನೆಕೊನೆಗೆ ಬಂದ ಜ್ವರ ಕೆಲವು ವೇಳೆ ೧೦೩ ಡಿಗ್ರಿಯವರೆವಿಗೂ ಏರುತ್ತಿತ್ತು. ಆಗ ದೇಹದಲ್ಲೆಲ್ಲಾ ಒಂದು ವಿಧವಾದ ಉರಿ ಏಳುತ್ತಿತ್ತು. ಅದನ್ನು ತಡೆಯಲಾರದೆ ಹತ್ತಿರ ಶುಶ್ರೂಷೆ ಮಾಡುತ್ತಿದ್ದ ಯೋಗಿನ್ ಮಾಳನ್ನು ತಬ್ಬಿಕೊಳ್ಳುತ್ತಿದ್ದರು. ಸದಾ ಯಾರಾದರೂ ಗಾಳಿ ಬೀಸುತ್ತಲೇ ಇದ್ದರು. ಮಂಜನ್ನು ತಲೆ ಮುಂತಾದ ಕಡೆಗಳಿಗೆ ಕಟ್ಟಿ ಶಾಖವನ್ನು ತಗ್ಗಿಸಲು ಪ್ರಯತ್ನಿಸುತ್ತಿದ್ದರು.

ಅವರು ಖಾಹಿಲೆಯಲ್ಲಿ ನರಳುತ್ತಿರುವಾಗ ಅನ್ನ ಹಾಲು, ಮತ್ತು ತರಕಾರಿಯನ್ನು ಪಥ್ಯ ರೀತಿಯಲ್ಲಿ ಬೇಯಿಸಿಕೊಡುತ್ತಿದ್ದರು. ಆಯುರ್ವೇದ ಪಂಡಿತರು, ಇವರಿಗೆ ತಿನ್ನುವಷ್ಟು ಆಹಾರವನ್ನು ಕೊಡಿ; ಅದು ಜೀರ್ಣವಾಗಿ ರಕ್ತಗತವಾದರೆ ಪುಷ್ಟಿ ಬರುತ್ತದೆ ಎಂದು ಹೇಳಿದರು. ಅದರಂತೆ ಸರಳೆ ಎಂಬ ಹುಡುಗಿ ಇವರಿಗೆ ಆಹಾರವನ್ನು ತಂದುಕೊಡುತ್ತಿದ್ದಳು. ಕಂಜೀಲಾಲ್ ಎಂಬ ಹೋಮಿಯೋಪತಿ ವೈದ್ಯರು ಒಂದು ದಿನ ಶ್ರೀ ಶಾರದಾದೇವಿಯವರನ್ನು ನೋಡಲು ಬಂದಿದ್ದರು. ಇವರಿಗೆ ತರುವ ಆಹಾರವನ್ನು ನೋಡಿ, ಸರಳೆಗೆ, "ನೀನು ಇಷ್ಟೊಂದು ಆಹಾರವನ್ನು ಕೊಟ್ಟು ರೋಗಿಯನ್ನು ಸಾಯಿಸಬೇಕೆಂದು ಮಾಡಿರುವೆಯೋ? ನಿನಗೆ ಶುಶ್ರೂಷೆ ಮಾಡುವುದಕ್ಕೆ ಗೊತ್ತಿಲ್ಲ. ನಾನು ಆಸ್ಪತ್ರೆಯಿಂದ ನುರಿತ ಇಬ್ಬರು ದಾದಿಯರನ್ನು ಕಳುಹಿಸುತ್ತೇನೆ" ಎಂದು ಕೂಗಾಡಿ ಹೋದರು. ಸರಳೆಗೆ ತುಂಬಾ ವ್ಯಥೆಯಾಯಿತು. ಶ್ರೀ ಶಾರದಾದೇವಿಯವರು ಅವಳನ್ನು ಹತ್ತಿರ ಕರೆದು ಸಮಾಧಾನ ಮಾಡಿದರು. "ಅವಳ

ದೇನು ತಪ್ಪಿಲ್ಲ. ಅವನು ಹಾಗೆ ಕೂಗಾಡಬಾರದಿತ್ತು. ನಾನು ಏನಾದರೂ ಬೂಟ್ಸ್ ಹಾಕಿಕೊಂಡು ವಯ್ಯಾರ ಮಾಡುವ ದಾದಿಯರ ಕೈಯಿಂದ ಶುಶ್ರೂಷೆ ಮಾಡಿಸಿಕೊಳ್ಳುವುದಿಲ್ಲ" ವೆಂದರು. ಈ ಪ್ರಸಂಗವಾದ ಮೇಲೆ ಮೊದಲು ಸ್ವಲ್ಪ ಸೇರುತ್ತಿದ್ದ ಆಹಾರವೂ ಬೇಡವಾಯಿತು.

ರೋಗದಿಂದ ನರಳುವಾಗ ಅದರ ಸ್ವಭಾವ ಮಗುವಿನಂತೆ ಸರಳ ವಾಯಿತು. ಬಾಲ್ಯದಿಂದಲೂ ಗಂಗೆಯೆಂದರೆ ಪ್ರಾಣ. ಅಲ್ಲಿ ಮೀಯದ ದಿನವೇ ಇರಲಿಲ್ಲ. ಈಗ ಗಂಗೆಯ ಹತ್ತಿರವಿದ್ದರೂ ಅನೇಕ ದಿನಗಳಾ ದರೂ ಅದರ ದರ್ಶನದೇ ಇಲ್ಲ. ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ಹೋಗಲು ಸಾಧ್ಯವಾಗುತ್ತಿರಲಿಲ್ಲ. ಗಂಗಾ ಸ್ನಾನಕ್ಕೆ ಹೇಗೆ ಹೋಗುವುದು? ಆದರೂ ಒಂದೊಂದು ಸಲ ತಾವು ಗಂಗೆಗೆ ಸ್ನಾನಕ್ಕೆ ಹೋಗಬೇಕೆಂದು ಹಠ ಹಿಡಿಯುವರು. ಯಾರಾದರೂ ಹತ್ತಿರಿದ್ದವರು ನಾಳೆ ಕರೆದುಕೊಂಡು ಹೋಗುತ್ತೇವೆಂದು ಆಸೆ ತೋರಿಸಿದಲ್ಲವೆ ಊಟ ಮಾಡುತ್ತಿರಲಿಲ್ಲ. ಒಂದು ದಿನ ರಾತ್ರಿ ಆಗಲೇ ಹನ್ನೊಂದು ಗಂಟೆ ಯಾಗಿತ್ತು. ಸರಳೆ ಆಹಾರವನ್ನು ತೆಗೆದುಕೊಂಡು ಬಂದಳು. ಶ್ರೀ ಶಾರದಾದೇವಿಯವರು, "ನಾನು ಊಟ ಮಾಡುವುದಿಲ್ಲ. ನಿನಗೆ ಯಾವಾ ಗಲೂ ನನಗೆ ಊಟ ಮಾಡು ಎಂದು ಹೇಳುವುದು, ಆಮೇಲೆ ಗಾಜಿನ ಕೊಳವೆಯನ್ನು (ಥರ್ಮಾಮಿಟರ್) ಕಂಕುಳಲ್ಲಿ ಇಡುವುದೇ ಕೆಲಸ" ಎಂದರು. ಸರಳೆ, "ನಾನು ಹಾಗಾದರೆ ಶಾರದಾನಂದರಿಗೆ ಹೇಳುತ್ತೇನೆ" ಎಂದಳು. ಶಾರದಾನಂದರ ಹೆಸರನ್ನು ಕೇಳಿದರೆ ಸದ್ದಿಲ್ಲದೆ ಊಟ ಮಾಡು ತ್ತಿದ್ದರು. ಶಾರದಾನಂದರು ಇವರನ್ನು ಅತ್ಯಂತ ಪ್ರೀತಿಯಿಂದ ಕಾಣು ತ್ತಿದ್ದರು. ತಾವು ಊಟಮಾಡುವುದಿಲ್ಲವೆಂದರೆ ಅವರು ವ್ಯಥೆ ಪಟ್ಟು ತಾವೇ ಇವರನ್ನು ಬೇಡಿಕೊಳ್ಳುವುದಕ್ಕೆ ಬರುವರು. ಈ ತೊಂದರೆ ಅವರಿಗೆ ಕೊಡಲು ಇಚ್ಛಿಸುತ್ತಿರಲಿಲ್ಲ. ಆದರೆ ಈ ವೇಳೆ ಅವರು, "ಬೇಕಾ ದರೆ ಹೋಗಿ ಹೇಳು" ಎಂದರು. ಕೆಲವು ನಿಮಿಷಗಳಾದ ಮೇಲೆ ಶಾರದಾ ನಂದ ಸ್ವಾಮಿಗಳು ಬಂದರು. ಸಾಧಾರಣವಾಗಿ ಅವರು ಇವರೆದುರಿಗೆ ಇದ್ದಾಗ ನಾಚಿಕೆಯಿಂದ ಇನ್ನೊಬ್ಬರ ಮೂಲಕವೇ ಮಾತನಾಡುತ್ತಿದ್ದರು. ಅವರನ್ನು ತಮ್ಮ ಹತ್ತಿರ ಕುಳಿತುಕೊಳ್ಳುವಂತೆ ಹೇಳಿ ಅವರ ಕೆನ್ನೆಯನ್ನು ಪ್ರೀತಿಯಿಂದ ಮುಟ್ಟಿ ಅವರ ಕೈಗಳನ್ನು ತಮ್ಮ ಕೈಗಳಲ್ಲಿ ತೆಗೆದುಕೊಂಡು, "ಮಗು, ಇವರು ನನಗೆ ಎಷ್ಟು ತೊಂದರೆ ಕೊಡುತ್ತಾರೆ ಯಾವಾಗಲೂ ನನಗೆ ಊಟ ಮಾಡು ಎಂದು ಹೇಳುವುದು ಮತ್ತು ಗಾಜಿನ ಕೊಳವೆ

ಯನ್ನು ನನ್ನ ಕಂಕುಳಲ್ಲಿ ಇಡುವುದು. ಇದಲ್ಲದೆ ಇನ್ನು ಏನೂ ಕೆಲಸ ವಿಲ್ಲ. ನೀನು ಇನ್ನು ಮೇಲೆ ನನಗೆ ಹಾಗೆ ತೊಂದರೆ ಕೊಡಬೇಡವೆಂದು ಅವರಿಗೆ ಹೇಳು " ಎಂದರು. ಅವರು, " ಇನ್ನು ಮೇಲೆ ನಿಮಗೆ ಹಾಗೆ ಮಾಡುವುದಿಲ್ಲ. ನೀವು ಏನಾದರೂ ಆಹಾರವನ್ನು ತೆಗೆದುಕೊಳ್ಳುತ್ತೀರಾ?" ಎಂದು ಪ್ರಶ್ನಿಸಿದರು. ಅವರು ಅನ್ನ ಮತ್ತು ಹಾಲನ್ನು ಪುನಃ ತಂದರು. ತನಗೆ ಶಾರದಾನಂದರೇ ಕೊಡಲಿ ಎಂದರು. ಅವರೇ ಇವರಿಗೆ ಹಾಲನ್ನು ಕೊಟ್ಟು,"ಸ್ವಲ್ಪ ಈಗ ವಿಶ್ರಮಿಸಿ, ನಂತರ ಏನಾದರೂ ಆಹಾರವನ್ನು ತೆಗೆದು ಕೊಳ್ಳಿ" ಎಂದರು. ಇವರ ಮಾತನ್ನು ಕೇಳಿ ಶಾರದಾದೇವಿಯವರಿಗೆ ಸಂತೋಷವಾಯಿತು. " ನೋಡು ಅವನು ಎಷ್ಟು ಚೆನ್ನಾಗಿ ಮಾತ ನಾಡುತ್ತಾನೆ? 'ಅಮ್ಮ ಸ್ವಲ್ಪ ವಿಶ್ರಮಿಸಿಕೊಳ್ಳಿ. ನಂತರ ಆಹಾರವನ್ನು ತೆಗೆದುಕೊಳ್ಳಿ.' ಇವರಿಗೆ ಹಾಗೆ ಮಾತನಾಡುವುದಕ್ಕೆ ಬರುವುದಿಲ್ಲವೆ. ನನ್ನ ಮಗುವಿಗೆ ರಾತ್ರಿ ತುಂಬ ಕಷ್ಟ ಕೊಟ್ಟೆರು. ಹೋಗು ನೀನು ಮಲಗಿಕೊ. ನನಗೋಸ್ಕರ ಇವನು ಎಷ್ಟು ಕಷ್ಟ ಪಟ್ಟಿರುವನು" ಎಂದರು.

ರೋಗಶಯ್ಯೆಯಲ್ಲಿ ನಿತ್ರಾಣರಾಗಿ ಮಲಗಿದ್ದಾಗಲೂ ಕೂಡ ಅವ ರಲ್ಲಿ ತಾಯೊಲುಮೆ ಇನ್ನೂ ಪ್ರಕಾಶವಾಗಿತ್ತು. ತಮ್ಮ ಹತ್ತಿರ ಬರುವವರ ಆರೋಗ್ಯ ಮುಂತಾದವನ್ನು ವಿಚಾರಿಸಲು ಮರೆಯುತ್ತಿರಲಿಲ್ಲ. ಆಶ್ರಮಕ್ಕೆ ಬಂದು ಹೋಗುವವರಿಗೆ ಊಟ ಮಾಡಿ ಹೋಗಿ ಎಂದು ಹೇಳುವರು. ವೈದ್ಯರು ಅವರನ್ನು ನೋಡಲು ಬಂದರೆ ಅವರಿಗೆ ಏನಾದರೂ ತಿಂಡಿಯನ್ನು ಕೊಡುವುದನ್ನು ಮರೆಯುತ್ತಿರಲಿಲ್ಲ. ಜಯರಾಮವಟಿಯಿಂದ ರಮಣಿ ಎಂಬ ಹೆಂಗಸೊಬ್ಬಳು ಭಕ್ತನೊಬ್ಬನು ಕಳುಹಿಸಿದ ವಾಲೆಗಿಡದ ಹಣ್ಣನ್ನು ತೆಗೆದುಕೊಂಡು ಬಂದಿದ್ದಳು. ಅಂದು ಶ್ರೀ ಶಾರದಾದೇವಿಯವರಿಗೆ ಹೆಚ್ಚಾದ ಜ್ವರ ಬಂದು ಪ್ರಜ್ಞೆಯೇ ಇಲ್ಲದೆ ಮಲಗಿದ್ದರು. ಪ್ರಜ್ಞೆ ಬಂದ ಮೇಲೆ ಇಂತಹವರು ಬಂದಿದ್ದರೆಂದು ಹೇಳಿದಾಗ ಅವಳನ್ನು ತಾವು ನೋಡಲು ಆಗದೇ ಇದ್ದುದರಿಂದ ಅವಳು ಎಷ್ಟು ವ್ಯಥೆಪಟ್ಟುಕೊಳ್ಳು ವಳೋ ಎಂದು ತಿಳಿದು ಅವಳಿಗೆ ಕ್ಷಮಾಪಣೆ ಬೇಡಿ ಒಂದು ಕಾಗದವನ್ನು ಬರೆಸಿ ಹಾಕಿದರು. ಹತ್ತಿರ ಯಾರಾದರೂ ಒಬ್ಬರೇ ಬಹಳ ಹೊತ್ತು ಬೀಸುತ್ತಿದ್ದರೆ, " ಕೈ ನೋಯುವುದು. ನಿನಗೆ ಕೈ ನೋವಾದರೆ ನನಗೆ ನಿದ್ದೆ ಬರುವುದಿಲ್ಲ" ಎಂದು ಹೇಳಿ ಬೀಸುವುದನ್ನು ನಿಲ್ಲಿಸುತ್ತಿದ್ದರು.

ರೋಗ ಉಲ್ಬಣಾವಸ್ಥೆಗೆ ಬಂದಿತು. ಇವರು ತಮ್ಮ ಕೋಣೆಯಿಂದ ಸ್ನಾನಕ್ಕೆ ಕೂಡ ಎದ್ದು ಹೋಗಲು ಆಗುತ್ತಿರಲಿಲ್ಲ. ತಮ್ಮ ಕೋಣೆ

ಯನ್ನು ಅಷ್ಟು ದಿನಗಳವರೆವಿಗೆ ದೇವರ ಪೂಜೆಯ ಮನೆಯನ್ನಾಗಿ ಮಾಡಿಕೊಂಡಿದ್ದರು. ಅಂದಿನಿಂದ ಶ್ರೀ ರಾಮಕೃಷ್ಣರ ಭಾವಚಿತ್ರವನ್ನು ಬೇರೆ ಕಡೆಗೆ ಸಾಗಿಸಿದರು. ಮಂಚದ ಮೇಲಿನಿಂದ ಕೆಳಗೆ ಹಾಸುವಂತೆ ಹೇಳಿದರು. ಇಂತಹ ಸಮಯದಲ್ಲಿಯೂ ಏನು ಆಹಾರವನ್ನು ತೆಗೆದುಕೊಳ್ಳಬೇಕಾದರೂ ಗುರುದೇವನಿಗೆ ನೈವೇದ್ಯ ಮಾಡಿಯಲ್ಲದೆ ಮುಟ್ಟುತ್ತಿರಲಿಲ್ಲ. ಯಾರಾದರೂ ತಾವು ಯಾವಾಗ ಗುಣಮುಖರಾಗುತ್ತೀರಿ ಎಂದು ಕೇಳಿದಾಗ, ಗುರುದೇವನ ಇಚ್ಛೆ ಬಂದಾಗ ಎಂದು ಹೇಳುತ್ತಿದ್ದರು. ಕೆಲವು ವೇಳೆ ಗೌರಿಮಾ ತಮ್ಮ ಹಾಸಿಗೆಯ ಮೇಲೆ ಕುಳಿತಿದ್ದಾಗ ಶ್ರೀರಾಮಕೃಷ್ಣರ ನೆನಪಾಗಿ ಒಂದೊಂದಾಗಿ ಹಿಂದಿನ ಜೀವನದೃಶ್ಯವನ್ನು ಹೇಳುವರು. ಪಾವನ ಗಂಗಾನದಿಯ ಪಕ್ಕದಲ್ಲಿರುವ ದಕ್ಷಿಣೇಶ್ವರ ದೇವಸ್ಥಾನ, ಅದರಲ್ಲಿರುವ ರಾಮಕೃಷ್ಣರ ಸಮಾಧಿ ಸ್ಥಿತಿ, ಭಾವಾಸ್ಥೆಯಲ್ಲಿದ್ದಾಗ ಅವರು ಕುಣಿಯುತ್ತಿದ್ದ ನಾಟ್ಯ, ಕೇಳಿದರೆ ಭಕ್ತಿ ಗಂಗೆಯನ್ನು ಕಣ್ಣಿಗೆ ತರುವ ಅವರ ಗಾನ, ಎಲ್ಲ ಒಂದಾಗಿ ಬಂದು ಹೋಗುವುದು. "ಗೌರೀ ಎಂತಹ ಸುದಿನಗಳನ್ನು ನಾನು ಅವರೊಂದಿಗೆ ಕಳೆದೆ" ಎಂದು ನಿಟ್ಟುಸಿರು ಬಿಡುವರು.

ಕ್ರಮೇಣ ತಮ್ಮನ್ನು ಪ್ರಪಂಚಕ್ಕೆ ಬಂಧಿಸಿದ್ದ ಕೆಲವು ಬಂಧನಗಳನ್ನು ಬಿಚ್ಚತೊಡಗಿದರು. ರಾಧೆ ಎಂದರೆ ಅವರಿಗೆ ಪ್ರಾಣದಂತೆ ಇತ್ತು. ಮಾರನೇ ದಿನ ಒಬ್ಬರನ್ನು ಕರೆದು ರಾಧೆಯನ್ನು ಜಯರಾಮವಟಿಗೆ ಹೋಗು ಎಂದು ಹೇಳಿದರು. ಹತ್ತಿರವಿದ್ದವರು, "ನೀವು ಇವಳಿಲ್ಲದೆ ಹೇಗೆ ಇರುತ್ತೀರಿ?" ಎಂದಾಗ, "ಅದು ಸಾಧ್ಯ ನನ್ನ ಮನಸ್ಸನ್ನು ಅವಳಿಂದ ಸೆಳೆದುಕೊಂಡಿರುವೆನು" ಎಂದರು. ಅವರ ಹಾಸಿಗೆಯ ಹತ್ತಿರವೆ ರಾಧೆ ಎಳೆ ಮಗು ಅಂಬೆಗಾಲಿಡುತ್ತ ಅಳುತ್ತ ಬಂದಿತು. ಅದರ ಕಡೆ ಕೂಡ ನೋಡದೆ, "ಮಗುವನ್ನು ಕರೆದುಕೊಂಡು ಯಾರ ಕೈಲಾದರೂ ಕೊಟ್ಟು ಬನ್ನಿ" ಎಂದು ಹೇಳಿದರು. ಯೋಗಿನ್ ಮಾ ಇವನ್ನು ನೋಡಿ, "ನೀವು ನಿಮ್ಮ ಮನಸ್ಸನ್ನು ಅವಳ ಮೇಲಿಂದ ತೆಗೆದುಕೊಂಡರೆ ನಮ್ಮೊಂದಿಗೆ ಬಹಳ ಕಾಲ ಇರಲಾರಿರಿ. ನಮಗೋಸ್ಕರವಾಗಿಯಾದರೂ ನಿಮ್ಮ ಮನಸ್ಸನ್ನು ಅವಳ ಮೇಲೆ ನಿಲ್ಲಿಸಿ" ಎಂದರು. ಶ್ರೀ ಶಾರದಾ ದೇವಿಯವರು, "ಯೋಗಿನ್ ಮಾ! ಅವಳ ಮೇಲಿದ್ದ ನನ್ನ ಆಸೆಯನ್ನೆಲ್ಲ ಸೆಳೆದಿರುವೆನು, ಇನ್ನು ಅದು ಸಾಧ್ಯವಿಲ್ಲ" ಎಂದರು. ಇದನ್ನು ಶಾರದಾನಂದ ಸ್ವಾಮಿಯವರಿಗೆ ತಿಳಿಸಿದಾಗ, "ಅವರು ಹಾಗೆ ನಿರ್ಧರಿಸಿದ್ದರೆ

ನಮ್ಮಿಂದ ಬೇಗನೆ ಹೊರಟುಹೋಗಲು ಹವಣಿಸುತ್ತಿರುವರು" ಎಂದು ಗೊತ್ತಾಗುವುದು ಎಂದು ಶ್ರೀ ಶಾರದಾದೇವಿಯವರನ್ನು ಶುಶ್ರೂಷೆ ಮಾಡುತ್ತಿದ್ದ ಸರಳೆಗೆ, "ನೀನು ಹೇಗಾದರೂ ಅವರ ಮನಸ್ಸು ಪುನಃ ರಾಧೆಯ ಮೇಲೆ ಬರುವಂತೆ ಮಾಡು" ಎಂದು ಹೇಳಿ ಕಳುಹಿಸಿದರು. ಅವರು ಸಾಧ್ಯವಾದಷ್ಟು ಪ್ರಯತ್ನ ಪಟ್ಟರು. ನಂತರ ಶ್ರೀ ಶಾರದಾದೇವಿಯವರೇ ಒಂದು ದಿನ, "ಯಾವ ಮನಸ್ಸನ್ನು ನಾನು ಒಂದು ವಸ್ತುವಿನಿಂದ ಸೆಳೆದುಕೊಂಡಿರುವೆನೋ ಪುನಃ ಅದು ಅಲ್ಲಿ ನೆಲೆಸದು. ಇದನ್ನು ಜ್ಞಾಪಕದಲ್ಲಿಡು. ವೃಥಾ ಶ್ರಮವೇಕೆ" ಎಂದರು.

ಭಕ್ತರು ಇವರಿಗೆ ಔಷಧೋಪಚಾರವನ್ನೆಲ್ಲಾ ಮಾಡಿದರು. ಗುಣ ಕಾಣದ ಮೇಲೆ ಯಂತ್ರ ಮಂತ್ರವನ್ನೂ ಪ್ರಯತ್ನ ಪಟ್ಟರು. ಅದೂ ಇದರ ಸಹಾಯಕ್ಕೆ ಬರಲಿಲ್ಲ. ದೇಹ ರಕ್ತಹೀನವಾಯಿತು. ಕಾಲು ಬಾತುಕೊಂಡುವು. ಅಂದಿನಿಂದ ಹಾಸಿಗೆಯಿಂದ ಏಳಲು ಕೂಡ ಆಗುತ್ತಿರಲಿಲ್ಲ. ಇವರ ಮಹಾ ಸಮಾಧಿಗೆ ಐದು ದಿನಗಳ ಮುಂಚೆ ಅನ್ನಪೂರ್ಣೆಯ ತಾಯಿ ಬಂದು ಇವರ ಕೋಣೆಯ ಹೊಸಲ ಮೇಲೆ ಕುಳಿತುಕೊಂಡು ಅಳುತ್ತಿದ್ದರು. ಅವಳು ನೀವು ನಮ್ಮನ್ನು ಬಿಟ್ಟು ಹೋದ ಮೇಲೆ ನಮಗೆ ಗತಿಯಾರೆಂದು ಪುನಃ ಕಂಬನಿದುಂಬಿದಳು. ಶ್ರೀ ಶಾರದಾದೇವಿಯವರು, "ನೀನು ಯಾತಕ್ಕೆ ಅಂಜುವುದು ಗುರುದೇವನನ್ನು ನೀನು ನೋಡಿರುವೆ" ಎಂದು ಎಂದು ಹೇಳಿ ಸ್ವಲ್ಪ ಹೊತ್ತಾದ ಮೇಲೆ, "ನಾನು ನಿನಗೆ ಒಂದು ಮಾತು ಹೇಳುತ್ತೇನೆ ಕೇಳು. ಮನಶ್ಶಾಂತಿ ಬೇಕಾದರೆ ಇನ್ನೊಬ್ಬರಲ್ಲಿ ತಪ್ಪು ಕಂಡು ಹಿಡಿಯಬೇಡ. ಅದರ ಬದಲು ನಿನ್ನಲ್ಲಿ ತಪ್ಪು ಹುಡುಕಿ ನೋಡು. ಪ್ರಪಂಚವನ್ನೆಲ್ಲಾ ನಿನ್ನದನ್ನಾಗಿ ಮಾಡಿಕೋ. ಮಗು! ಯಾರೂ ಪರಕೀಯರಲ್ಲ. ಎಲ್ಲ ನಿನ್ನವರು" ಎಂದರು. ಇದೇ ಅವರು ಜಗತ್ತಿಗೆ ಕೊಟ್ಟ ಕೊನೆಯ ಉಪದೇಶ.

ಕ್ರಮೇಣ ಮನಸ್ಸು ಅಂತರ್ಮುಖವಾಗತೊಡಗಿತು. ಎಷ್ಟು ಹತ್ತಿರದವರು ಬಂದು ಇವರ ಸಮೀಪದಲ್ಲಿ ಕುಳಿತರೂ ಮನಸ್ಸನ್ನು ಆ ಕಡೆಗೆ ಬಿಡುತ್ತಿರಲಿಲ್ಲ. ಒಂದು ದಿನ ಶಾರದಾನಂದರನ್ನು ಕರೆಸಿ, "ಶರತ್ ನಾನು ಹೋಗುತ್ತೇನೆ ಯೋಗಿನ್, ಗುಲಾಬ್ ಇವರನ್ನೆಲ್ಲ ನೀನು ನೋಡಿಕೊ" ಎಂದು ಹೇಳಿದರು. ಇದೇ ಅವರು ಆಡಿದ ಕೊನೆಯ ಮಾತು. ಮಾರನೆ ದಿನ ಶಾರದಾನಂದ ಸ್ವಾಮಿಗಳನ್ನು ಕರೆಸಿ ಏನನ್ನೋ ಹೇಳಬೇಕೆಂದು ಪ್ರಯತ್ನ ಪಟ್ಟರು. ಆದರೆ ಮಾತನ್ನು ಆಡಲು ಆಗಲಿಲ್ಲ.

ಕ್ರಿ. ಶ. ೧೯೨೦ನೇ ಜುಲೈ ತಿಂಗಳು ೨೦ನೇ ತಾರೀಖು ರಾತ್ರಿ ಒಂದೂವರೆ ಗಂಟೆ ಸಮಯ. ಶ್ರೀ ಶಾರದಾದೇವಿಯವರಿಗೆ ಕ್ರಮೇಣ ಉಸಿರಾಡಲು ಕಷ್ಟವಾಗತೊಡಗಿತು. ಭಕ್ತಾದಿಗಳು ವಿಹ್ವಲರಾಗಿ ಹಾಸಿಗೆಯ ಸುತ್ತಲೂ ಮೌನದಲ್ಲಿ ಕುಳಿತುಕೊಂಡಿರುವರು. ಯಾರ ಮುಖದಲ್ಲಿಯೂ ಕಾಂತಿಯಿಲ್ಲ. ಇನ್ನೊಂದು ನಿಮಿಷ ಏನಾಗುವುದೋ ಎಂಬ ಅಂಜಿಕೆ. ಮೊದಲು ಶ್ರೀ ಶಾರದಾದೇವಿಯವರ ದೇಹವೆಲ್ಲ ಕಪ್ಪುಬಣ್ಣಕ್ಕೆ ತಿರುಗಿತು. ನಂತರ ಬಾಡಿತು. ಉಸಿರು ನಿಂತಿತು. ಅವರ ಜೀವನದ ಹಣತೆ ನಂದಿತು. ನಂತರ ಮುಖದ ಮೇಲೆ ಪೂರ್ಣಚಂದ್ರನಂತೆ ಒಂದು ಕಾಂತಿ ನಲಿದಾಡತೊಡಗಿತು. ಜಗನ್ಮಯಿ ದುರ್ಗಿಯ ಮೊಗದ ಮೇಲಿನ ಮಂದಹಾಸ ಅಲ್ಲಿ ಬೀರಿತ್ತು. ನೆರೆದ ಭಕ್ತರ ಕಣ್ಣಿನಿಂದ ಅಶ್ರುಧಾರೆ ಹರಿಯತೊಡಗಿತು. ಎಲ್ಲರೂ, "ಜಯಶ್ರೀ ಗುರುದೇವ, ಜಯಶ್ರೀ ಮಹಾಮಾತೆ" ಎಂದು ಧ್ವನಿ ಮಾಡಿದರು. ಪುರದ ಭಕ್ತರಿಗೆಲ್ಲ ಬೆಳಗಾಗುವುದರ ಒಳಗೆ ಮಿಂಚಿನ ವೇಗದಲ್ಲಿ ಸುದ್ದಿ ಮುಟ್ಟಿತು. ಸಹಸ್ರಾರು ಜನ ಬಂದು ಕೊನೆಯ ದರ್ಶನ ಪಡೆದು ಹೋದರು. ಶ್ರೀ ಶಾರದಾದೇವಿಯವರು ಗಂಗೆಯಲ್ಲಿ ಸ್ನಾನಮಾಡಬೇಕೆಂದು ಆಶಿಸುತ್ತಿದ್ದರು. ಅದರಂತೆಯೇ ಕಳೇಬರವನ್ನು ಗಂಗಾನದಿಗೆ ಕೊಂಡೊಯ್ದು ಸ್ನಾನ ಮಾಡಿಸಿ ಮಡಿಬಟ್ಟೆಯುಡಿಸಿ ಅಲಂಕಾರ ಮಾಡಿ ಶ್ರೀ ರಾಮಕೃಷ್ಣರ ಸಂಘಕ್ಕೆ ಸೇರಿದ ಹಿರಿಯ ಸ್ವಾಮಿಗಳೇ ಹೊತ್ತು ಬೇಲೂರು ಮಠಕ್ಕೆ ತಂದರು. ಅಲ್ಲಿಯೇ ಗಂಗಾನದಿಯ ತೀರದಲ್ಲಿ ಚಿತೆ ಮಾಡಿ ಸುಮಾರು ಮಧ್ಯಾಹ್ನ ಎರಡು ಗಂಟೆಯ ಹೊತ್ತಿಗೆ ಅವರ ದೇಹವನ್ನು ಅಗ್ನಿ ದೇವನಿಗೆ ಕೊಟ್ಟರು ನೆರೆದ ಸಾವಿರಾರು ಜನ ಭಕ್ತರು ಕಂಬನಿಗರೆಯುತ್ತಿದ್ದರು. ಇನ್ನು ಮೇಲೆ ಯಾರು ನಮ್ಮನ್ನು ತಾಯಿಯಂತೆ ಪ್ರೀತಿಸುವರು, ಬುದ್ಧಿ ಹೇಳುವರು, ದೇವನೆಡೆಗೆ ಕರೆದೊಯ್ಯುವವರು, ಅನಾಥರಾದೆವು ನಾವು, ಎಂದು ದುಃಖಿಸಿ ಹಿಂತಿರುಗಿದರು.

ಇಂದು ಶ್ರೀ ಶಾರದಾದೇವಿಯವರ ದೇಹವನ್ನು ಭಸ್ಮ ಮಾಡಿದೆಡೆಯಲ್ಲಿ ಭಕ್ತವೃಂದ ಅವರಿಗಾಗಿ ಒಂದು ಸುಂದರ ಮಂದಿರವನ್ನು ಕಟ್ಟಿಸಿದೆ. ಅದರಲ್ಲಿ ಒಂದು ಜೀವವಿದ್ದಂತೆ ತೋರುವ ಭಾವಚಿತ್ರವಿದೆ. ತಾವು ಬಾಲ್ಯದಿಂದಲೂ ಪ್ರೀತಿಸುತ್ತಿದ್ದ ಗಂಗೆ ಮುಂದೆ ಹರಿಯುತ್ತಿದೆ. ಅವರನ್ನು ನೋಡಲು ಹೋಗುತ್ತಿದ್ದ ಭಕ್ತರೇ ಇಂದು ಸಾವಿರಾರು ಮಂದಿ ಅಲ್ಲಿಗೆ ಹೋಗಿ ಆಕೆಯನ್ನು ಪೂಜಿಸಿ ಕೃತಾರ್ಥರಾಗಿ ಬರುವರು. ಆಕೆಯ

ತಪಸ್ಸು ಇನ್ನೂ ಅಲ್ಲಿದೆ. ಬಂದ ಜೀವಿಗಳನ್ನೆಲ್ಲಾ ಪಾಪ ಕೂಪದಿಂದ ಎತ್ತಿ ತೊಳೆದು ಉತ್ತಮರನ್ನಾಗಿ ಮಾಡಿದ ತಾಯೊಲುಮೆ, ಇಂದು ಅಲ್ಲಿ ನಲಿದಾಡುತ್ತಿದೆ. ಅಲ್ಲಿ ಮಾತ್ರವಲ್ಲ, ಜಡದೇಹದ ಗೂಡಿನಿಂದ ಅವರ ಆತ್ಮ ಹಾರಿ ವಿಶ್ವದಲ್ಲಿ ಐಕ್ಯವಾಯಿತು. ವಿರಾಡ್ರೂಪಾಯಿತು. ಶ್ರೀ ಶಾರದಾದೇವಿಯವರಿಗೆ ನಾಶವೆಂಬುದಿಲ್ಲ. ನಿರ್ವಿಕಲ್ಪ ಸಮಾಧಿಯ ಸವಿಯನ್ನು ಕೂಡ ಒತ್ತಟ್ಟಗಿಟ್ಟು ಭವಬಂಧನದಲ್ಲಿ ಎಲ್ಲಿಯವರೆಗೆ ಜೀವಿಗಳು ಸಿಕ್ಕಿ ನರಳುತ್ತಿರುವರೊ ಅಲ್ಲಿಯ ವರೆವಿಗೂ ನಮ್ಮ ಉದ್ಧಾರಕ್ಕಾಗಿ ಆ ಮಹಾ ತಾಯಿಯ ಎದೆ ತಲ್ಲಣಿಸುತ್ತಿರುವುದು. ನಮ್ಮನ್ನು ಪಾಪ ಕೂಪದಿಂದ ಮೇಲೆತ್ತಲು ತವಕಪಡುತ್ತಿರುವುದು. ನಮಗೆ ಇಂದು ಬೇಕಾಗಿರುವುದು ಶ್ರದ್ಧೆ. ಅದಿದ್ದರೆ ನಮ್ಮನ್ನು ಉದ್ಧರಿಸುವ ಶಕ್ತಿ ಕಾದು ಕುಳಿತಿದೆ.



# ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು
## ಮೈಸೂರು

| | | | |
|---|---|---|---|
| ಶ್ರೀ ರಾಮಕೃಷ್ಣ ಉಪದೇಶಾಮೃತ .... .... | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) .... .... | ೩ | ೮ | ೦ |
| ಪತ್ರಮಾಲೆ .... .... .... | ೩ | ೦ | ೦ |
| ಶ್ರೀ ಶಾರದಾದೇವಿ .... .... .... | ೨ | ೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ .... .... | ೨ | ೮ | ೦ |
| ಶ್ರೀ ರಾಮಕೃಷ್ಣ .... .... .... | ೦ | ೧೨ | ೦ |
| ರಾಜಯೋಗ .... .... .... | ೨ | ೧೦ | ೦ |
| ಕರ್ಮಯೋಗ .... .... .... | ೧ | ೮ | ೦ |
| ಭಕ್ತಿಯೋಗ .... .... .... | ೧ | ೦ | ೦ |
| ತ್ರಿವೇಣಿ (ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ, ಶಾರದಾದೇವಿ ಸಂಕ್ಷಿಪ್ತ ಜೀವನ) .... | ೧ | ೦ | ೦ |
| ಶ್ರೀ ಗುರುದೇವರ ವಚನ .... .... .... | ೧ | ೦ | ೦ |
| ಬ್ರಹ್ಮಾನಂದ ವಚನಸುಧೆ .... .... | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ .... .... | ೧ | ೪ | ೦ |
| ಪರಿವ್ರಾಜಕ .... .... .... | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ .... .... | ೧ | ೪ | ೦ |
| ವಿದ್ಯಾಭ್ಯಾಸ .... .... .... | ೦ | ೧೦ | ೦ |
| ಹಿಂದೂ ಧರ್ಮಸಾರ .... .... .... | ೦ | ೧೦ | ೦ |
| ವರ್ತಮಾನ ಭಾರತ .... .... .... | ೦ | ೧೦ | ೦ |
| ವಿವೇಕವಾಣಿ .... .... .... | ೦ | ೧೦ | ೦ |
| ನನ್ನ ಗುರುದೇವ .... .... .... | ೦ | ೮ | ೦ |
| ಚಿಕಾಗೋ ಉಪನ್ಯಾಸ .... .... .... | ೦ | ೬ | ೦ |

| | | | |
|---|---|---|---|
| ಆರತಿ | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ | ೦ | ೪ | ೦ |
| ಈಶ್ವರಾನುರಾಗ | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ | ೦ | ೪ | ೦ |
| ಭಾರತ ಮಹಿಳೆ | ೦ | ೪ | ೦ |
| ಕರ್ಮರಹಸ್ಯ | ೦ | ೪ | ೦ |
| ಸಾಧನ | ೦ | ೪ | ೦ |
| ಮುಮುಕ್ಷು ಲಕ್ಷಣ | ೦ | ೪ | ೦ |
| ಅಮರನಾಥ ಯಾತ್ರೆ | ೧ | ೦ | ೦ |
| Drig Drishya Viveka | 2 | 0 | 0 |
| Mandukya Upanishad with Gouda-pada karika | 8 | 0 | 0 |
| ಶ್ರೀ ರಾಮಕೃಷ್ಣ ಲೀಲಾಪ್ರಸಂಗ | ೧ | ೮ | ೦ |
| ದಿವ್ಯವಾಣಿ | ೧ | ೦ | ೦ |
| ನಾಗ ಮಹಾಶಯ | ೦ | ೧೨ | ೦ |
| ಶ್ರೀ ರಾಮಕೃಷ್ಣ ವಚನಾಮೃತ ೧ | ೧ | ೦ | ೦ |
| ,, ೨ | ೧ | ೦ | ೦ |
| ಶ್ರೀ ರಾಮಕೃಷ್ಣ | ೦ | ೮ | ೦ |
| ಜ್ಯೋತಿ | ೦ | ೮ | ೦ |